ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೫೪
ಸಾಹಿತ್ಯಮಾಲೆ - ೫೧

ಪ್ರಧಾನ ಸಂಪಾದಕರು
**ಡಾ. ಪ್ರಧಾನ್ ಗುರುದತ್ತ**

ಸಂಪಾದಕರು
**ಡಾ. ಪಿ. ಎಸ್. ರಾಮಾನುಜಂ**

# ಕಥಾಸರಿತ್ಸಾಗರ

**(ಸಂಪುಟ ೪)**

**(ಲಂಬಕ: ಮದನಮಂಚುಕಾ)**

# ಕಥಾಸರಿತ್ಸಾಗರ

(ಸಂಪುಟ ೪)

(ಲಂಬಕ: ಮದನಮಂಚುಕಾ)

ಸಂಸ್ಕೃತ ಮೂಲ

**ಸೋಮದೇವ ಭಟ್ಟ**

ಕನ್ನಡ ಅನುವಾದ

**ಕೆ.ಜಿ. ಕೃಷ್ಣಮೂರ್ತಿ**

**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ**

ಕನ್ನಡ ಭವನ, ಜೆಸಿ. ರಸ್ತೆ ಬೆಂಗಳೂರು – ೫೬೦ ೦೦೨

**Kathā Sarit-sāgara (Vol. 4)** by **Somadeva Bhatta**, consisting of Book 6 - Madanamanchuka; Kannada translation by **K. G. Krishna Murthy**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xxiv + 241; Price: Rs. 90/-.

©: ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮುದ್ರಣ : ೨೦೦೭
ಪುಟಗಳು : xxiv + ೨೪೧
ಬೆಲೆ : ರೂ. ೯೦/–
ಪ್ರತಿಗಳು : ೩೦೦

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೬೬೬೦

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೬೨೪

ಕರ್ನಾಟಕ ಸರ್ಕಾರ

**ಬಿ.ಎಸ್.ಯಡಿಯೂರಪ್ಪ**
ಮುಖ್ಯಮಂತ್ರಿಗಳು

ವಿಧಾನಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೪–೧೧–೨೦೦೮

# ಮುನ್ನುಡಿ

ರಾಷ್ಟ್ರಕವಿ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿತವಾಗಿರುವ 'ಶ್ರೀ ಕುವೆಂಪು ಭಾಷಾಭಾರತಿ'ಯ ಅಂಗವಾಗಿ ಕರ್ನಾಟಕ ಸರ್ಕಾರ ೨೦೦೫ರಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಸ್ಥಾಪಿಸಿತು. ನಮ್ಮ ನಾಡಿನಲ್ಲಿ ಅನುವಾದ ಕಾರ್ಯಚಟುವಟಿಕೆಗಳಿಗಾಗಿ ಅಕಾಡೆಮಿಯೊಂದನ್ನು ಸ್ಥಾಪಿಸಿದ ಮೊದಲ ರಾಜ್ಯ ಕರ್ನಾಟಕವೇ ಆಯಿತು ಎಂಬುದು ನಮಗೆ ಹೆಮ್ಮೆಯ ಸಂಗತಿಯೇ ಆಗಿದೆ. ಭಾರತೀಯ ಭಾಷೆಗಳ ನಡುವೆ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದು, ನಮ್ಮ ನಾಡು–ನುಡಿಗಳ ಹಿರಿಮೆ – ವೈಶಿಷ್ಟ್ಯಗಳನ್ನು ಇತರ ಭಾಷಾ–ಬಾಂಧವರಿಗೆ ಪರಿಚಯಿಸಿಕೊಡುವುದು, ಜಾಗತಿಕ ಮಹತ್ವದ ಕೃತಿಗಳನ್ನು ಕನ್ನಡಿಗರಿಗೆ ಪರಿಚಯಿಸಿ ಕೊಡುವುದು ಹಾಗೂ ಕನ್ನಡ ಸಾಹಿತ್ಯದ ಮಹತ್ವದ ಕೃತಿಗಳನ್ನು ಜಾಗತಿಕ ಮಹತ್ವದ ಇತರ ಭಾಷೆಗಳಿಗೆ ಅನುವಾದಿಸಿಕೊಡುವುದು ಅಕಾಡೆಮಿಯ ಸ್ಥಾಪನೆಯ ಮುಖ್ಯ ಉದ್ದೇಶವಾಗಿದೆ. ಇದಕ್ಕೆ ಪೂರಕವಾಗಿ ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಗಳಲ್ಲಿನ ಪ್ರಮುಖ ಕೃತಿಗಳನ್ನು ಕನ್ನಡಕ್ಕೆ ತರುವುದೂ ಅಕಾಡೆಮಿಯ ಕರ್ತವ್ಯವೇ ಆಗಿದೆ. ಹೀಗೆ ಅನುವಾದ ಸಾಹಿತ್ಯ ಅಕಾಡೆಮಿ ಅನೇಕ ಆಯಾಮಗಳಲ್ಲಿ ಕೆಲಸಮಾಡಬೇಕಾಗುತ್ತದೆ.

'ಶ್ರೀ ಕುವೆಂಪು ಭಾಷಾಭಾರತಿ'ಯ ಬಹುಮುಖ್ಯವಾದ ಚಟುವಟಿಕೆಗಳು ಸದ್ಯದಲ್ಲಿಯೇ ಆರಂಭಗೊಂಡು ಕರ್ನಾಟಕದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ದಿಕ್ಕು–ದೆಸೆಗಳನ್ನು ತೆರೆದು ತೋರಲಿವೆ ಎಂದು ನಂಬಿದ್ದೇನೆ. ಸ್ಥಾಪನೆಯಾದ ಕೆಲವೇ ವರ್ಷಗಳಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಈ ದಿಕ್ಕಿನಲ್ಲಿ ಗಣನೀಯವಾದ ಕಾರ್ಯವನ್ನು ಮಾಡಿ ಈಗಾಗಲೇ ೫೦ಕ್ಕೂ ಹೆಚ್ಚು ಗ್ರಂಥಗಳನ್ನು ಬಿಡುಗಡೆ ಮಾಡಿದ್ದು, ಅವು ಜನಮನ್ನಣೆಯನ್ನು ಗಳಿಸಿವೆ ಎಂಬುದು ಕರ್ನಾಟಕ ಸರ್ಕಾರಕ್ಕೆ ಸಂತೋಷದ ವಿಚಾರವೇ ಆಗಿದೆ. ಅನುವಾದ ಸಾಹಿತ್ಯ ಅಕಾಡೆಮಿ ಮುಂಬರುವ ವರ್ಷಗಳಲ್ಲಿ ಮತ್ತಷ್ಟು ಅರ್ಥಪೂರ್ಣವಾದ ಚಟುವಟಿಕೆಗಳನ್ನು ಹಮ್ಮಿಕೊಂಡು ವಿಶ್ವದ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಒದಗಿಸಿಕೊಡುವ ಕೆಲಸವನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಗಳಲ್ಲಿನ ಬೆಳವಣಿಗೆಯನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಕೆಲಸಗಳನ್ನು ಮಾಡಲಿ ಎಂದು ಹಾರೈಸುತ್ತೇನೆ. ಇಂಥ ಅರ್ಥಪೂರ್ಣವಾದ ಚಟುವಟಿಕೆಗಳಿಗೆ ಕರ್ನಾಟಕ ಸರ್ಕಾರದ ಬೆಂಬಲ ಎಂದೂ ಇದ್ದೇ ಇರುತ್ತದೆ. ಅಕಾಡೆಮಿಯ ಪ್ರಕಟಣೆಗಳನ್ನು ಕರ್ನಾಟಕದ ಜನತೆ ಸಹೃದಯತೆಯಿಂದ ಇನ್ನು ಮುಂದೆಯೂ ಸ್ವಾಗತಿಸಿ ಪ್ರೋತ್ಸಾಹ ನೀಡುತ್ತದೆ ಎಂದು ಭಾವಿಸಿದ್ದೇನೆ.

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಕರ್ನಾಟಕ ಸರ್ಕಾರ

**ಶ್ರೀ ಸುಬೀರ್ ಹರಿಸಿಂಗ್,** ಭಾ.ಆ.ಸೇ.
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ವಿಕಾಸಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೪–೧೦–೨೦೦೮

## ಶುಭಾಕಾಂಕ್ಷೆ

ಶ್ರೀ ಕುವೆಂಪು ಭಾಷಾಭಾರತಿಯ ಅಂಗವಾಗಿ ಕರ್ನಾಟಕ ಸರ್ಕಾರ ಅಸ್ತಿತ್ವಕ್ಕೆ ತಂದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕೆಲವೇ ವರ್ಷಗಳ ಅವಧಿಯಲ್ಲಿ ಗಮನಾರ್ಹವಾದ ಕೆಲಸವನ್ನು ಮಾಡಿದೆ ಎಂಬುದನ್ನು ಕರ್ನಾಟಕದ ಜನತೆ ಈಗಾಗಲೇ ಗಮನಿಸಿ ತನ್ನ ಮೆಚ್ಚುಗೆಯನ್ನು ಸೂಚಿಸುತ್ತಾ ಬಂದಿದೆ ಎಂಬುದು ಸಂತೋಷಕರ ಸಂಗತಿಯೇ ಆಗಿದೆ. ಇತ್ತ ಕೇಂದ್ರ ಸರ್ಕಾರ "ರಾಷ್ಟ್ರೀಯ ಜ್ಞಾನ ಆಯೋಗ'ವನ್ನು ಸ್ಥಾಪಿಸಿದ್ದು, ಅದರ ಅಂಗವಾಗಿ "ರಾಷ್ಟ್ರೀಯ ಅನುವಾದ ಮಿಷನ್'ನ ಕಾರ್ಯಚಟುವಟಿಕೆಗಳು ಆರಂಭವಾಗಲಿರುವುದು ನಮ್ಮ ನಾಡಿನ ಇತಿಹಾಸದಲ್ಲಿ ಹೊಸ ಶಕೆಯನ್ನು ಪ್ರಾರಂಭಿಸಲಿದೆ ಎಂದು ನಾನು ನಂಬಿದ್ದೇನೆ. ಈ ದಿಕ್ಕಿನಲ್ಲಿ ಮೊದಲ ಹೆಜ್ಜೆಯನ್ನಿರಿಸಿದ ಗೌರವ ಕರ್ನಾಟಕದ್ದಾಗಿದೆ ಎಂಬುದು ನಮಗೆ ಸಂತೋಷದ ಹಾಗೂ ಗೌರವದ ವಿಚಾರವೇ ಆಗಿದೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಈಗಾಗಲೇ ಹಲವಾರು ಮಹತ್ವದ ಯೋಜನೆಗಳನ್ನು ಕೈಗೊಂಡಿದೆ. ಅವುಗಳಲ್ಲಿ ಮುಖ್ಯವಾಗಿರುವುದೆಂದರೆ ವಿಲ್ ಡ್ಯೂರಾಂಟ್ ಅವರ "ನಾಗರಿಕತೆಯ ಕಥೆ' ಸಂಪುಟಗಳ ಕನ್ನಡ ಆವೃತ್ತಿಯನ್ನು ಹೊರತರುತ್ತಿರುವುದು. ಭಾರತೀಯ ಭಾಷೆಗಳಲ್ಲಿಯೇ ಮೊದಲ ಬಾರಿಗೆ ಇಂಥ ಯೋಜನೆಯನ್ನು ಹಮ್ಮಿಕೊಂಡಿರುವ ಹಿರಿಮೆಯೂ ಕರ್ನಾಟಕದ್ದಾಗಿದೆ. ವಿವಿಧ ಭಾಷಾ ಸಾಹಿತ್ಯಗಳ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಹೊರತರುವುದರ ಜೊತೆಗೆ, ಕನ್ನಡದ ಮಹತ್ವದ ಕೃತಿಗಳನ್ನು ರಾಷ್ಟ್ರೀಯ ಮತ್ತು ಜಾಗತಿಕ ಸ್ತರದಲ್ಲಿ ಪರಿಚಯಿಸಿಕೊಡುವ ವಿಶಿಷ್ಟ ಕಾರ್ಯಕ್ರಮಗಳನ್ನೂ ಈ ಸಂಸ್ಥೆ ಕೈಗೊಳ್ಳಬೇಕಾಗಿದೆ. ಇದರ ಜೊತೆಗೆ ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಕ್ಕೂ ಮಹತ್ವದ ಕೊಡುಗೆಯನ್ನು ನೀಡುವ ಉದ್ದೇಶದಿಂದ ಜೆ.ಡಿ.ಬರ್ನಾಲ್ ಅವರ "ವಿಜ್ಞಾನದ ಇತಿಹಾಸ' (Science in History)ದ ನಾಲ್ಕು ಸಂಪುಟಗಳನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರದ ನೂರಾರು ಮಹತ್ವದ ಕೃತಿಗಳನ್ನು ತರುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ ಎಂಬುದು ವೈಯಕ್ತಿಕವಾಗಿಯೂ ನನಗೆ ವಿಶೇಷ ಸಂತೋಷದ ಸಂಗತಿಯೇ ಆಗಿದೆ. ಇಂಥ ಮಹತ್ವದ ಯೋಜನೆಗಳ ಮೂಲಕ ಶ್ರೀ ಕುವೆಂಪು ಭಾಷಾಭಾರತಿ ಮತ್ತು ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕರ್ನಾಟಕದ ಜನತೆಗೆ ಸ್ಮರಣೀಯ ಸೇವೆಯನ್ನು ಸಲ್ಲಿಸುವಂತಾಗಲಿ ಎಂದು ಹಾರೈಸುತ್ತೇನೆ. ಈ ಬಗೆಯ ಬಹುಮುಖವಾದ ಕಾರ್ಯಚಟುವಟಿಕೆಗಳನ್ನು ಕರ್ನಾಟಕದ ಜನತೆ ಮುಕ್ತ ಹೃದಯದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

**(ಶ್ರೀ ಸುಬೀರ್ ಹರಿಸಿಂಗ್, ಭಾ.ಆ.ಸೇ.,)**

ಕರ್ನಾಟಕ ಸರ್ಕಾರ

ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – ೫೬೦ ೦೦೨

**ಶ್ರೀ ಮನು ಬಳಿಗಾರ್**
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ದಿನಾಂಕ : ೦೪–೧೦–೨೦೦೮

## ಪ್ರಾಸ್ತಾವಿಕ ನುಡಿ

ಕರ್ನಾಟಕ ಸರ್ಕಾರ ೨೦೦೫ರಲ್ಲಿ ಸ್ಥಾಪಿಸಿದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕಳೆದ ಮೂರು ವರ್ಷಗಳ ಅಲ್ಪಾವಧಿಯಲ್ಲಿ ಮಾಡಿರುವ ಕಾರ್ಯವನ್ನು ನಾನು ಗಮನಿಸುತ್ತ ಬಂದಿದ್ದೇನೆ. ಅನುವಾದ ಸಂಬಂಧವಾದ ಕಮ್ಮಟಗಳು ಮತ್ತು ತರಬೇತಿ ಕಾರ್ಯಕ್ರಮಗಳ ಜೊತೆಗೆ, ಈಗ್ಗೆ ಕೆಲವು ತಿಂಗಳುಗಳ ಹಿಂದಷ್ಟೇ ಈ ಅಕಾಡೆಮಿ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ, ಒಮ್ಮೆಲೇ ಐವತ್ತಮೂರು ಗ್ರಂಥಗಳನ್ನು ಬಿಡುಗಡೆ ಮಾಡಿದ್ದು, ನನಗೆ ಆಶ್ಚರ್ಯ–ಆನಂದಗಳನ್ನುಂಟುಮಾಡಿದೆ. ವಿವಿಧ ಭಾಷೆಗಳಲ್ಲಿನ ಉತ್ಕೃಷ್ಟ ಸಾಹಿತ್ಯ ಕೃತಿಗಳನ್ನಲ್ಲದೆ, ವೈದ್ಯಕೀಯ, ಕಾನೂನುಶಾಸ್ತ್ರ ಮೊದಲಾದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನೂ ಹೊರತರುತ್ತಿರುವುದು ಈ ಅಕಾಡೆಮಿಯ ಕಾರ್ಯವ್ಯಾಪ್ತಿಯ ವೈವಿಧ್ಯ ಮತ್ತು ಹೊಸ ಆಯಾಮಗಳ ಪ್ರತೀಕವೇ ಆಗಿದೆ ಎಂದು ನಂಬಿದ್ದೇನೆ. ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರದ ೧೦೦ಕ್ಕೂ ಹೆಚ್ಚು ಮೇರು ಕೃತಿಗಳನ್ನು ಹೊರತರುವ ಕಾರ್ಯವನ್ನು ಅದು ಹಮ್ಮಿಕೊಂಡಿದೆ ಎಂಬುದು ನನಗೆ ವಿಶೇಷ ಸಂತೋಷವನ್ನುಂಟುಮಾಡಿದೆ. ಇವೆಲ್ಲಕ್ಕೂ ತಲೆವಣಿಯಾಗಿ ವಿಲ್ ಡ್ಯೂರಾಂಟ್ ಅವರ 'ನಾಗರಿಕತೆಯ ಕಥೆ'ಯ ಸಂಪುಟಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದ್ದು, ಈಗಾಗಲೇ ಆದರ್ಶಪ್ರಾಯವಾದ ರೀತಿಯಲ್ಲಿ ಅದರ ಮೊದಲ ಸಂಪುಟವನ್ನು ಹೊರತಂದಿರುವುದು ನಮ್ಮ ನಾಡಿಗೇ ಗೌರವಪ್ರಾಯವಾದ ಸಂಗತಿ ಎಂದು ನಾನು ಭಾವಿಸಿ, ಇದರ ಮುಂದಿನ ಸಂಪುಟಗಳೂ ಶೀಘ್ರವಾಗಿ ಹೊರಬರಲಿ ಎಂದು ಹಾರೈಸುತ್ತೇನೆ. ಹಾಗೆಯೇ ಇದಕ್ಕಾಗಿ ಅನುವಾದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಪ್ರಧಾನ್ ಗುರುದತ್ತ ಅವರನ್ನು ಹಾಗೂ ಅವರ ಸಿಬ್ಬಂದಿಯನ್ನು ಹೃದಯಾರೆ ಅಭಿನಂದಿಸುತ್ತೇನೆ.

ಅಕಾಡೆಮಿ ಚರಿತ್ರಾರ್ಹವಾದ ಇನ್ನೂ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳಲಿದೆ – ಉದಾ : ಜೆ.ಡಿ.ಬರ್ನಾಲ್ ಅವರ 'ಸೈನ್ ಇನ್ ಹಿಸ್ಟರಿ'ಯ ಸಂಪುಟಗಳ ಅನುವಾದ – ಎಂದು ನನಗೆ ತಿಳಿದು ಬಂದಿದೆ. ಅಕಾಡೆಮಿಯ ಇಂಥ ಕೆಲಸ–ಕಾರ್ಯಗಳು ಕನ್ನಡಿಗರಿಗೆ ಪ್ರಿಯವಾಗುತ್ತವೆಂದೂ ನಂಬಿದ್ದೇನೆ. ಇಂಥ ಕಾರ್ಯಗಳಿಗೆ ಜನತೆ ಮತ್ತು ಸರ್ಕಾರ ಖಂಡಿತವಾಗಿಯೂ ಬೆಂಬಲವಾಗಿ ನಿಲ್ಲುತ್ತವೆಂಬುದರಲ್ಲಿಯೂ ಅನುಮಾನವಿಲ್ಲ. ಭಾಷಾಂತರಕ್ಕೆ ಉಜ್ವಲ ಭವಿಷ್ಯವಿರುವ ಲಕ್ಷಣಗಳು ಗೋಚರಿಸುತ್ತಿರುವ ಹಿನ್ನಲೆಯಲ್ಲಿ ಅಕಾಡೆಮಿಯ ಕೆಲಸ–ಕಾರ್ಯಗಳು ಇನ್ನೂ ಅತಿಶಯವಾಗಿ, ನಾಡು–ನುಡಿಗಳಿಗೆ ಪ್ರೇರಕವೂ, ಪೋಷಕವೂ ಆಗುವಂತೆ ಮುಂದುವರಿಯಲಿ ಎಂದು ಹಾರೈಸುತ್ತೇನೆ.

ಮನು ಬಳಿಗಾರ್

**(ಶ್ರೀ ಮನು ಬಳಿಗಾರ್)**

# ಪರಿಚಯ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ|| ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ|| ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು–ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು–ಕೊಡೆಯ ಕಾರ್ಯಕ್ರಮಗಳು ಹೆಚ್ಚು–ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ–ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ–ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ. ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದು ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ. ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ. ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ. ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು

ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ–ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್–ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ॥ ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳು ಹಾಗೂ ಕನ್ನಡ ಮತ್ತು ಸಾಹಿತ್ಯ ಇಲಾಖೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಿರುವ ಶ್ರೀ ಬಿ.ಎಸ್.ಯಡಿಯೂರಪ್ಪ ಅವರಿಗೆ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ–ಸಹಕಾರ–ಮಾರ್ಗದರ್ಶನ ನೀಡುತ್ತಿರುವ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಸುಬೀರ್ ಹರಿಸಿಂಗ್ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಈಗಿನ ನಿರ್ದೇಶಕರಾಗಿರುವ ಶ್ರೀ ಮನು ಬಳಿಗಾರ್ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ

ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೫೨, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್‌ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು.

ಇನ್ನೊಂದು ಮಾತು : ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ *'The Ocean of Story'* ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಹಿಂದಿನ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಂಡಿರುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ.

ಈ ಲಂಬಕವನ್ನು ಅನುವಾದಿಸಿಕೊಟ್ಟಿರುವ ಪ್ರೊ॥ ಕೆ.ಜಿ. ಕೃಷ್ಣಮೂರ್ತಿ ಅವರಿಗೆ ನಾನು ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸಬಯಸುತ್ತೇನೆ.

ಮೊದಲ ಕಂತಿನಲ್ಲಿ, 'ಕಥಾಸರಿತ್ಸಾಗರ'ದ ಮೂರು ಸಂಪುಟಗಳನ್ನು ಬಿಡುಗಡೆ ಮಾಡಲಾಗಿತ್ತು. ಈ ಎರಡನೆಯ ಕಂತಿನಲ್ಲಿ ಇನ್ನೆರಡು ಸಂಪುಟಗಳನ್ನು – 'ಮದನ ಮಂಚುಕಾ' ಮತ್ತು 'ರತ್ನಪ್ರಭಾ' ಲಂಬಕಗಳನ್ನು ಬಿಡುಗಡೆ ಮಾಡಲಾಗುತ್ತಿದೆ. ಉಳಿದ ಸಂಪುಟಗಳನ್ನು ಮುಂದಿನ ಒಂದೆರಡು ವರ್ಷಗಳಲ್ಲಿ ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇನೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ ಮೆ॥ ಮಯೂರ ಪ್ರಿಂಟ್ ಆಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

**ಪ್ರಧಾನ್ ಗುರುದತ್ತ**
ಅಧ್ಯಕ್ಷ

# ಪ್ರಸ್ತಾವನೆ

ಮದನಮಂಚುಕಾ ಎಂಬ ಈ ಆರನೆಯ ಲಂಬಕದಲ್ಲಿ ಎಂಟು ತರಂಗಗಳಿದ್ದು ಅವುಗಳಲ್ಲಿ ಒಟ್ಟು ೧೫೨೧ ಶ್ಲೋಕಗಳಿವೆ.

ಇದರಲ್ಲಿ ನರವಾಹನದತ್ತನು ಎಂಟನೆಯ ವರ್ಷವನ್ನು ದಾಟಿದಂದಿನಿಂದ ಅವನು ಮದನಮಂಚುಕೆಯನ್ನು ವಿವಾಹವಾಗುವವರೆಗಿನ ಕಾಲಾವಧಿಯು ಕಥೋಪಕಥೆಗಳಿಂದ ರಂಜಿತವಾಗಿ ವರ್ಣಿತವಾಗಿದೆ. ಈ ಲಂಬಕಕ್ಕೆ ಶೀರ್ಷಿಕೆಯನ್ನೇ ಕೊಟ್ಟಿರುವ ಮದನಮಂಚುಕೆಯೂ ಈ ಲಂಬಕದ ಕೊನೆಯಲ್ಲಿ ಬರುವ ಪಾತ್ರವಾದರೂ ನರವಾಹನದತ್ತನ ಜೀವಿತದ ಅವಿಭಾಜ್ಯ ಭಾಗವಾಗಿ ಮುಖ್ಯತ್ವವನ್ನು ಅವಳ ಪಾತ್ರ ಪಡೆಯುತ್ತದೆ. ಈ ಪಾತ್ರವು ಬರುವುದರೊಳಗೆ ಈ ಲಂಬಕದಲ್ಲಿ ಅನೇಕ ಉಪಕಥೆಗಳು ಬಂದು ದರ್ಶನ, ರಾಜನೀತಿ, ಕೌಟುಂಬಿಕ ಸಂಬಂಧಗಳು, ಸ್ನೇಹ, ಶೃಂಗಾರ, ವಿನೋದ, ನೀತಿ ಮುಂತಾದವುಗಳೆಲ್ಲ ಅನಾವರಣಗೊಳ್ಳುತ್ತವೆ. ಒಂದೊಂದು ತರಂಗವೂ ಒಂದೊಂದು ನೀತಿ ಅಥವಾ ಸಿದ್ಧಾಂತವನ್ನು ಕಥೆಗಳ ಮೂಲಕ ಪ್ರತಿಪಾದಿಸುತ್ತದೆ.

ಮೊದಲ ತರಂಗದಲ್ಲಿ ವತ್ಸರಾಜನ ಮಗನಾದ ನರವಾಹನದತ್ತನು ಎಂಟು ವರ್ಷಗಳನ್ನು ದಾಟಿ ಬೆಳೆದು ಯೌವನದಲ್ಲಿ ಕಾಲಿರಿಸುತ್ತಿರುವಂತೆಯೇ, ವಿತಸ್ತಾ ನದಿಯ ದಡದಲ್ಲಿರುವ ತಕ್ಷಶಿಲಾನಗರದ ರತ್ನದತ್ತನೆಂಬ ವರ್ತಕಪುತ್ರನ ಕತೆ ಆರಂಭವಾಗುತ್ತದೆ. ವಿತಸ್ತೆಯಲ್ಲಿ ಬೀಳುತ್ತಿದ್ದ ಆ ನಗರಿಯ ಪ್ರತಿಬಿಂಬವು ಅದರ ಶೋಭೆಯನ್ನು ನೋಡಲು ಮೇಲೆದ್ದು ಬಂದ ಪಾತಾಳನಗರಿಯಂತಿತ್ತೆಂದು ಕವಿಯು ವರ್ಣಿಸುತ್ತಾನೆ. ಆ ಪಟ್ಟಣದಲ್ಲಿದ್ದ ಬೌದ್ಧವಿಹಾರಗಳು ತನಗೆ ಸಮಾನವಾದ ಬೇರೆ ಪಟ್ಟಣವೇ ಇಲ್ಲ ಎಂದು ಗರ್ವದಿಂದ ಹುಟ್ಟಿದ ಕೋಡುಗಳಂತಿದ್ದವು ಎಂದು ಕವಿ ಸುಂದರವಾಗಿ ಕಲ್ಪಿಸುತ್ತಾನೆ. ಆ ನಗರದ ರಾಜ ಕಳಿಂಗದತ್ತನೆಂಬ ಬೌದ್ಧ ಧರ್ಮಾವಲಂಬಿ. ಆ ರಾಜ್ಯದಲ್ಲಿ ವಿತಸ್ತಾದತ್ತನೆಂಬ ವ್ಯಾಪಾರಿಯಿದ್ದು ಅವನು ಬೌದ್ಧರ್ಮವನ್ನು ಅನುಸರಿಸುತ್ತಿದ್ದುದರ ಬಗ್ಗೆ ಅವನ ಮಗ ರತ್ನದತ್ತನಿಗೆ ಕೋಪವಿತ್ತು, ಈ ಬಗ್ಗೆ ಅವನು ತಂದೆಯನ್ನು ನಿಂದಿಸುತ್ತಿದ್ದುದರಿಂದ ತಂದೆಯು ಅವನನ್ನು ರಾಜನ ಬಳಿಗೆ ಕರೆದೊಯ್ಯುತ್ತಾನೆ. ಮೊದಲು ಅವನಿಗೆ ಮರಣದಂಡನೆ ವಿಧಿಸಿ ಮೃತ್ಯುಭಯ ಹೇಗಿರುತ್ತದೆಯೆಂಬುದು ರತ್ನದತ್ತನ ಅನುಭವಕ್ಕೆ ಬರುವಂತೆ ಮಾಡಿ ನಂತರ ಅವನ ಪ್ರಾರ್ಥನೆಯಂತೆ ಮೋಕ್ಷೋಪದೇಶ ಮಾಡಲು ನಿರ್ಧರಿಸಿ ತಲೆಯ ಮೇಲೆ ಎಣ್ಣೆಗಡಿಗೆ ಹೊತ್ತು ಒಂದು ತೊಟ್ಟೂ ಬೀಳದಂತೆ ಊರೆಲ್ಲ ಸುತ್ತಿ ಬರಬೇಕೆಂದು ವಿಧಿಸುತ್ತಾನೆ. ಒಂದು ತೊಟ್ಟು ಕೆಳಕ್ಕೆ ಬಿದ್ದರೆ ಅವನಿಗೆ ಅಲ್ಲೇ ತಲೆದಂಡ. ಇದಕ್ಕೆ ಹೆದರಿ ಗಡಿಗೆಯ ಮೇಲೆ ಗಮನವಿಟ್ಟು ಊರು ಸುತ್ತಿ ಬರುತ್ತಾನೆ. ಇದರಿಂದ ಅವನಿಗೆ ಅವಧಾನದ ಬೆಲೆ ತಿಳಿಯುತ್ತದೆ. ಆಗ ರಾಜನು ಅವನಿಗೆ ಮೋಕ್ಷೋಪದೇಶ ಮಾಡುತ್ತಾನೆ. ಗಡಿಗೆಯ ಮೇಲೆ ಅವಧಾನವಿಟ್ಟಂತೆ ಪರಾನುಧ್ಯಾನ ಮಾಡು. ಏಕಾಗ್ರೋ ಹಿ ಬಹಿರ್ವೃತ್ತಿನಿವೃತ್ತಸ್ತತ್ವಮೀಕ್ಷತೇ. ಏಕಾಗ್ರತೆಯುಳ್ಳವನು ಬಾಹ್ಯವೃತ್ತಿಯಿಂದ ದೂರನಾಗಿ ತತ್ವವನ್ನು

ಕಾಣುತ್ತಾನೆ. ತತ್ವದರ್ಶನ ಉಳ್ಳವನು ಮತ್ತೆ ಕರ್ಮಪಾಶದಲ್ಲಿ ಬೀಳುವುದಿಲ್ಲ. ಇದು ದರ್ಶನಸಾರ. ಇದೇ ಈ ಕತೆಯಲ್ಲಿ ಪ್ರತಿಪಾದಿತವಾಗುವ ತತ್ವ.

ಇದಕ್ಕೆ ಮೊದಲು ವಿತಸ್ತಾದತ್ತನು ತನ್ನ ಮಗನಿಗೆ ತಾನು ಅನುಸರಿಸುತ್ತಿರುವ ಬೌದ್ಧಧರ್ಮದ ಪರವಾಗಿ ಹೇಳುವ ಮಾತುಗಳಲ್ಲಿ ಧರ್ಮದ ತಿರುಳನ್ನೇ ಕಾಣಬಹುದು. ಅದರಲ್ಲಿರುವುದು ಸಮನ್ವಯ ದೃಷ್ಟಿ. ಧರ್ಮಕ್ಕೆ ಏಕರೂಪತೆ ಇಲ್ಲ. ಅದು ಒಂದೇ ಸ್ವರೂಪದ್ದಲ್ಲ. ಲೋಕೋತ್ತರ ಧರ್ಮವೇ ಬೇರೆ. ಸಾರ್ವಲೌಕಿಕ ಧರ್ಮವೇ ಬೇರೆ. ರಾಗದ್ವೇಷಗಳಿಲ್ಲದಿರುವುದೇ ಬ್ರಾಹ್ಮಣ್ಯ. ಸತ್ಯ, ಪ್ರಾಣಿದಯೆ, ಜಾತಿಗಳ ಕಲಹವಿಲ್ಲದಿರುವುದು, ಎಲ್ಲ ಪ್ರಾಣಿಗಳಿಗೂ ಅಭಯ ನೀಡುವುದು, ಈ ಅಂಶಗಳಿರುವ ಸೌಗತಧರ್ಮವನ್ನು ದೂಷಿಸುವುದು ಏಕೆ? ಎಲ್ಲಾ ಜೀವಿಗಳಿಗೂ ಅಭಯಪ್ರದಾನ ಮಾಡುವ ಅಹಿಂಸೆಯೇ ಪ್ರಧಾನವಾಗಿ ಮೋಕ್ಷದಾಯಕವಾದ ಬೌದ್ಧದರ್ಶನದಲ್ಲಿ ಆಸಕ್ತಿಯಿದ್ದರೆ ಅದು ಹೇಗೆ ಅಧರ್ಮವಾದೀತು, ಎನ್ನುವ ವಿತಸ್ತಾದತ್ತನ ಮಾತಿನಲ್ಲಿ ಬೌದ್ಧವೈದಿಕ ಮತಾನುಯಾಯಿಗಳ ನಡುವಣ ವೈಚಾರಿಕ ಸಂಘರ್ಷವನ್ನೂ ಕವಿಯು ಅವುಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸಿರುವುದನ್ನೂ ಕಾಣಬಹುದು.

ಮುಂದೆ ಕಳಿಂಗದತ್ತ ಹಾಗೂ ರಾಣಿ ತಾರಾದತ್ತೆಯ ಕತೆಗಳು ಒಂದೊಂದೂ ಒಂದೊಂದು ನೀತಿಯ ಪ್ರತಿಪಾದನೆಯನ್ನು ಒಂದೆರಡು ಮಾತುಗಳಲ್ಲಿ ಮಾಡುತ್ತಾ ಸಾಗುತ್ತವೆ. ಕರ್ಮದ ಬಂಧನದ ಬಗ್ಗೆ ಅನೇಕ ಪ್ರತಿಪಾದನೆಗಳು ಬಂದು ಜನನ ಮರಣಗಳಿಗೂ ಕರ್ಮಕ್ಕೂ ಇರುವ ನಿಕಟ ಸಂಬಂಧವನ್ನು ತೋರಿಸುತ್ತವೆ. ಜೀವಿಗಳು ವಿಚಿತ್ರವಾದ ಸದಸತ್ಕರ್ಮಗಳಿಗೆ ಬದ್ಧರಾಗಿ ಶುಭಾಶುಭಫಲಗಳನ್ನು ಪಡೆಯಲು ಮೂರೂ ಲೋಕಗಳಲ್ಲಿ ಸಂಚರಿಸುತ್ತಾರೆ ಎಂದು ಕಳಿಂಗದತ್ತನು ಹೇಳಿದರೆ ತಾರಾದತ್ತೆಯು ಅದನ್ನು ಅನುಮೋದಿಸುತ್ತಾ ಕರ್ಮೈವ ಬಲವತ್ ಭೋಗದಾಯಿ ಶುಭಾಶುಭಂ, ಕರ್ಮವೇ ಬಲಿಷ್ಠ ಅದೇ ಶುಭಾಶುಭಫಲಗಳನ್ನು ನೀಡುವುದು ಎನ್ನುತ್ತಾಳೆ. ಕರ್ಮದ ಸಂಗಡವೇ ಕೋನ್ಯಥಾ ಕರ್ತುಂ ಶಕ್ತೋಹಿ ಭವಿತವ್ಯತಾಂ ಎಂದರೆ ವಿಧಿಯ ಬರಹವನ್ನು ತಿದ್ದಲು ಯಾರಿಗೆ ಸಾಧ್ಯ, ಎಂಬ ವಿಧಿಯ ಪಾತ್ರವೂ ಅನುಮೋದಿತವಾಗಿ ಉಲ್ಲೇಖವನ್ನು ಕಾಣುತ್ತದೆ.

ಮುಂದೆ ಕಳಿಂಗದತ್ತನು ಹೇಳುವ ಏಳು ಬ್ರಾಹ್ಮಣರ ಕಥೆ ಬರುತ್ತದೆ. ಧರ್ಮವನ್ನು ಶ್ರದ್ಧೆಯಿಂದ ಆಚರಿಸಿದರೆ ಹೆಚ್ಚು ಫಲವನ್ನು ನೀಡುತ್ತದೆ ಎಂಬುದಕ್ಕೆ ನಿದರ್ಶನ ಈ ಕಥೆ. ಅದರ ಕೊನೆಯಲ್ಲಿ ನೀರು ಹಾಕಿದ ಬೀಜಗಳು ಕೃಷಿಕರಿಗೆ ಫಲ ನೀಡುವಂತೆ ಶುದ್ಧ ಸಂಕಲ್ಪವೆಂಬ ನೀರಿನಿಂದ ಸಿಂಪಡಿಸಿದರೆ ಪುಣ್ಯವೆಂಬ ಬೀಜವು ಫಲವನ್ನು ನೀಡುತ್ತದೆ ಎಂದು ಹೇಳಿ ದುಷ್ಟಸಂಕಲ್ಪವು ಕೆಟ್ಟ ಫಲವನ್ನು ನೀಡುತ್ತದೆ ಎಂಬ ಸಿದ್ಧಾಂತಕ್ಕೆ ನಿದರ್ಶನವಾಗಿ ಬ್ರಾಹ್ಮಣ ಹಾಗೂ ಶ್ವಪಚರ ಕತೆಯನ್ನು ಹೇಳಲಾಗಿದೆ. ಅನಶನದ ತಪಸ್ಸನ್ನು ಮಾಡುತ್ತಿದ್ದ ಒಬ್ಬ ಬ್ರಾಹ್ಮಣ ಮತ್ತು ಒಬ್ಬ ಶ್ವಪಚ ಎದುರಿಗೆ ಬೆಸ್ತರು ಮೀನು ಹಿಡಿದು ತಿನ್ನುತ್ತಿದ್ದುದನ್ನು ನೋಡುತ್ತಾರೆ. ಅವರಲ್ಲಿ ಬ್ರಾಹ್ಮಣನು ಹಸಿವಿನಿಂದ ಕಂಗಾಲಾಗಿದ್ದು, ಈ ಬೆಸ್ತರು ಎಂಥಹ ಪುಣ್ಯ ಮಾಡಿದ್ದಾರೆ, ಪ್ರತಿದಿನ ಮೀನು ಹಿಡಿದು ತಿನ್ನುತ್ತಾರೆ ಎಂದುಕೊಂಡರೆ ಶ್ವಪಚನು ಈ ಪ್ರಾಣಿಹಿಂಸಕರಿಗೆ ಧಿಕ್ಕಾರ ಎಂದು ಕಣ್ಣುಮುಚ್ಚಿ ತಪಸ್ಸನ್ನು ತೀವ್ರಗೊಳಿಸುತ್ತಾನೆ. ಕಾಲಕ್ರಮೇಣ ಇಬ್ಬರೂ ಗತಿಸಿದ ಮೇಲೆ ಬ್ರಾಹ್ಮಣನು ಬೆಸ್ತನಾಗಿ ಹುಟ್ಟಿದರೆ ಶ್ವಪಚನು ರಾಜನ ಮನೆಯಲ್ಲಿ ಹುಟ್ಟುತ್ತಾನೆ. ಈ ಕಥೆಯನ್ನು ಹೇಳಿದ ಕಳಿಂಗದತ್ತನು

'ಇತಿಧರ್ಮತರೋರ್ಮೂಲಂ ಅಶುದ್ಧಂ ಯಸ್ಯ ಮಾನಸಂ
ಶುದ್ಧಂ ಯಸ್ಯ ಚ ತದ್ರೂಪಂ ಫಲಂ ತಸ್ಯ ನ ಸಂಶಯಃ'

ಅಂದರೆ ಧರ್ಮವೆಂಬ ವೃಕ್ಷಕ್ಕೆ ಮನಸ್ಸೇ ಬೇರು. ಶುದ್ಧ ಮತ್ತು ಅಶುದ್ಧವಾದ ಮನಸ್ಸುಗಳು ಅದಕ್ಕೆ ತಕ್ಕ ಫಲವನ್ನು ಪಡೆಯುತ್ತವೆ ಎಂದು ಮುಕ್ತಾಯಗೊಳಿಸಿ ವಿಕ್ರಮಸಿಂಹ ಮತ್ತು ಇಬ್ಬರು ಬ್ರಾಹ್ಮಣರ ಕಥೆಯನ್ನು ಹೇಳುತ್ತಾನೆ. ಆ ಕಥೆ ಪ್ರತಿಪಾದಿಸುವ ತತ್ವವೆಂದರೆ ಹೆಚ್ಚು ಸತ್ವದಿಂದ ಕೂಡಿದ ಕರ್ಮವು ಅದಕ್ಕೆ ತಕ್ಕ ಫಲವನ್ನು ಪಡೆಯುತ್ತದೆ. ಏಕೆಂದರೆ ಸಂಪತ್ತು ಸತ್ವವನ್ನು ಅನುಸರಿಸುತ್ತದೆ, 'ತತ್ವಮನುಧಾವಂತಿ ಸಂಪದಃ'.

ಈ ಕಥೆಯಲ್ಲಿ ಪ್ರಾಸಂಗಿಕವಾಗಿ ಬಾಲ್ಯಶಿಕ್ಷಣದ ಬಗ್ಗೆ ಒಂದು ಅನುಭವದ ಮಾತು ಬರುತ್ತದೆ. 'ಕಸ್ಯ ನೋಚ್ಛೃಂಖಲಂ ಬಾಲ್ಯಂ ಗುರುಶಾಸನವರ್ಜಿತಂ'. ಅಂದರೆ ಹಿರಿಯರ ಶಿಕ್ಷೆಯಿಲ್ಲದಂತಹ ಬಾಲ್ಯದಲ್ಲಿ ಸರಿಯಾದ ಶಿಕ್ಷಣವಿಲ್ಲದಿದ್ದರೆ ಯಾರು ತಾನೇ ಅಡ್ಡದಾರಿ ಹಿಡಿಯುವುದಿಲ್ಲ ಎಂದರ್ಥ. ಇದು ಈ ಕಥೆಯಲ್ಲಿ ತಂದೆತಾಯಂದಿರನ್ನು ಬಾಲ್ಯದಲ್ಲೇ ಕಳೆದುಕೊಂಡ ಒಬ್ಬನು ಹೇಳುವ ಮಾತು. ತಂದೆತಾಯಂದಿರಿದ್ದರೂ ಅವರು ಕೊಡುವ ಶಿಕ್ಷಣವಲ್ಲದೆ ಗುರುಕುಲದ ಅಥವಾ ಶಾಲೆಗಳ ಶಿಕ್ಷಣವೂ ಬಹಳ ಆವಶ್ಯಕ. ಒಟ್ಟಿನಲ್ಲಿ ಹಿರಿಯರ ಮಾರ್ಗದರ್ಶನ ಬಾಲ್ಯದಲ್ಲಿ ಬಹಳ ಆವಶ್ಯಕ.

ಇದೇ ಕಥೆಯ ಭರತವಾಕ್ಯ ಇದು. ಈ ಲೋಕದಲ್ಲಿ ಮಾಡಿದ ಮತ್ತು ಹಿಂದಿನ ಜನ್ಮದಲ್ಲಿ ಮಾಡಿದ ಶುಭಾಶುಭಕರ್ಮಗಳಿಗೆ ಅನುಗುಣವಾದ ಫಲಗಳು ದೇವಾಸುರರಾದಿಯಾಗಿ ಎಲ್ಲ ಸೃಷ್ಟಿಗಳಿಗೂ ಯಾವಾಗಲೂ ದೊರೆಯುತ್ತವೆ.

ಎರಡನೆಯ ತರಂಗವು ಕಳಿಂಗದತ್ತನ ರಾಣಿ ತಾರಾದತ್ತೆಗೆ ಹೆಣ್ಣು ಮಗು ಜನಿಸುವುದರಿಂದ ಪ್ರಾರಂಭವಾಗುತ್ತದೆ. ಹೆಣ್ಣು ಮಗು ಹುಟ್ಟಿದುದರಿಂದ ರಾಜನಿಗೆ ಅತೃಪ್ತಿ ದುಃಖಗಳು ಉಂಟಾಗುತ್ತವೆ. ಅವನು ಪುತ್ರಾಪೇಕ್ಷಿ. ದುಃಖದ ಗಂಟಾದ ಹೆಣ್ಣುಮಗುವೆಲ್ಲಿ, ಆನಂದವೇ ಮೂರ್ತಿವೆತ್ತ ಗಂಡುಮಗುವೆಲ್ಲಿ, ಎಂಬುದು ರಾಜನ ಅನಿಸಿಕೆ. ರಾಜರಿಗೆ ಗಂಡುಮಗುವಿದ್ದರೆ ರಾಜವಂಶ ಮುಂದುವರಿಯುತ್ತಿದುದರಿಂದ ಆ ರೀತಿಯ ಅಭಿಪ್ರಾಯ ಅವನಲ್ಲಿದ್ದಿತು. ಆದರೆ ಮುಂದೆ ಅವನಿಗೆ ಸಾಂತ್ವನ ಹೇಳುವ ವೃದ್ಧಬ್ರಾಹ್ಮಣನೊಬ್ಬನ ಮಾತು ಸ್ತ್ರೀಪರವಾದ ವಾದವಾಗಿ ಇಂದಿಗೆ ಹೆಚ್ಚು ಪ್ರಸ್ತುತವಾಗುತ್ತದೆ.

ರಾಜನ್ ಕಿಂ ಕನ್ಯಕಾರತ್ನಜನ್ಮನಾ ಪರಿತಪ್ಯಸೇ ?
ಪುತ್ರೇಭ್ಯೋಪ್ಯುತ್ತಮಾಃ ಕನ್ಯಾಃ ಶಿವಾಶ್ಚೇಹ ಪರತ್ರಚ.
ರಾಜ್ಯಲುಬ್ಧೇಷು ಕಾ ತೇಷು ಪುತ್ರೇಷ್ವಾಸ್ಥಾ ಮಹೀಯಸಾಂ
ಯೇ ಭಕ್ಷಯಂತಿ ಜನಕಂ ಬತ ಮರ್ಕಟಕಾ ಇವ

ಹೆಣ್ಣು ಹುಟ್ಟಿದ್ದಕ್ಕೆ ಪರಿತಾಪವೇಕೆ? ಹೆಣ್ಣುಮಕ್ಕಳು ಗಂಡುಮಕ್ಕಳಿಗಿಂತ ಉತ್ತಮರು. ಅವರು ಇಹಕ್ಕೂ ಪರಕ್ಕೂ ಒಳ್ಳೆಯದನ್ನೇ ಮಾಡುವವರು. ಮೀನುಗಳಂತೆ ತಂದೆಯನ್ನೇ ತಿನ್ನುವಂತಹ ರಾಜ್ಯಲೋಭಿಗಳಾದ ಗಂಡುಮಕ್ಕಳ ಮೇಲೆ ಮೋಹವೇಕೆ?

ಕನ್ಯಾದಾನದಿಂದ ಪರಲೋಕದಲ್ಲಿ ಲಭಿಸುವ ಫಲವು ಪುತ್ರನಿಂದ ಬರುವುದಿಲ್ಲ ಎಂಬುದನ್ನು

ಸುಲೋಚನೆಯ ಕತೆ ಪ್ರತಿಪಾದಿಸುತ್ತದೆ. ಅದರಲ್ಲಿ ಸುಷೇಣನೆಂಬ ರಾಜನು ಮಗಳಿಂದ ಸಶರೀರನಾಗಿ ಸ್ವರ್ಗಕ್ಕೆ ಹೋಗುತ್ತಾನೆ.

ಇದಕ್ಕೆ ಮೊದಲು ಬರುವ ವಿರಕ್ತ ರಾಜಪುತ್ರಿಯರ ಕಥೆ ಪರೋಪಕಾರಕ್ಕಾಗಿ ತ್ಯಾಗ ಮಾಡುವ ವಿರಕ್ತಿಯ ಪರಾಕಾಷ್ಠೆ

ಮುಂದೆ ತಾರಾದತ್ತೆಯ ಮಗಳಾದ ಕಳಿಂಗಸೇನೆಯು ಯೌವನಾವಸ್ಥೆಗೆ ಬಂದು ಕ್ರೀಡಾರಸಮಯವಾದ ಬಾಲ್ಯವೆಂಬ ಸಮುದ್ರದ ಅಲೆಯಂತೆ ಉದ್ಯಾನಗಳಲ್ಲಿ ವಿಹರಿಸುತ್ತಾಳೆ. ಆಗ ಸೋಮಪ್ರಭೆಯೆಂಬ ರಾಕ್ಷಸರಾಜಕುವರಿ ಅವಳನ್ನು ನೋಡಿ ಅವಳ ಗೆಳೆತನ ಸಂಪಾದಿಸುತ್ತಾಳೆ. ಅವಳು ಕಳಿಂಗಸೇನೆಗೆ ರಾಜಕುಮಾರರೊಡನೆ ಸ್ನೇಹವಿರಿಸಿಕೊಳ್ಳುವುದು ಕಷ್ಟ. ಸ್ವಲ್ಪ ತಪ್ಪು ಮಾಡಿದರೂ ಅದನ್ನು ದೊಡ್ಡದು ಮಾಡಿಬಿಡುತ್ತಾರೆ. ನಮ್ಮನ್ನು ನಿಯಂತ್ರಣ ಮಾಡುವವರನ್ನೇ ಧ್ವಂಸಮಾಡಿಬಿಡುವ ಮದಿಸಿದ ಆನೆಗಳಂತೆಯೇ ಅವರೂ, ನಗುನಗುತ್ತಲೇ ಪ್ರಾಣವನ್ನು ತೆಗೆಯುವ ಬೇತಾಳಗಳಂತಹ ಅವರೊಡನೆ ಎಂತಹ ಸ್ನೇಹ ಎಂದು ನಿದರ್ಶನವಾಗಿ ರಾಜಪುತ್ರ ಹಾಗೂ ವರ್ತಕಪುತ್ರನ ಕಥೆಯನ್ನು ಹೇಳುತ್ತಾಳೆ.

ಇದಕ್ಕೆ ಉತ್ತರವಾಗಿ ಕಳಿಂಗಸೇನೆಯು ಬೇತಾಳಗಳೂ ಪಿಶಾಚಗಳು ಬೇರೆ, ರಾಜಪುತ್ರನು ಅಂತಹವರಲ್ಲ ಎಂದು ಪಿಶಾಚ ಹಾಗೂ ಬ್ರಾಹ್ಮಣನ ಕಥೆಯನ್ನು ಹೇಳುತ್ತಾಳೆ. ಈ ಕಥೆಯಲ್ಲಿ ಅನುಚಿತವೆನ್ನುವಂತಹ ಒಂದು ಭಾಗ ಬರುತ್ತದೆ. ಈ ಭಾಗವನ್ನು ಎ.ಆರ್ ಕೃಷ್ಣಶಾಸ್ತ್ರಿಗಳೂ ತಮ್ಮ ಕಥಾಮೃತದಲ್ಲಿ ಕೈಬಿಟ್ಟಿದ್ದಾರೆ. ಇಲ್ಲೂ ಆ ಭಾಗವನ್ನು ಕೈಬಿಡಲಾಗಿದೆ. ಸೋಮಪ್ರಭೆಯ ವೃತ್ತಾಂತವು ಆಶ್ಚರ್ಯಕರವಾದ ವಿಷಯಗಳನ್ನು ಒಳಗೊಂಡಿದೆ. ಮೂರನೆಯ ತರಂಗದಲ್ಲಿ ಅವಳು ತರುವ ಯಂತ್ರದ ಗೊಂಬೆಗಳ ವಿಸ್ಮಯ ಲೋಕವು ತೆರೆದುಕೊಳ್ಳುತ್ತದೆ. ತನ್ನೊಡನೆ ಯಂತ್ರದ ಗೊಂಬೆಗಳನ್ನು ತರುವ ಅವಳು ಗೆಳತಿಯ ಒತ್ತಾಯದ ಮೇರೆಗೆ ತನ್ನ ಕಥೆಯನ್ನು ಹೇಳುತ್ತಾಳೆ. ತಾನು ಮಯಾಸುರನ ಮಗಳೆಂಬ ಸತ್ಯವನ್ನು ಹೇಳುತ್ತಾಳೆ.

ಸೋಮಪ್ರಭೆಯು ಬೊಂಬೆಗಳ ಚಮತ್ಕಾರವನ್ನು ತೋರಿಸುತ್ತಾಳೆ. ಒಂದು ಗೊಂಬೆ ಕೀಲು ಕೊಟ್ಟಂತೆಯೇ ಆಕಾಶಕ್ಕೆ ಹಾರಿ ಅವಳ ಆಜ್ಞೆಯಂತೆ ಹೂಮಾಲೆಯನ್ನು ತಂದು ಕೊಡುತ್ತದೆ. ಮತ್ತೊಂದು ಪಾನೀಯ ತರುತ್ತದೆ. ಒಂದು ಕುಣಿದಾಡುತ್ತದೆ, ಒಂದು ಮಾತನಾಡುತ್ತದೆ.

ಸೋಮಪ್ರಭೆಯು ರಾಜನಿಗೂ ಈ ಚಮತ್ಕಾರವನ್ನು ತೋರಿಸಿ ಆ ಯಂತ್ರಗಳ ಹಿಂದಿರುವ ತತ್ವವನ್ನು ರಾಜನ ಕೋರಿಕೆಯಂತೆ ಹೇಳುತ್ತಾಳೆ. ಈ ಜಗತ್ತು ಪಂಚಭೂತಗಳಿಂದ ನಿರ್ಮಿತವಾಗಿರುವಂತೆ ಈ ಕೀಲುಗೊಂಬೆಗಳ ಯಂತ್ರಗಳೂ ಆಗಿವೆ. ಪೃಥಿವೀ ತತ್ವಪ್ರಧಾನವಾದ ಯಂತ್ರವು ಬಾಗಿಲು ಮುಂತಾದುವುಗಳನ್ನು ಮುಚ್ಚುತ್ತದೆ. ಅದನ್ನು ಬೇರೆಯವರು ತೆರೆಯಲಾಗುವುದಿಲ್ಲ. ಜಲಪ್ರಧಾನವಾಗಿರುವುದು ಜೀವವಿರುವಂತೆ ಕಾಣುತ್ತದೆ. ಅಗ್ನಿಪ್ರಧಾನವಾದುದು ಜ್ವಾಲೆಯನ್ನು ಉಗುಳುತ್ತದೆ. ವಾಯುಯಂತ್ರವು ಹೋಗಿಬರುವ ಚಲನೆಗಳನ್ನು ಮಾಡುತ್ತದೆ. ಆಕಾಶಯಂತ್ರ ಮಾತನಾಡುತ್ತದೆ.

ಮುಂದೆ ಸೋಮಪ್ರಭೆಯು ಕಳಿಂಗಸೇನೆಯನ್ನು ತನ್ನ ಸೋದರಿಯ ಬಳಿ ಕರೆದೊಯ್ಯುತ್ತಾಳೆ.

ಅವಳೊಬ್ಬ ತಪಸ್ವಿನಿ. ಈ ಪ್ರವಾಸದ ನಂತರ ಒಮ್ಮೆ ಸೋಮಪ್ರಭೆಯು ಕಳಿಂಗಸೇನೆಗೆ ಕೀರ್ತಿಸೇನೆಯೆಂಬವಳ ಕಥೆಯನ್ನು ಹೇಳುತ್ತಾ ಅದಕ್ಕೆ ಪೀಠಿಕೆಯಾಗಿ ಈ ಮಾತುಗಳನ್ನು ಹೇಳುತ್ತಾಳೆ. 'ನಾನು ಮದುವೆಯಾದ ಮೇಲೆ ನಿನ್ನ ಮನೆಗೆ ಬರಲಾರೆ. ಗೆಳತಿಯ ಗಂಡನನ್ನು ನೋಡಬಾರದು. ಅತ್ತೆಯಾದರೋ ಹೆಣ್ಣು ತೋಳವು ಕುರಿಯನ್ನು ತಿನ್ನುವಂತೆ ಸೊಸೆಯನ್ನು ಕಿತ್ತು ತಿನ್ನುತ್ತಾಳೆ. 'ಅವೇಃ ವೃಕೀವ ಸ್ನುಷಾಯಾಃ ಶ್ವಶ್ರೂರ್ಮಾಂಸಾನಿ ಖಾದತಿ'. ಇದಕ್ಕೆ ನಿದರ್ಶನ ಕೀರ್ತಿಸೇನೆಯ ಕಥೆ. ಕೀರ್ತಿಸೇನೆಯು ಅತ್ತೆಯ ಕ್ರೌರ್ಯಕ್ಕೆ ಸಿಲುಕಿ ನಲುಗಿ ಗಂಡನಿಲ್ಲದಿದ್ದಾಗ ಅತ್ತೆಯು ಕೂಡಿಹಾಕಿದ್ದ ಸ್ಥಳದಿಂದ ತಪ್ಪಿಸಿಕೊಂಡು ಪುರುಷವೇಷದಲ್ಲಿ ಹೊರಟು ಮಹಾಸಾಹಸದಿಂದ ಡಕಾಯಿತರಿಂದ ತಪ್ಪಿಸಿಕೊಂಡು ಮರದ ಪೊಟರೆಯೊಳಗೆ ಅಡಗಿ ಅಲ್ಲಿಗೆ ಬಂದ ರಾಕ್ಷಸಿಯೊಬ್ಬಳು ತನ್ನ ಮಕ್ಕಳಿಗೆ ಆ ದೇಶದ ರಾಜನ ಕಿವಿಯಿಂದ ತಲೆಗೆ ಸೇರಿರುವ ಜರಿಗಳನ್ನು ತೆಗೆಯುವ ಉಪಾಯವನ್ನು ಹೇಳಿದುದನ್ನು ಕೇಳಿ ತಿಳಿದು ನಂತರ ಆ ರಾಜನ ಬಳಿ ಹೋಗಿ ಆ ರೋಗವನ್ನು ವಾಸಿಮಾಡುತ್ತಾಳೆ. ನಂತರ ಆ ಊರಿಗೆ ಬಂದ ಪತಿಯನ್ನು ಗುರುತಿಸಿ ಅವನನ್ನು ಸೇರುತ್ತಾಳೆ. ಪತಿವ್ರತೆಯಾದ ಅವಳು ಭರ್ತೃಭಕ್ತಿಯೆಂಬ ರಥವೇರಿ ಶೀಲವೆಂಬ ಕವಚತೊಟ್ಟು ಬುದ್ಧಿಯೆಂಬ ಆಯುಧ ಹಿಡಿದು ಧರ್ಮವನ್ನೇ ಸಾರಥಿಯಾಗಿಸಿಕೊಂಡು ಕಷ್ಟಗಳನ್ನು ಗೆದ್ದವಳು.

ಇದರಲ್ಲಿ ಒಂದು ನೀತಿವಾಕ್ಯ. ವಿಧಿಯ ಬರಹವನ್ನು ಸಹಿಸಿ ಆಪತ್ತಿನಲ್ಲೂ ಶೀಲವನ್ನು ಕಾಪಾಡಿಕೊಳ್ಳುವ ಪತಿವ್ರತೆಯರು ತಮ್ಮ ಸದ್ಗುಣಗಳಿಂದ ರಕ್ಷಿತರಾಗಿ ತಮಗೂ ತಮ್ಮ ಪತಿಗೂ ಮಂಗಳವುಂಟುಮಾಡುತ್ತಾರೆ.

ಈ ಕಥೆ ಹೇಳಿದ ಸೋಮಪ್ರಭೆಯು ಕಳಿಂಗಸೇನೆಗೆ ಕೊನೆಯಲ್ಲಿ ಈ ರೀತಿ ಹಾರೈಸುತ್ತಾಳೆ. "ಅತ್ತೆ ಅತ್ತಿಗೆಯರಿಂದ ಸೊಸೆಯರು ಬಹಳ ಕಷ್ಟವನ್ನು ಅನುಭವಿಸುತ್ತಾರೆ. ಆದ್ದರಿಂದ ಅತ್ತೆ ಅತ್ತಿಗೆ ಇಲ್ಲದ ಮನೆ ನಿನಗೆ ದೊರೆಯಲಿ ಎಂದು ನಾನು ಹಾರೈಸುತ್ತೇನೆ.'

ಅತ್ತೆ ನಾದಿನಿಯರ ಕಾಟವು ಅಂದೂ ಕುಟುಂಬದ ಒಂದು ಅನಿವಾರ್ಯವಾದ ತೊಂದರೆಯಾಗಿತ್ತೆಂದು ಕಾಣುತ್ತದೆ. ಅದು ಇಂದೂ ಇರುವಂತೆ ಅಂದೂ ಇದ್ದು ಇನ್ನೂ ಕ್ರೂರವಾದ ಹಾಗೂ ಅಮಾನುಷವಾದ ಸ್ಥಿತಿಯಲ್ಲಿತ್ತು ಎಂಬುದಕ್ಕೆ ಈ ಕಥೆ ಸಾಕ್ಷಿ.

ನಾಲ್ಕನೆಯ ತರಂಗವು ಕಳಿಂಗಸೇನೆಯ ಜೀವನದಲ್ಲಿ ಒಂದು ಮಹತ್ತರವಾದ ತಿರುವನ್ನು ತರುತ್ತದೆ. ಕಳಿಂಗಸೇನೆಯು ಉಪ್ಪರಿಗೆಯ ಮೇಲಿದ್ದಾಗ ಐಂದ್ರಜಾಲಿಕನ ನವಿಲುಗರಿಯಂತಿದ್ದ ಅವಳನ್ನು ನೋಡಿ ಮದನವೇಗ ಅನ್ನುವ ವಿದ್ಯಾಧರನು ಮೋಹಗೊಳ್ಳುತ್ತಾನೆ. ಕಳಿಂಗಸೇನೆಯು ಶಾಪಗ್ರಸ್ತ ಅಪ್ಸರೆ. ಅವಳಿಗಾಗಿ ನಿರಾಹಾರನಾಗಿ ಅವನು ಶಿವನನ್ನು ಆರಾಧಿಸಿದಾಗ ವತ್ಸರಾಜನ ವೇಷದಲ್ಲಿ ಹೋಗಿ ಅವಳನ್ನು ವಶಪಡಿಸಿಕೊಳ್ಳಬೇಕೆಂದು ಶಿವನು ಆದೇಶಿಸುತ್ತಾನೆ. ಏತನ್ಮಧ್ಯೆ, ಕಳಿಂಗಸೇನೆಯು ತನಗೆ ತನ್ನ ತಂದೆಯು ಪ್ರಸೇನಜಿತ್ ಎಂಬ ವಯಸ್ಸಾದ ರಾಜನಿಗೆ ತನ್ನನ್ನು ಮದುವೆ ಮಾಡಿಕೊಡಲು ಪ್ರಸ್ತಾಪ ಮಾಡಿರುವುದನ್ನು ತಿಳಿಸಿದಾಗ ಸೋಮಪ್ರಭೆಯು ಈ ರೀತಿ ಹೇಳುತ್ತಾಳೆ. ವರನಲ್ಲಿ ನೋಡುವ ಗುಣಗಳೆಂದರೆ ವಯಸ್ಸು, ರೂಪ, ಕುಲ, ಶೀಲ ಮತ್ತು ಧನ. ಇವುಗಳಲ್ಲಿ ಮೊದಲನೆಯದು ವಯಸ್ಸು. ನಂತರವೇ ರೂಪಾದಿಗಳು. ವೃದ್ಧನಿಗೆ ಚಿಕ್ಕ ವಯಸ್ಸಿನ ಕನ್ಯೆಯನ್ನು ಕೊಡಬಾರದು.

ಹೀಗೆ ಹೇಳಿ ರೂಪ ಮುಂತಾದವುಗಳಲ್ಲಿ ಅವಳಿಗೆ ಅನುರೂಪನಾದ ವತ್ಸರಾಜನನ್ನು ಮದುವೆಯಾದರೆ ಬ್ರಹ್ಮನು ಅವಳನ್ನು ಲಾವಣ್ಯವತಿಯಾಗಿ ಸೃಷ್ಟಿಸಿದ್ದು ಸಾರ್ಥಕವಾಗುತ್ತದೆ ಎನ್ನುತ್ತಾಳೆ.

ಇದೆಲ್ಲ ದೈವಾಯತ್ತ. ತಂದೆಯ ಅಧೀನಳಾದ ತಾನು ಏನು ಮಾಡಲು ಸಾಧ್ಯ ಎಂದು ಕಳಿಂಗಸೇನೆಯು ತೇಜಸ್ವತೀ ಎಂಬವಳ ಕಥೆಯನ್ನು ಹೇಳುತ್ತಾಳೆ. ತೇಜಸ್ವತಿಯು ಯಾವನನ್ನೋ ಮೋಹಿಸಿ ಸಂಕೇತ ಸ್ಥಾನಕ್ಕೆ ಬರಹೇಳುತ್ತಾಳೆ. ಅವನು ಭೀರುವಾಗಿ ಸಾಹಸಕ್ಕೆ ಕೈಹಾಕದೆ ಪಲಾಯನ ಮಾಡುತ್ತಾನೆ. ಆಗ ಅಲ್ಲಿಗೆ ಬಂದ ರಾಜಕುಮಾರನೊಬ್ಬ ಇವಳನ್ನು ವರಿಸುತ್ತಾನೆ. ಅವನು ತೇಜಸ್ವತಿಯ ತಂದೆಯನ್ನು ತನ್ನ ಶತ್ರುಗಳನ್ನು ಜಯಿಸಲು ಸಹಾಯ ಕೇಳಿದಾಗ ಆ ರಾಜನು ಮಂತ್ರಿಗಳೊಡನೆ ಚರ್ಚಿಸುತ್ತಾನೆ. ಆಗ ಒಬ್ಬ ಮಂತ್ರಿಯು ಉತ್ತಮರಾದವರು ಉನ್ನತ ಪದವಿಯನ್ನು ಹೊಂದಲೆಂದು ವಿಧಿಯು ಪಥಕವನ್ನು ರೂಪಿಸುತ್ತದೆ ಎಂದು ಹೇಳಿ ಅದಕ್ಕೊಂದು ಕಥೆಯನ್ನು ಹೇಳುತ್ತಾನೆ. ಇಲ್ಲೂ ವಿಧಿಯ ಪಾತ್ರವನ್ನು ಪ್ರಧಾನವನ್ನಾಗಿಸಲಾಗಿದೆ. ಈ ವಿಧಿಯ ಬಲವನ್ನು ತೋರಿಸಲು ಹರಿಶರ್ಮನ ಕಥೆ ಬರುತ್ತದೆ. ಇದು ಬಹಳ ಸ್ವಾರಸ್ಯವಾದ ಕಥೆ.

ಇದರಲ್ಲಿ ಹರಿಶರ್ಮನೆಂಬೊಬ್ಬನ ತಾನೊಬ್ಬ ದೊಡ್ಡ ಜ್ಞಾನಿ ಎಂದು ತೋರಿಸಿ ರಾಜನಿಂದ ಗೌರವವನ್ನು ಪಡೆಯಲು ಅವನ ಕುದುರೆಯೊಂದನ್ನು ತಾನೇ ದೂರ ತೆಗೆದುಕೊಂಡು ಹೋಗಿ ಕಟ್ಟಿ ಹಾಕಿ ಎಲ್ಲರೂ ಅದನ್ನು ಹುಡುಕುತ್ತಿರುವಾಗ ಸುಳ್ಳು ಲೆಕ್ಕಾಚಾರ ಹಾಕಿ ಜ್ಯೋತಿಷಿ ಎಂದು ನಟಿಸಿ ಕುದುರೆ ಇರುವ ಜಾಗವನ್ನು ಹೇಳುತ್ತಾನೆ. ಅವನು ಹೇಳಿದಂತೆಯೇ ಕುದುರೆ ಅಲ್ಲಿ ಸಿಕ್ಕಿದಾಗ ರಾಜನು ಅವನನ್ನು ಗೌರವಿಸುತ್ತಾನೆ. ಒಮ್ಮೆ ಅರಮನೆಯಲ್ಲಿ ಆಭರಣಗಳು ಕಳುವಾದಾಗ ಯಾರು ಕದ್ದರೆಂದು ಹೇಳಬೇಕೆಂದು ಹರಿಶರ್ಮನನ್ನು ರಾಜನು ಕೇಳುತ್ತಾನೆ. ತಲ್ಲಣಗೊಂಡ ಹರಿಶರ್ಮನು ಬೆಳಿಗ್ಗೆ ಹೇಳುತ್ತೇನೆಂದು ಹೇಳಿದಾಗ ರಾಜನು ಅವನನ್ನು ಕಾವಲಿನಲ್ಲಿ ಇರಿಸುತ್ತಾನೆ. ಆಭರಣಗಳನ್ನು ಕದ್ದ ಜಿಹ್ವೆ ಎಂಬ ದಾಸಿಯು ಹರಿಶರ್ಮನು ತನ್ನ ಬಗ್ಗೆ ಹೇಳಿಬಿಡುತ್ತಾನೆಂಬ ಆತಂಕದಿಂದ ಅವನಿರುವ ಬಳಿ ಬಂದು ಹೊಂಚಿ ಕೇಳುತ್ತಾಳೆ. ಆಗ ಹರಿಶರ್ಮನು ವಿಧಿಯನ್ನು ಹಳಿದುಕೊಂಡು ಅನ್ಯಾಯವಾಗಿ ಸುಳ್ಳು ಹೇಳಿ ಸಿಕ್ಕಿಕೊಂಡೆನಲ್ಲ ಎಂದು ತನ್ನ ನಾಲಿಗೆಯನ್ನು ಅಂದರೆ ಜಿಹ್ವೆಯನ್ನು ಹಳಿಯುತ್ತಾ ಜಿಹ್ವೆಯೇ! ದುರಾಸೆಯಿಂದ ಎಂತಹ ಕೆಲಸ ಮಾಡಿಬಿಟ್ಟೆ? ಈಗ ಕಾರಾಗೃಹವಾಸ ಅನುಭವಿಸು ಎನ್ನುತ್ತಿರುತ್ತಾನೆ. ಇದನ್ನು ಕೇಳಿ ಭಯಗೊಂಡ ಜಿಹ್ವೆಯು ತನ್ನ ಬಗ್ಗೆಯೇ ಹೇಳುತ್ತಿದ್ದಾನೆಂದು ತಿಳಿದು ಅವನ ಬಳಿ ಹೋಗಿ ಅವನಿಗೆ ಕೆಲವು ಆಭರಣಗಳನ್ನು ಕೊಟ್ಟು ತಾನು ಕದ್ದ ಆಭರಣಗಳು ಇರುವ ಜಾಗ ಹೇಳಿ ಅಭಯ ಕೋರುತ್ತಾಳೆ. ಮರುದಿನ ಹರಿಶರ್ಮನು ಸುಳ್ಳು ಲೆಕ್ಕಾಚಾರ ಹಾಕಿ ಆಭರಣಗಳು ಇರುವ ಜಾಗವನ್ನು ತೋರಿಸುತ್ತಾನೆ. ಅವನ ಗೌರವ ಇಮ್ಮಡಿಯಾಗುತ್ತದೆ. ಆದರೆ ಬುದ್ಧಿವಂತ ಮಂತ್ರಿಗೆ ಇದರ ಬಗ್ಗೆ ಸಂದೇಹ. ಅವನ ಸಲಹೆಯಂತೆ ಒಂದು ಮಡಕೆಯಲ್ಲಿ ಕಪ್ಪೆಯೊಂದನ್ನು ಮುಚ್ಚಿಟ್ಟು "ಇದರೊಳಗೇನಿದೆ ಹೇಳು" ಎನ್ನುತ್ತಾನೆ. ತನ್ನ ವಿನಾಶ ಹತ್ತಿರವಾಯಿತೆಂದು ತಿಳಿದು ಬಾಲ್ಯದಲ್ಲಿ ತನ್ನ ತಂದೆ ತನ್ನನ್ನು ಮಂಡೂಕ ಎಂದು ಬೈಯುತ್ತಿದ್ದನ್ನು ನೆನೆಸಿಕೊಂಡು "ಮಂಡೂಕವೇ! ನಿನಗೆ ಮಡಕೆಯಿಂದಲೇ ವಿನಾಶ" ಎಂದು ಕೂಗಿಬಿಡುತ್ತಾನೆ. ಮಡಿಕೆಯಲ್ಲಿ ಮಂಡೂಕವಿದೆಯೆಂಬುದು ಅವನಿಗೆ ತಿಳಿದಿದೆಯೆಂದು ಎಲ್ಲರೂ ಭಾವಿಸಿ ವಿಸ್ಮಿತರಾಗಿಬಿಡುತ್ತಾರೆ. ಒಂದು ಮಂಡೂಕದಿಂದಾಗಿ

ಅವನು ಮಹಾಜ್ಞಾನಿ ಆಗಿಬಿಡುತ್ತಾನೆ. ವಿಧಿಯು ಎಂತಹವನನ್ನಾದರೂ ಏನು ಬೇಕಾದರೂ ಮಾಡಬಲ್ಲದು. ಇದರಂತೆಯೇ ರಾಜಕುಮಾರಿಯು ಅಪಾತ್ರನನ್ನು ಆರಿಸಿದರೂ ವಿಧಿಯು ಅವಳಿಗೆ ಯೋಗ್ಯನಾದ ಗಂಡನನ್ನೇ ಕೊಟ್ಟಿತು.

ಐದನೆಯ ತರಂಗದಲ್ಲಿ ಕಳಿಂಗಸೇನೆಯು ವತ್ಸರಾಜನನ್ನು ಅಲ್ಲಿಗೇ ಕರೆತರಲು ಸೋಮಪ್ರಭೆಯನ್ನು ಯಾಚಿಸುತ್ತಾಳೆ. ಚಿತ್ರಲೇಖೆಯು ಅನಿರುದ್ಧನನ್ನು ಉಪಾಯದಿಂದ ಕರೆತಂದುದನ್ನು ಬಾಣಾಸುರನ ಮಗಳಾದ ಉಷೆಯ ಕಥೆಯ ಮೂಲಕ ನೆನಪಿಸುತ್ತಾಳೆ. ಸೋಮಪ್ರಭೆಯು ಅವಳನ್ನು ವಿಮಾನದಲ್ಲಿ ಕರೆದೊಯ್ದು 'ಮೊದಲು ಅವಳಿಗಾಗಿ ಆರಿಸಿರುವ ವೃದ್ಧ ಪ್ರಸೇನಜಿತ್ತನನ್ನು ತೋರಿಸುತ್ತಾಳೆ. ಅವನು ಮುಪ್ಪಿನಿಂದ ಬಿಳಿಚಿಕೊಂಡಿದ್ದು ಅವನಿಗೆ ಬೀಸಲಾಗುತ್ತಿದ್ದ ಚಾಮರಗಳು ಈ ಮುದುಕನಿಂದ ದೂರ ಹೋಗು ಎಂದು ಹೇಳುತ್ತಿವೆಯೋ ಎಂಬಂತಿದ್ದುವಂತೆ.

ಕಳಿಂಗಸೇನೆಯನ್ನು ಸೋಮಪ್ರಭೆಯು ಕೌಶಾಂಬಿಗೆ ಕರೆದೊಯ್ದು ಉದ್ಯಾನದಲ್ಲಿದ್ದ ವತ್ಸರಾಜನನ್ನು ತೋರಿಸುತ್ತಾಳೆ. ಅವನನ್ನು ಚಕೋರಿಯು ಚಂದ್ರನನ್ನು ನೋಡುವಂತೆ ಉತ್ಫುಲ್ಲನಯನಗಳಿಂದ ನೋಡುತ್ತಾ ಈ ಮಾರ್ಗದಲ್ಲೇ ವತ್ಸರಾಜನು ತನ್ನ ಹೃದಯವನ್ನು ಪ್ರವೇಶಿಸಿದನು ಎಂದು ಹೇಳುವಂತೆ ಎದೆಯ ಮೇಲೆ ಕೈಯಿಟ್ಟುಕೊಂಡು ಪರವಶಳಾಗುತ್ತಾಳೆ. ಆಗ ಸೋಮಪ್ರಭೆಗೆ ಅಪಶಕುನವಾಗುತ್ತದೆ. ನಾನು ಬರುವವರೆಗೆ ಇಲ್ಲೇ ಇರು ಎಂದು ಅವಳು ಹೇಳಿ ಹೋದಮೇಲೆ ಅವಳ ಮಾತನ್ನು ಲೆಕ್ಕಿಸದೆ ಕಳಿಂಗಸೇನೆಯು ವತ್ಸರಾಜನ ಬಳಿ ದೂತನನ್ನು ಕಳುಹಿಸಿಬಿಡುತ್ತಾಳೆ. ವತ್ಸರಾಜನು ಒಪ್ಪಿ ಮುಂದಿನ ವ್ಯವಸ್ಥೆಗಳನ್ನು ಮಾಡಲು ಸಚಿವ ಯೌಗಂಧರಾಯಣನಿಗೆ ಹೇಳುತ್ತಾನೆ. ಆ ಮಂತ್ರಿಯು ಬಹಳ ಚತುರ. ವತ್ಸರಾಜನು ಏನಾದರೂ ಕಳಿಂಗಸೇನೆಯನ್ನು ನೋಡಿದರೆ ಎಲ್ಲವನ್ನೂ ಮರೆತುಬಿಡುತ್ತಾನೆ. ಆಗ ವಾಸವದತ್ತೆ ಮುಂತಾದವರೆಲ್ಲ ಪ್ರಾಣ ಬಿಟ್ಟು ಸರ್ವನಾಶವಾಗಿಬಿಡುತ್ತದೆ ಎಂದು ಯೋಚಿಸಿ ಅಶುಭಸ್ಯ ಕಾರ್ಯಸ್ಯ ಕಾಲಹಾರಃ ಪ್ರತಿಕ್ರಿಯಾ ಅಂದರೆ ಕೆಟ್ಟ ಕೆಲಸಕ್ಕೆ ಕಾಲಹರಣವೇ ಪರಿಹಾರ ಎಂದು ಯೋಚಿಸಿ ಅದರಂತೆ ಜ್ಯೋತಿಷಿಗಳಿಗೆ ಬಹಳ ದೂರದ ಮುಹೂರ್ತವನ್ನು ಸೂಚಿಸಲು ಹೇಳುತ್ತಾನೆ. ವಾಸವದತ್ತೆಗೆ ವತ್ಸರಾಜನೇನಾದರೂ ಈ ಹೊಸ ವಿವಾಹದ ಬಗ್ಗೆ ಕೇಳಿದರೆ ನಿನಗೆ ಬಹಳ ಸಂತೋಷವಾದಂತೆ ನಟಿಸು ಎಂದು ಹೇಳಿ ಕೊಡುತ್ತಾನೆ.

ಈ ಪ್ರಸಂಗವು ಆರನೆಯ ತರಂಗದಲ್ಲಿ ಮುಂದುವರಿಯುತ್ತದೆ. ಯೌಗಂಧರಾಯಣನು ವಿವಾಹವನ್ನು ಉಪಾಯದಿಂದ ಮುಂದೂಡಿಸಿ ತನ್ನ ಸ್ನೇಹಿತ ಬ್ರಹ್ಮರಾಕ್ಷಸನೊಬ್ಬನನ್ನು ಕಳಿಂಗಸೇನೆಯನ್ನು ಅದೃಶ್ಯನಾಗಿದ್ದು ಗಮನಿಸಲು ಕಳಿಸುತ್ತಾನೆ. ಯಾರಾದರೂ ವಿದ್ಯಾಧರನು ಅವಳನ್ನು ಮೋಹಿಸಬಹುದು. ಅವಳಲ್ಲಿ ದೋಷವನ್ನು ಕಂಡುಹಿಡಿದರೆ ಆಗ ವತ್ಸರಾಜನ ಮನಸ್ಸನ್ನು ಅವಳಿಂದ ಹಿಂದಿರುಗಿಸಬಹುದು ಎಂಬುದು ಅವನ ಉಪಾಯ.

ಇತ್ತ ಮತ್ತೆ ಹಿಂದಿರುಗಿದ ಸೋಮಪ್ರಭೆಯು ಅಪಶಕುನವಾಗಿದ್ದರೂ ಕಳಿಂಗಸೇನೆಯು ದೂತನನ್ನು ಕಳುಹಿಸಿದ್ದನ್ನು ತಿಳಿದು ಅವಳನ್ನು ಖಂಡಿಸಿ ಏಳು ಜನ ಬ್ರಾಹ್ಮಣಪುತ್ರರ ಕಥೆಯನ್ನು ಹೇಳುತ್ತಾಳೆ. ಅನಂತರ ಸವತಿಯರ ಬಗ್ಗೆಯೂ ನೀನು ಎಚ್ಚರಿಕೆಯಿಂದ ಇರಬೇಕು ಎಂದು ಮಂಕಣಕನೆಂಬ ಋಷಿಯ ಹಾಗೂ ಮೇನಕೆಯ ಮಗಳಾದ ಕದಳೀಗರ್ಭೆಯ ಕಥೆಯನ್ನು ಹೇಳುತ್ತಾಳೆ.

ಅದರಲ್ಲಿ ದೃಢವರ್ಮನೆಂಬ ರಾಜನು ಆಶ್ರಮಕ್ಕೆ ಹೋದಾಗ ಕದಳೀಗರ್ಭೆಯನ್ನು ನೋಡಿ ಅನುರಕ್ತನಾಗಿ ಋಷಿಯ ಅನುಮತಿಯಿಂದ ವಿವಾಹಮಾಡಿಕೊಳ್ಳುತ್ತಾನೆ. ಅಪ್ಸರೆಯರು ಬಂದು ಅವಳ ಕೈಗೆ ಸಾಸಿವೆ ಕಾಳುಗಳನ್ನು ಕೊಟ್ಟು "ದಾರಿಯಲ್ಲಿ ಚೆಲ್ಲುತ್ತಾ ಅರಮನೆಗೆ ಹೋಗು, ಹಿಂದಿರುಗಿ ಬರುವ ಪ್ರಸಂಗ ಬಂದಾಗ ದಾರಿ ತಿಳಿಯಲು ಅವುಗಳಿಂದ ಅನುಕೂಲವಾಗುತ್ತದೆ' ಎಂದು ಹೇಳಿ ಹೋಗುತ್ತಾರೆ. ಅದರಂತೆಯೇ ಮಾಡುತ್ತಾ ಅವಳು ರಾಜನೊಂದಿಗೆ ಅರಮನೆಗೆ ಹೋಗುತ್ತಾಳೆ. ಆಗ ಇತರ ರಾಣಿಯರು ಮಾತ್ಸರ್ಯದಿಂದ ಒಬ್ಬ ಪ್ರವ್ರಾಜಿಕೆಯ ಸಹಾಯದಿಂದ ಒಬ್ಬ ನಾಪಿತನ ಮೂಲಕ ಕದಳೀಗರ್ಭೆಯು ಒಬ್ಬ ಡಾಕಿನೀ ಎಂದು ರಾಜನಿಗೆ ಹೇಳಿಸಿ ಅದಕ್ಕಾಗಿ ಕೆಲವು ಕೃತಕ ಸಾಕ್ಷ್ಯಾಧಾರಗಳ ವ್ಯವಸ್ಥೆ ಮಾಡುತ್ತಾರೆ. ರಾಜನು ಅದನ್ನು ನಂಬಿ ಕದಳೀಗರ್ಭೆಯನ್ನು ಹೊರದೂಡುತ್ತಾನೆ. ಅವಳು ತಾನು ಚೆಲ್ಲಿ ಬೆಳೆದ ಸಾಸಿವೆಗಳ ಸಹಾಯದಿಂದ ತಂದೆಯ ಆಶ್ರಮಕ್ಕೆ ಬರುತ್ತಾಳೆ. ತಂದೆಯು ಜ್ಞಾನದೃಷ್ಟಿಯಿಂದ ವಿಚಾರ ತಿಳಿದು ರಾಜನ ಬಳಿ ಹೋಗಿ ಎಲ್ಲವನ್ನೂ ಹೇಳಲು ರಾಜನು ವಿಚಾರಿಸಿ ಸತ್ಯವನ್ನು ತಿಳಿಯುತ್ತಾನೆ. ಎಲ್ಲವೂ ಸುಖಾಂತವಾಗುತ್ತದೆ.

ಇಷ್ಟು ಹೇಳಿ ಕಳಿಂಗಸೇನೆಗೆ ಬುದ್ಧಿವಾದಗಳನ್ನು ಹೇಳಿ ಇನ್ನು ತನಗೇನೂ ಕೆಲಸ ಅಲ್ಲಿ ಇಲ್ಲವೆಂದೂ ಸಂದರ್ಭ ಬಂದಾಗ ಪತಿಯ ಅನುಮತಿಯಿಂದ ಬರುತ್ತೇನೆಂದೂ ಹೇಳಿ ಸೋಮಪ್ರಭೆಯು ಹೊರಟು ಹೋಗುತ್ತಾಳೆ.

ಏಳನೆಯ ತರಂಗದಲ್ಲಿ ಚತುರಮಂತ್ರಿ ಯೌಗಂಧರಾಯಣನ ರಾಜತಂತ್ರ ಮುಂದುವರೆಯುತ್ತದೆ. ಅವನು ಹೇಳಿಕೊಟ್ಟ ಪ್ರಕಾರ ವಾಸವದತ್ತೆ ಪದ್ಮಾವತಿಯರು ಏನೂ ನಡೆಯದಂತೆ ಪ್ರಸನ್ನತೆಯಿಂದ ಇರುವುದನ್ನು ನೋಡಿ ಗೊಂದಲಕ್ಕೀಡಾದ ರಾಜನಿಗೆ ಮಂತ್ರಿಯು ಅವರ ಆ ರೀತಿಯ ನಡತೆಗೆ ಕಾರಣವನ್ನು ಅನುಮಾನಿಸಿ ಹೇಳುತ್ತಾನೆ. ಅವರು ಪ್ರಾಣತ್ಯಾಗದ ದೃಢನಿರ್ಧಾರದಿಂದ ಹಾಗೆ ನಡೆದುಕೊಳ್ಳುತ್ತಿದ್ದಾರೆ. ಗಾಢವಾದ ಪ್ರೇಮವು ಭಗ್ನವಾಗುವುದನ್ನು ಯಾರೂ ಸಹಿಸುವುದಿಲ್ಲ ಎಂದು ಹೇಳಿ ಶ್ರುತಸೇನ ರಾಜನ ಕಥೆಯನ್ನು ಹೇಳುತ್ತಾನೆ. ಅದರ ನಡುವೆ ಉನ್ಮಾದಿನೀ ದೇವಸೇನಾ ವೃತ್ತಾಂತವೂ ಬರುತ್ತದೆ. ಶ್ರುತಸೇನನು ವಿದ್ಯುದ್ದ್ಯೋತೆಯೆಂಬ ಜಗದೇಕಸುಂದರಿಯನ್ನು ಮದುವೆಯಾಗಿ ನಂತರ ಮತ್ತೊಬ್ಬಳನ್ನು ಮದುವೆಯಾದಾಗ ವಿದ್ಯುದ್ಯೋತೆ ಪ್ರಾಣತ್ಯಾಗ ಮಾಡುತ್ತಾಳೆ. ರಾಜನೂ ದುಃಖದಿಂದ ಪ್ರಾಣಬಿಡುತ್ತಾನೆ.

ಇದನ್ನೆಲ್ಲ ಕೇಳಿ ವತ್ಸರಾಜನಿಗೆ ಬುದ್ಧಿ ಬರುತ್ತದೆ. ಮತ್ತೆ ಯೌಗಂಧರಾಯಣನು ಮೂಕ ಪ್ರಾಣಿಗಳೂ ನಮ್ಮ ಹಿತವನ್ನು ರಕ್ಷಿಸಿಕೊಳ್ಳುತ್ತವೆ, ಇನ್ನು ಮನುಷ್ಯರ ಮಾತೇನು ಎಂದು ಹೇಳಿ ಅದನ್ನು ಸಮರ್ಥಿಸಲು ಮುಂಗುಸಿ, ಗೂಬೆ, ಬೆಕ್ಕು ಇಲಿಗಳ ಕಥೆಯನ್ನು ಹೇಳುತ್ತಾನೆ. ಬುದ್ಧಿ ಉಪಯೋಗಿಸಿ ಇಲಿಯು ಪ್ರಾಣರಕ್ಷಣೆ ಮಾಡಿಕೊಂಡ ಸ್ವಾರಸ್ಯಕರವಾದ ಕಥೆ ಇದು.

ಮುಂದೆ, ಎಲ್ಲ ಕಡೆಯೂ ಬುದ್ಧಿಯು ಮುಖ್ಯ ಮಿತ್ರನೇ ಹೊರತು ಪೌರುಷವಲ್ಲ, 'ಬುದ್ಧಿರ್ನಾಮ ಚ ಸರ್ವತ್ರ ಮುಖ್ಯಂ ಮಿತ್ರಂ ನ ಪೌರುಷಂ' ಎನ್ನುತ್ತಾ ಯೌಗಂಧರಾಯಣನು ಮಿತ್ರ ಬ್ರಹ್ಮರಾಕ್ಷಸನಿಗೆ ಕಳಿಂಗಸೇನೆಯಲ್ಲಿರಬಹುದಾದ ಬಾಧಕಾಂಶವನ್ನು ಬುದ್ಧಿವಂತಿಕೆಯಿಂದ ತಿಳಿಯಲು ರಾಕ್ಷಸನಿಗೆ ಹೇಳಿ ಕಳುಹಿಸುತ್ತಾನೆ.

ಆಗ ಕಳಿಂಗಸೇನೆಯಲ್ಲಿ ಅನುರಕ್ತನಾದ ಮದನವೇಗನೆಂಬ ವಿದ್ಯಾಧರನು ವತ್ಸರಾಜನ ರೂಪದಲ್ಲಿ ಅವಳ ಬಳಿ ಬಂದು ಅವಳನ್ನು ಗಾಂಧರ್ವವಿವಾಹ ಮಾಡಿಕೊಂಡು ಬಿಡುತ್ತಾನೆ. ಅದನ್ನು ನೋಡಿ ರಾಕ್ಷಸನು ಅವನು ವತ್ಸರಾಜನೆಂದೇ ನಂಬಿ ಯೌಗಂಧರಾಯಣನಲ್ಲಿಗೆ ಬಂದು ಇದರ ಸತ್ಯಾಂಶ ತಿಳಿಯಲು ನೀನೇ ಸಮರ್ಥ. ಸೂರ್ಯನಿಲ್ಲದ ಆಕಾಶ, ನೀರಿಲ್ಲದ ಸರೋವರ, ಮಂತ್ರಿಯಿಲ್ಲದ ರಾಜ್ಯ, ಸತ್ಯವಿಲ್ಲದ ಮಾತು ಎಂತಹುದು ಎಂದೆಲ್ಲ ಹೇಳಿ ಹೋಗುತ್ತಾನೆ. ರಾಜನನ್ನು ಕರೆದುಕೊಂಡು ಮಂತ್ರಿಯು ಕಳಿಂಗಸೇನೆಯ ವಸತಿಗೆ ಹೋಗಿ ರಾತ್ರಿ ವಿದ್ಯಾಧರನು ಬಂದಿರುವುದನ್ನು ತೋರಿಸುತ್ತಾನೆ. ಅವನು ವತ್ಸರಾಜನಲ್ಲ, ತಾನು ಅಲ್ಲಿಗೆ ಬಂದೇ ಇಲ್ಲ ಎಂದು ವತ್ಸರಾಜನು ಎಷ್ಟು ಹೇಳಿದರೂ ಮೊದಲು ಕಳಿಂಗಸೇನೆಯು ನಂಬುವುದಿಲ್ಲ. ಆದರೆ ವತ್ಸರಾಜನು ತಾನು ಹೇಳಿದುದನ್ನು ದೃಢೀಕರಿಸಿ ಹೊರಟು ಹೋದಮೇಲೆ ಅವಳ ಅವಸ್ಥೆ ಅವರ್ಣನೀಯ. ಅದನ್ನು ಕವಿ ವರ್ಣಿಸುವುದು ಹೀಗೆ.

ಮೃಗೀವ ಯೂಥವಿಭ್ರಷ್ಟಾ ಪರಿತ್ಯಕ್ತ ಸ್ವಬಾಂಧವಾ
ಸಂಭೋಗವಿದಲತ್ ಪತ್ರಮುಖಾಬ್ಜಾ ಗಜಪೀಡಿತಾ
ಪದ್ಮಿನೀವ ಪರಿಕ್ಷಿಪ್ತಕಬರೀಭ್ರಮರಾವಲಿಃ

ಬಂಧುಗಳಿಂದ ದೂರವಾಗಿದ್ದ ಅವಳು ಗುಂಪಿನಿಂದ ದೂರಹೋದ ಜಿಂಕೆಯಂತಾಗಿದ್ದಳು. ಆನೆ ತುಳಿದ ಕಮಲದಂತೆ ಸಂಭೋಗದಿಂದ ಅವಳ ಮುಖ ಬಾಡಿತ್ತು. ದುಂಬಿಗಳ ಸಾಲಿನಂತಿದ್ದ ತಲೆಗೂದಲು ಎಲ್ಲೆಡೆ ಕೆದರಿಕೊಂಡಿತ್ತು.

ಆಗ ಅವಳು ದುಗುಡದಿಂದ ನನ್ನನ್ನು ಮದುವೆಯಾದವನು ಕೂಡಲೇ ನನ್ನ ಬಳಿ ಬರಲಿ. ಅವನೇ ನನ್ನ ಪತಿ ಎಂದು ಹೇಳುತ್ತಾಳೆ. ಆಗ ಮದನವೇಗ ಪ್ರತ್ಯಕ್ಷನಾಗುತ್ತಾನೆ. ಅವರಿಬ್ಬರ ವಿವಾಹ ದೃಢೀಕೃತವಾಗುತ್ತದೆ. ಈ ವಿಚಿತ್ರ ತಿರುವುಗಳಿಂದ ಏಳನೆಯ ತರಂಗ ಮುಕ್ತಾಯಗೊಳ್ಳುತ್ತದೆ.

ಎಂಟನೆಯ ತರಂಗದಲ್ಲಿ ಈ ತರಂಗದ ಶೀರ್ಷಿಕೆಯನ್ನು ಸಾರ್ಥಕವಾಗಿಸುವ ಮದನಮಂಚುಕೆಯ ವೃತ್ತಾಂತ ಬರುತ್ತದೆ.

ವತ್ಸರಾಜನು ಕಳಿಂಗಸೇನೆಯು ವಿದ್ಯಾಧರನ ಪತ್ನಿಯೆಂದು ತಿಳಿದಿದ್ದರೂ ಕಾಮಾಸಕ್ತನಾಗಿ ಅವಳಲ್ಲಿಗೆ ಹೋಗಿ ತನ್ನ ಪತ್ನಿಯಾಗು ಎಂದು ಕೇಳುತ್ತಾನೆ. ಅವಳು ಒಳ್ಳೆಯ ಕುಲದಲ್ಲಿ ಹುಟ್ಟಿದ ಯಾವ ಹೆಣ್ಣೂ ಪತಿಗೆ ದ್ರೋಹ ಬಗೆಯುವುದಿಲ್ಲ ಎಂದು ಹೇಳಿ ಒಂದು ಕಥೆ ಹೇಳುತ್ತಾಳೆ. ಅದರಲ್ಲಿ ದೂರದೇಶಕ್ಕೆ ಹೋಗಿದ್ದ ವ್ಯಾಪಾರಿಯೊಬ್ಬನ ಸುಂದರಿಯಾದ ಹೆಂಡತಿಯನ್ನು ರಾಜನು ಬಲಾತ್ಕರಿಸಲು ಬಂದಾಗ ಅವಳು ಎದೆಯೊಡೆದು ಸಾಯುತ್ತಾಳೆ. ರಾಜನೂ ಪಶ್ಚಾತ್ತಾಪದಗ್ಧನಾಗಿ ಸಾಯುತ್ತಾನೆ.

ಇದನ್ನು ಹೇಳಿ ಅಧರ್ಮಮಾಡಬೇಡ ಎಂದು ಕಳಿಂಗಸೇನೆ ಹೇಳಿದಾಗ ವತ್ಸರಾಜನು ವಿವೇಕವನ್ನು ತಂದುಕೊಳ್ಳುತ್ತಾನೆ. ಮುಂದೆ ಕಳಿಂಗಸೇನೆ ಗರ್ಭವತಿಯಾಗಿ ಒಂದು ಹೆಣ್ಣುಮಗುವನ್ನು ಪ್ರಸವಿಸುತ್ತಾಳೆ. ಆ ಮಗುವೇ ಮದನಮಂಚುಕೆ. ವಿದ್ಯಾಧರರ ಪದ್ಧತಿಯಂತೆ ಮದನವೇಗನು ಮಗುಹುಟ್ಟಿದ ಕೂಡಲೇ ಕಳಿಂಗಸೇನೆಯನ್ನು ಬಿಟ್ಟು ತನ್ನ ಲೋಕಕ್ಕೆ ಹೊರಟುಹೋಗುತ್ತಾನೆ.

ಮನ್ಮಥನೇ ನರವಾಹನದತ್ತನಾಗಿ ಹುಟ್ಟಿದ್ದು ರತಿಯನ್ನು ಮದನಮಂಚುಕೆಯಾಗಿ ಹುಟ್ಟಲು ಶಿವನ ಆದೇಶವಾಗಿದ್ದು ಈ ವಿಷಯವನ್ನು ತಿಳಿದಿದ್ದ ಯೌಗಂಧರಾಯಣನು ವತ್ಸರಾಜನಿಗೆ

ಅಯೋನಿಜರು ದೈವಪ್ರೇರಣೆಯಿಂದ ಭೂಲೋಕದಲ್ಲಿ ಹುಟ್ಟುತ್ತಾರೆ ಎಂದು ಹೇಳಿ ಅದರ ಬಗ್ಗೆ ಕಥೆಯೊಂದನ್ನು ಹೇಳುತ್ತಾನೆ.

ಈ ಸಂದರ್ಭದಲ್ಲಿ ರಾಜನೀತಿಯನ್ನು ಕವಿಯು ಗೋಮುಖ ಮುಂತಾದ ಸಚಿವರ ಮೂಲಕ ಸ್ವಲ್ಪ ವಿಸ್ತಾರವಾಗಿಯೂ ಹೇಳಿಸುತ್ತಾನೆ. ಅದರ ಸಾರಾಂಶವು ಈ ರೀತಿ ಇದೆ.

ರಾಜನು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಬೇಕು. ಹೊರಗಿನ ಶತ್ರುಗಳನ್ನು ಕೊಲ್ಲುವ ಮೊದಲು ತನ್ನ ಅಂತರಂಗದ ಶತ್ರುಗಳನ್ನು ನಾಶಗೊಳಿಸಬೇಕು. ವಿವಿಧೋಪಾಯಗಳಿಂದ ಸ್ವಭಾವ, ಅರ್ಹತೆಗಳನ್ನು ಪರೀಕ್ಷಿಸಿ ಮಂತ್ರಿಗಳನ್ನು ನೇಮಿಸಿಕೊಳ್ಳಬೇಕು. ನಂತರ ಅವರ ನಡವಳಿಕೆಗಳನ್ನು ಗೂಢಚಾರರ ಮೂಲಕ ಅರಿಯಬೇಕು. ಉತ್ಸಾಹಶಕ್ತಿ,ಪ್ರಭುಶಕ್ತಿ, ಮಂತ್ರಶಕ್ತಿಗಳಿಂದ ಕೂಡಿ ಶತ್ರುಗಳ ಬಲಾಬಲಗಳನ್ನು ತಿಳಿದು ಪರದೇಶಗಳನ್ನು ಗೆಲ್ಲಬೇಕು. ಶಾಸ್ತ್ರಜ್ಞರೂ ಪ್ರಾಜ್ಞರೂ ಆದವರೊಡನೆ ಚರ್ಚೆಯನ್ನು ಸಂಕ್ಷಿಪ್ತವಾಗಿ ನಡೆಸಬೇಕು. ನಂತರ ಸ್ವಂತಬುದ್ಧಿಯಿಂದ ಆಳವಾಗಿ ಪರಿಶೀಲಿಸಿ ತೀರ್ಮಾನವನ್ನು ತೆಗೆದುಕೊಳ್ಳಬೇಕು. ಸಾಮ, ದಾನ ಮೊದಲಾದವುಗಳನ್ನು ತಿಳಿದು ಯೋಗಕ್ಷೇಮವನ್ನು ಸಾಧಿಸಬೇಕು. ಅನಂತರ ಸಂಧಿ, ವಿಗ್ರಹ ಮೊದಲಾದ ಆರು ಗುಣಗಳನ್ನು ಪ್ರಯೋಗಿಸಬೇಕು. ಸ್ವದೇಶ ಪರದೇಶಗಳ ಬಗ್ಗೆ ಹೀಗೆ ಎಚ್ಚರದಿಂದ ಚಿಂತಿಸಬೇಕು. ಬುದ್ಧಿವಂತರಾದ ರೈತರು ಗದ್ದೆಗೆ ಬೇಲಿ ಹಾಕಿದಂತೆಯೇ ಇದೂ. ಅಂತಹ ರಾಜನ ಹತ್ತಿರಕ್ಕೆ ಬೇರೆಯವರು ಬರಲು ಸಾಧ್ಯವಾಗುವುದಿಲ್ಲ. ಆತ್ಮಸಂಯಮದಿಂದ ರಾಜನು ಪ್ರಜೆಗಳ ಪ್ರೀತಿಯಿಂದಲೇ ಸಂಪದಭಿವೃದ್ಧಿಗೆ ಪಾತ್ರನಾಗುತ್ತಾನೆ.

ರಾಜನೀತಿಯ ಸಾರವನ್ನು ನಡುವೆ ಗರ್ಭೀಕರಿಸಿಕೊಂಡು ಕಥೆ ಮುಂದೆ ಸಾಗುತ್ತದೆ. ಕಳಿಂಗಸೇನೆಯನ್ನು ಮದನಮಂಚುಕೆಯ ವಿವಾಹದ ಚಿಂತನೆ ಆವರಿಸಿಕೊಳ್ಳುತ್ತದೆ. ಅವಳನ್ನು ಯಾರಾದರೂ ತನ್ನಂತೆಯೇ ಮಾಯೆಯಿಂದ ಮರುಳುಗೊಳಿಸಿಬಿಡಬಹುದೆಂಬ ಆತಂಕದಿಂದ ನರವಾಹನದತ್ತನಿಗೆ ಅವಳನ್ನು ಮದುವೆಮಾಡಿಕೊಡಲು ಪ್ರಸ್ತಾಪಿಸುತ್ತಾಳೆ. ನರವಾಹನದತ್ತನೋ ಉತ್ಫುಲ್ಲಪದ್ಮನಯನೆಯೂ, ದಲತ್ಕುವಲಯೇಕ್ಷಣೆಯೂ, ಬಂಧೂಕಕಮನೀಯವಾದ ಅಧರಗಳುಳ್ಳವಳೂ, ಶಿರೀಷಕೋಮಲೆಯೂ ಆದ ಮದನಮಂಚುಕೆಯಲ್ಲಿ ಆಸಕ್ತನಾಗುತ್ತಾನೆ. ರಾಜನು ಮಂತ್ರಿಗಳೊಡನೆ ಚರ್ಚಿಸಿ ಕಳಿಂಗಸೇನೆಯು ವೇಶ್ಯೆ ಎಂಬ ಮಾತಿದೆಯಲ್ಲ, ಈ ಮದುವೆ ಹೇಗೆ ಸಾಧ್ಯ ಎಂದು ಕೇಳಿದಾಗ ಈಶ್ವರನ ಅಶರೀರವಾಣಿ ಕೇಳಿಸುತ್ತದೆ. 'ಮನ್ಮಥನ ಅವತಾರವೇ ನರವಾಹನದತ್ತ. ರತಿಯೇ ಮದನಮಂಚುಕೆ. ನನ್ನ ಅನುಗ್ರಹದಿಂದಲೇ ಅವಳು ನರವಾಹನದತ್ತನೊಡನೆ ವಿದ್ಯಾಧರರಾಜ್ಯವನ್ನು ಆಳುವಳು.'

ನಂತರ ಎಲ್ಲವೂ ಸುಖಾಂತವಾಗುತ್ತದೆ. ಇಡೀ ಭೂಮಂಡಲವೇ ಆಶ್ಚರ್ಯಪಡುವಂತೆ ವಿವಾಹ ಸಮಾರಂಭ ನೆರವೇರುತ್ತದೆ. ನರವಾಹನದತ್ತನು ಮದನಮಂಚುಕೆಯೊಡನೆ ದೇವಲೋಕದ ಸುಖವನ್ನು ಅನುಭವಿಸುತ್ತಾನೆ.

ಮದನಮಂಚುಕಾಲಂಬಕ ಇಲ್ಲಿಗೆ ಮುಗಿಯುತ್ತದೆ. ಆಧ್ಯಾತ್ಮಿಕ ದರ್ಶನದಿಂದ ಪ್ರಾರಂಭವಾಗುವ ಈ ಲಂಬಕ ನರವಾಹನದತ್ತನ ಶೃಂಗಾರದಲ್ಲಿ ಕೊನೆಗೊಳ್ಳುತ್ತದೆ. ವಿಧಿಯ ಪಾತ್ರವನ್ನು ಶ್ರುತಿಯಂತೆ ಉದ್ದಕ್ಕೂ ಸ್ಥಿರಗೊಳಿಸಲಾಗಿದೆ. ಎಲ್ಲರೂ ಅದಕ್ಕೆ ಅನುಗುಣವಾಗಿ ನಡೆದುಕೊಳ್ಳುವ ಪಾತ್ರಗಳಾಗುತ್ತಾರೆ.

ನಡುವೆ ಜಾರಜಾರಿಣಿಯರು, ವಂಚಕರು, ಬ್ರಹ್ಮಜ್ಞಾನ, ಶೂರರು, ಹೇಡಿಗಳು, ವಿದ್ಯಾಧರರು, ಬ್ರಹ್ಮರಾಕ್ಷಸ, ಆಕಾಶಗಮನ, ವಿಮಾನಗಳು, ಯಂತ್ರಗಳು, ರಾಜನೀತಿ ಮುಂತಾದುವೆಲ್ಲ ಬಂದು ಕಥೆಗಳಲ್ಲಿ ಕುತೂಹಲ ಹುಟ್ಟಿಸುತ್ತವೆ. ಕಥೆಗಳ ಘಟನೆಗಳ ಸ್ವಾರಸ್ಯವು ಎಲ್ಲೂ ಕುಂದುವುದಿಲ್ಲ. ಮನುಷ್ಯರ ಸ್ವಭಾವಗಳನ್ನು ಅನಾವರಣಗೊಳಿಸುತ್ತಾ ಉಪಕಥೆಗಳು ಸಾಗುತ್ತವೆ. ಇಲ್ಲಿ ಉಪಕಥೆಗಳ ಪಾತ್ರಗಾತ್ರಗಳೇ ಹೆಚ್ಚೆನ್ನಬಹುದು. ಉಪಕಥೆಗಳೆಂಬ ಉಪನದಿಗಳೆಲ್ಲ ಸೇರಿಕೊಂಡು ಮುಖ್ಯವಾಹಿನಿಯು ತನ್ನ ಶರೀರವನ್ನು ಹಿಗ್ಗಿಸಿಕೊಂಡು ಸಾಗರವಾಗುತ್ತದೆ.

ಈ ಕಥೆಗಳ ಓಘದಲ್ಲಿ ಕಥೆಗಳಿಗೇ ಪ್ರಾಧಾನ್ಯವಿದ್ದು ಅವುಗಳನ್ನು ಸಂಕ್ಷಿಪ್ತವಾದ ವರ್ಣನೆಗಳು ಅಲ್ಲಲ್ಲಿ ಸಿಂಗರಿಸುತ್ತವೆ. ಮದನಮಂಚುಕೆಯ ಸೌಂದರ್ಯದ ಬಗ್ಗೆ ವಿವಾಹ ಸಂಭ್ರಮ ಮುಂತಾದ ಸಂದರ್ಭಗಳಲ್ಲಿ ಹಿತಮಿತವಾದ ಸುಂದರವಾದ ವರ್ಣನೆಗಳು ಬರುತ್ತವೆ. ಅನೇಕ ಕಡೆ ಶಬ್ದಾರ್ಥಗಳ ಸೌಂದರ್ಯವನ್ನು ಅನುಭವಿಸುತ್ತಾ ಮುಂದೆ ಸಾಗುತ್ತೇವೆ. ಈ ಅಂಶವೇ ಈ ಕೃತಿಗೆ ಕಾವ್ಯತ್ವವನ್ನು ಕೊಡುವುದು.

ಈ ಲಂಬಕದಲ್ಲಿ ಮದನಮಂಚುಕೆಯ ಪಾತ್ರವು ಕೊನೆಯಲ್ಲಿ ಬಂದರೂ ಅದರ ಸುತ್ತ ಘಟನಾವಳಿಗಳು ವಿಶೇಷವಾಗಿ ನಡೆಯದಿದ್ದರೂ ಆ ಪಾತ್ರದ ತಾಯಿಯ ಪಾತ್ರ ಮಹತ್ವದ್ದು. ಆದರೆ ಮದನಮಂಚುಕೆಯು ನರವಾಹನದತ್ತನ ಜೀವಿತದ ಭಾಗವಾದುದರಿಂದ ಅವಳಿಗೊಂದು ವಿಶಿಷ್ಟಸ್ಥಾನ. ಇದು ಏನೇ ಆದರೂ ಈ ಲಂಬಕದಲ್ಲಿ ಮನಸ್ಸಿನಲ್ಲಿ ನಿಲ್ಲುವಂತಹವು ಮಂತ್ರಿಯಾದ ಯೌಗಂಧರಾಯಣನ ರಾಜತಂತ್ರ, ರಾಜನಿಷ್ಠೆಗಳು. ಈ ಅಂಶಗಳು ಭಾಸ ಮುಂತಾದವರಿಗೆ ಪ್ರೇರಣೆ ಕೊಟ್ಟಂತಹವು. ಮುಂದಿನ ಸೃಷ್ಟಿಶೀಲ ಸಾಹಿತ್ಯಕ್ಕೆ ಆಕರವಾಗಿ ಸಾಮಾಜಿಕ ಜಗತ್ತಿಗೆ ಕಲ್ಪನೆಯನ್ನು ಒಯ್ದಂತಹವು.

ಈ ಲಂಬಕದ ಅನುವಾದವನ್ನು ಸಾಧ್ಯವಾದಷ್ಟು ಮೂಲಕ್ಕೆ ಹತ್ತಿರವಿರುವಂತೆ ಪ್ರತಿಪದಾರ್ಥಸ್ವರೂಪವನ್ನು ಬಿಟ್ಟು ಅರ್ಥಸ್ಪಷ್ಟತೆಯನ್ನು ಗುರಿಯಾಗಿಟ್ಟುಕೊಂಡು ಮಾಡಲಾಗಿದೆ. ಇದರಲ್ಲೂ ಕೆಲವು ಶ್ಲೋಕಗಳು ತಮ್ಮ ಅರ್ಥವನ್ನು ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಅಂತಹವುಗಳನ್ನು ಸನ್ನಿವೇಶಗಳ ಆಧಾರದಿಂದ ಸಾಧ್ಯತೆಯ ಆಧಿಕ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುವಾದ ಮಾಡಲಾಗಿದೆ. ಸಂಸ್ಕೃತ ಸಾಹಿತ್ಯಕ್ಕೆ ಅನೇಕ ರೀತಿಯ ಅನುವಾದಗಳನ್ನು ಮಾಡಿಸಿಕೊಳ್ಳುವ ಶಕ್ತಿಯಿದೆ. ಅಂತಹ ಅನುವಾದ ಸಾಧ್ಯತೆಗಳಲ್ಲಿ ಇದೂ ಒಂದು ಎಂದು ಮಾತ್ರ ಹೇಳಬಹುದಾಗಿದೆ.

**ಡಾ.ಪಿ.ಎಸ್. ರಾಮಾನುಜಂ**

ಸಂಪಾದಕರು

# ಪರಿವಿಡಿ



## ಕಥಾಸರಿತ್ಸಾಗರ

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

(ಸಂಪುಟ ೪)

( ಲಂಬಕ: ಮದನಮಂಚುಕಾ)

ಮಹಾಕವಿ ಶ್ರೀಸೋಮದೇವಭಟ್ಟನಿಂದ
ವಿರಚಿತವಾದ

# ಕಥಾಸರಿತ್ಸಾಗರ

## 'ಮದನಮಂಚುಕಾ' ಎಂಬ ಆರನೆಯ ಲಂಬಕ

ಬಹಳ ಹಿಂದೆ ಶಿವನ ಮುಖಸಮುದ್ರದಿಂದ ಪರ್ವತರಾಜನ ಮಗಳ (ಪಾರ್ವತಿಯ) ಪ್ರೇಮವೆಂಬ ಮಂದರ ಪರ್ವತದ ಮಂಥನದಿಂದ ಈ ಕಥಾಮೃತವು ಹುಟ್ಟಿತು. ಇದನ್ನು ಪ್ರಯತ್ನ ಪೂರ್ವಕವಾಗಿ ಆಸ್ವಾದಿಸುವವರು ಯಾವುದೇ ವಿಘ್ನವಿಲ್ಲದೆ ಸಮೃದ್ಧಿಯನ್ನು ಪಡೆದು ಪರಮೇಶ್ವರನ ಪ್ರಸಾದದಿಂದ ಭೂಲೋಕದಲ್ಲಿ ಜ್ಞಾನಮಾರ್ಗದ ಧುರಂಧುರಾಗುತ್ತಾರೆ.

## ಮೊದಲನೆಯ ತರಂಗ

೧ (ತನ್ನ) ತಲೆಯನ್ನು ಮತ್ತೆ ಮತ್ತೆ ಮೇಲೆ ಕೆಳಗೆ ಆಡಿಸುವುದರ ಮೂಲಕ, ಅಡ್ಡಿ ಆತಂಕಗಳ ಪ್ರವಾಹವನ್ನು ಹೆದರಿಸುತ್ತಿರುವನೋ ಎಂಬಂತೆ ತೋರಿಬರುವ ಆ ಗಜಮುಖನು ನಿಮ್ಮನ್ನು ಪೊರೆಯಲಿ.

---

ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತ :
ಕಥಾಸರಿತ್ಸಾಗರ:
ಮದನಮಂಚುಕಾ ನಾಮ ಷಷ್ಠೋ ಲಂಬಕಃ

ಇದಂ ಗುರುಗಿರೀಂದ್ರಜಾಪ್ರಣಯಮಂದರಾಂದೋಲನಾತ್
ಪುರಾ ಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಮ್ ।
ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ದ್ಧಯೋ
ಧುರಂ ದಧತಿ ವೈಬುಧೀಂ ಭುವಿ ಭವಪ್ರಸಾದೇನ ತೇ ॥

## ಪ್ರಥಮಸ್ತರಂಗಃ

ತರ್ಜಯನ್ನಿವ ವಿಘ್ನೌಘಾನ್ನಮಿತೋನ್ನಮಿತೇನ ಯಃ ।
ಮುಹುರ್ವಿಭಾತಿ ಶಿರಸಾ ಸ ಪಾಯಾದ್ವೋ ಗಜಾನನಃ ॥ ೧

೧. ಯಾರ ಬಾಣ ಪ್ರಹಾರಗಳಿಂದ, ಪಾರ್ವತಿಯ ಅಪ್ಪುಗೆ ಪಡೆದ ಪರಶಿವನ ಶರೀರವು ಕೂಡ ಸದಾ ರೋಮಾಂಚನಗೊಂಡಿರುವಂತೆ ತೋರುವುದೋ ಅಂತಹ ಕಾಮದೇವನಿಗೆ ನಮಸ್ಕಾರ.

೨-೪. ಪತ್ನಿಯರೊಡನಿದ್ದ ಮಹರ್ಷಿಗಳು ಒಂದು ಸಂದರ್ಭದಲ್ಲಿ ನರವಾಹನದತ್ತನನ್ನು ಪ್ರಶ್ನಿಸಿದಾಗ ವಿದ್ಯಾಧರನ ಸಿದ್ಧಿಯನ್ನು ಪಡೆದಿದ್ದ ಅವನು ಬೇರೆಯವರಂತೆ ತಾನೇ ದಿವ್ಯಚರಿತೆಯನ್ನು ಮೊದಲಿನಿಂದ ಹೇಳಿದನು. ಅದನ್ನು ಈಗ ಕೇಳಿರಿ.

೫ ತಂದೆಯಾದ ವತ್ಸರಾಜನು ನರವಾಹನದತ್ತನನ್ನು ಬೆಳಸುತ್ತಿರಲಾಗಿ ಅವನು ಎಂಟನೆಯ ವರ್ಷವನ್ನು ದಾಟಿದನು.

೬ ವಿದ್ಯೆಗಳಲ್ಲಿ ಶಿಕ್ಷಣವನ್ನು ಪಡೆಯುತ್ತಾ ಆ ರಾಜಪುತ್ರನು ಮಂತ್ರಿಗಳ ಮಕ್ಕಳ ಜೊತೆ ಉದ್ಯಾನದಲ್ಲಿ ಆಟವಾಡಿಕೊಳ್ಳುತ್ತಿದ್ದನು.

೭ ಮಹಾರಾಣಿಯಾದ ವಾಸವದತ್ತೆಯೂ ರಾಣಿಯಾದ ಪದ್ಮಾವತಿಯೂ ಸಮಾನವಾದ ಪ್ರೀತಿಯಿಂದ ರಾತ್ರಿಹಗಲು ರಾಜಪುತ್ರನ ಮುಂದೆಯೇ ಇದ್ದು ನೋಡಿಕೊಳ್ಳುತ್ತಿದ್ದರು.

---

ನಮಃಕಾಮಾಯ ಯದ್ಬಾಣಪಾತೈರಿವ ನಿರಂತರಮ್ ।
ಭಾತಿ ಕಂಟಕಿತಂ ಶಂಭೋರಪ್ಯುಮಾಲಿಂಗಿತಂ ವಪುಃ ॥ ೧

ಇತ್ಯಾದಿ ದಿವ್ಯಚರಿತಂ ಕೃತ್ವಾತ್ಮಾನಂ ಕಿಲಾನ್ಯವತ್ ।
ಪ್ರಾಪ್ತವಿದ್ಯಾಧರೈಶ್ವರ್ಯೋ ಯದಾ ಮೂಲಾತ್ ಸ್ವಯಂ ಜಗೌ॥ ೨

ನರವಾಹನದತ್ತೋಽತ್ರ ಸಪತ್ನೀಕೈರ್ಮಹರ್ಷಿಭಿಃ ।
ಪೃಷ್ಟಃ ಪ್ರಸಂಗೇ ಕುತ್ರಾಪಿ ತದಿದಂ ಶೃಣುತಾಧುನಾ ॥ ೪

ಅಥ ಸಂವರ್ಧ್ಯಮಾನೋಽತ್ರ ಪಿತ್ರಾ ವತ್ಸೇಶ್ವರೇಣ ಸಃ ।
ನರವಾಹನದತ್ತೋಽಭೂದ್ ವ್ಯತ್ಕ್ರಾಂತಾಷ್ಟಮವತ್ಸರಃ ॥ ೫

ವಿನೀಯಮಾನೋ ವಿದ್ಯಾಸು ಕ್ರೀಡನ್ನುಪವನೇಷು ಚ ।
ಸಹ ಮಂತ್ರಿಸುತೈರಾಸೀದ್ರಾಜಪುತ್ರಸ್ತದಾ ಚ ಸಃ ॥ ೬

ದೇವೀ ವಾಸವದತ್ತಾ ಚ ರಾಜ್ಞೀ ಪದ್ಮಾವತೀ ತಥಾ ।
ಆಸ್ತಾಮೇಕತಮಸ್ನೇಹಾತ್ತದೇಕಾಗ್ರೇ ದಿವಾನಿಶಮ್ ॥ ೭

೮. ಆ ರಾಜಕುಮಾರನು ಬೆಳೆಯುತ್ತಿರುವ ಗುಣಗಳಿಂದ ವಿನಯಶಾಲಿಯಾದ ಹಾಗೂ ಒಳ್ಳೆಯ ವಂಶದಲ್ಲಿ ಹುಟ್ಟಿದ ಮತ್ತು ನಿಧಾನವಾಗಿ ತುಂಬಿಕೊಳ್ಳುತ್ತಿರುವ ತನ್ನ ಶರೀರದಿಂದಲೂ, ಒಳ್ಳೆಯ ಬಿದಿರಿನಿಂದ ಮಾಡಿದ, ಮತ್ತು ಒಳ್ಳೆಯ ಹೆದೆಯಿಂದ ಸಂಪೂರ್ಣವಾಗಿ ಬಗ್ಗಿದ ಬಿಲ್ಲಿನಿಂದಲೂ ಶೋಭಿಸಿದನು.

೯. ಆತನ ತಂದೆಯಾದ ವತ್ಸರಾಜನಾದರೋ ಇನ್ನೇನು ಕೈಗೂಡಲಿರುವುದರಿಂದ ಮನೋಹರವೆನಿಸಿದ ಮಗನ ಮದುವೆ ಮುಂತಾದ ಮನೋರಥಗಳೊಡನೆ ಸಮಯವನ್ನು ಕಳೆದನು.

೧೦. ಇಷ್ಟರಲ್ಲಿ ಕಥೆಯ ನಡುವೆ ಏನಾಯಿತು ಎಂಬುದನ್ನು ಕೇಳಿರಿ. ವಿತಸ್ತಾ ನದಿಯ ದಡದಲ್ಲಿ ತ್ಕ್ಷಶಿಲಾ ಎಂಬ ನಗರವಿತ್ತು.

೧೧. ಆ ನದಿಯ ನೀರಿನಲ್ಲಿ ನಗರದ ಮಹಾಸೌಧಗಳ ಪಂಕ್ತಿಯು ಪ್ರತಿಬಿಂಬಿತವಾಗಿ ಅದು ತನ್ನ ಶೋಭೆಯನ್ನು ಕಾಣಲೆಂದು ಬಂದ ಪಾತಾಳಲೋಕದ ಪಟ್ಟಣದಂತೆ ಕಾಣುತ್ತಿತ್ತು.

೧೨–೧೩. ಅದರಲ್ಲಿ ಪರಮಬೌದ್ಧನಾದ ಕಳಿಂಗದತ್ತನೆಂಬ ರಾಜನಿದ್ದನು. ನಕ್ಷತ್ರಗಳಂತೆ ತುಂಬಿಹೋಗಿದ್ದ ಆತನ ಪ್ರಜೆಗಳೆಲ್ಲರೂ ಜಿನ ಭಕ್ತರಾಗಿದ್ದರು. ಆ ಪಟ್ಟಣವು ತನಗೆ ಸಮಾನವಾದ ಬೇರೊಂದು ನಗರವೇ ಇಲ್ಲ ಎಂಬುದಾಗಿ ಕೊಬ್ಬಿನಿಂದ ಹುಟ್ಟಿದ ಕೋಡುಗಳಂತಿದ್ದ ಶ್ರೇಷ್ಠ ಚೈತ್ಯಗಳಿಂದ ನಿರಂತರವಾಗಿ ಬೆಳಗುತ್ತಿತ್ತು .

---

ಆರೋಹದ್ಗುಣನಮ್ರೇಣ ರೇಜೇ ಸದ್ವಂಶಜನ್ಮನಾ ।
ಶನೈರಾಪೂರ್ಯಮಾಣೇನ ವಪುಷಾ ಧನುಷಾ ಚ ಸಃ ॥ ೮
ಪಿತಾ ವತ್ಸೇಶ್ವರಶ್ಚಾಸ್ಯ ವಿವಾಹಾದಿಮನೋರಥೈಃ ।
ಆಸನ್ನಫಲಸಂಪತ್ತಿಕಾಂತೈಃ ಕಾಲಂ ನಿನಾಯ ತಮ್ ॥ ೯
ಅತ್ರಾಂತರೇ ಕಥಾಸಂಧೌ ಯದಭೂತ್ತನ್ನಿಶಮ್ಯತಾಮ್ ।
ಆಸೀತ್ ತ್ಕ್ಷಶಿಲಾ ನಾಮ ವಿತಸ್ತಾಪುಲಿನೇ ಪುರೀ ॥ ೧೦
ತದಂಭಸಿ ಬಭೌ ಯಸ್ಯಾಃ ಪ್ರತಿಮಾ ಸೌಧಸಂತತೇಃ ।
ಪಾತಾಲನಗರೀವಾಧಸ್ತಚ್ಛೋಭಾಲೋಕನಾಗತಾ ॥ ೧೧
ತಸ್ಯಾಂ ಕಲಿಂಗದತ್ತಾಖ್ಯೋ ರಾಜಾ ಪರಮಸೌಗತಃ ।
ಅಭೂತ್ತಾರಾವರಸ್ಫೀತಜಿನಭಕ್ತಾಖಿಲಪ್ರಜಃ ॥ ೧೨
ರರಾಜ ಸಾ ಪುರೀ ಯಸ್ಯ ಚೈತ್ಯರತ್ನೈರ್ನಿರಂತರೈಃ ।
ಮತ್ತುಲ್ಯಾ ನಾಮ ನಾಸ್ತೀತಿ ಮದಶೃಂಗೈರಿವೋದಿತೈಃ ॥ ೧೩

೧೪. ಆತನು ತಂದೆಯಂತೆ ಪ್ರಜೆಗಳನ್ನು ಚೆನ್ನಾಗಿ ಕಾಪಾಡುತ್ತಿದ್ದುದು ಮಾತ್ರವಲ್ಲದೆ ಗುರುವಿನಂತೆ ಅವರಿಗೆ ತಾನೇ ಜ್ಞಾನವನ್ನೂ ಉಪದೇಶಿಸುತ್ತಿದ್ದನು.

೧೫. ಹೀಗೆಯೇ ಆ ನಗರದಲ್ಲಿ ಬೌದ್ಧ ಮತಾವಲಂಬಿಯೂ, ಬೌದ್ಧಭಿಕ್ಷುಗಳನ್ನು ಪೂಜಿಸುವುದರಲ್ಲಿಯೇ ಸದಾ ತತ್ಪರನಾಗಿರುವವನೂ, ಶ್ರೀಮಂತನೂ ಆದ ವಿತಸ್ತಾದತ್ತನೆಂಬೊಬ್ಬ ವ್ಯಾಪಾರಿಯಿದ್ದನು.

೧೬. ಅವನಿಗೆ ರತ್ನದತ್ತನೆಂಬ ಹೆಸರಿನ ಯುವಕನಾದ ಮಗನೊಬ್ಬನಿದ್ದನು. ಈತನು ತನ್ನ ತಂದೆ ಪಾಪಿಯೆಂದು ಯಾವಾಗಲೂ ಬೇಸರಪಟ್ಟುಕೊಳ್ಳುತ್ತಿದ್ದನು.

೧೭. "ಪುತ್ರನೆ, ನನ್ನನ್ನು ಏಕೆ ನಿಂದಿಸುತ್ತಿ ?' ಎಂದು ತಂದೆಯು ಕೇಳಿದಾಗ ಆ ವ್ಯಾಪಾರಿಯ ಪುತ್ರನು ಅಸಹನೆಯಿಂದ ಉತ್ತರಿಸಿದನು.

೧೮. "ತಂದೆಯೇ, ನೀನು ವೈದಿಕ ಧರ್ಮವನ್ನು ತ್ಯಜಿಸಿ ಅಧರ್ಮವನ್ನು ಆಚರಿಸುತ್ತಿರುವೆ. ಬ್ರಾಹ್ಮಣರನ್ನು ಬಿಟ್ಟು ಶ್ರಮಣರನ್ನು ಸದಾಪೂಜಿಸುತ್ತಿರುವೆ.

೧೯-೨೦. ಸ್ನಾನ ಮೊದಲಾದ ಕಟ್ಟುಪಾಡುಗಳಿಲ್ಲದ, ಇಷ್ಟ ಬಂದ ವೇಳೆಯಲ್ಲಿ ಊಟ ಮಾಡುವ, ಶಿಖೆಯನ್ನೂ ಉಳಿಸದೆ ಸಂಪೂರ್ಣ ಕೇಶವನ್ನೂ ಕೌಪೀನವನ್ನೂ ತೆಗೆದುಹಾಕಿದ ಮತ್ತು ವಿಹಾರಗಳಲ್ಲಿ ನೆಲೆಸಲು ಆಸೆಯುಳ್ಳ ಹಾಗೂ ಎಲ್ಲ ಮಟ್ಟದ ಜಾತಿಯವರೂ ಆಶ್ರಯಿಸುವ ಬೌದ್ಧಧರ್ಮದಿಂದ ನಿನಗೇನು ಪ್ರಯೋಜನ ?'

---

ಪ್ರಜಾನಾಂ ನ ಪರಂ ಚಕ್ರೇ ಯಃ ಪಿತೇವಾನುಪಾನಲಮ್ ।
ಯಾವದ್ಗುರುರಿವ ಜ್ಞಾನಮಪಿ ಸ್ವಯಮುಪಾದಿಶತ್ ॥ ೧೪
ತಥಾ ಚ ತಸ್ಯಾಂ ಕೋಽಪ್ಯಾಸೀನ್ನಗರ್ಯಾಂ ಸೌಗತೋ ವಣಿಕ್ ।
ಧನೀ ವಿತಸ್ತಾದತ್ತಾಖ್ಯೋ ಭಿಕ್ಷುಪೂಜೈಕತತ್ಪರಃ ॥ ೧೫
ರತ್ನದತ್ತಾಭಿಧಾನಶ್ಚ ತಸ್ಯಾಭೂತ್ತನಯೋ ಯುವಾ ।
ಸ ಚ ತಂ ಪಿತರಂ ಶಶ್ವತ್ ಪಾಪ ಇತ್ಯಾಜುಗುಪ್ಸತ ॥ ೧೬
ಪುತ್ರ ನಿಂದಸಿ ಕಸ್ಮಾನ್ಮಾಮಿತಿ ಪಿತ್ರಾ ಚ ತೇನ ಸಃ ।
ಪೃಚ್ಛ್ಯಮಾನೋ ವಣಿಕ್ಪುತ್ರಃ ಸಾಭ್ಯಸೂಯಮಭಾಷತ ॥ ೧೭
ತಾತ ತ್ಯಕ್ತತ್ರಯೀಧರ್ಮಸ್ತ್ವಮಧರ್ಮಂ ನಿಷೇವಸೇ ।
ಯದ್ಬ್ರಾಹ್ಮಣಾನ್ ಪರಿತ್ಯಜ್ಯ ಶ್ರಮಣಾನ್ ಶಶ್ವದರ್ಚಸಿ ॥ ೧೮
ಸ್ನಾನಾದಿಯಂತ್ರಣಾಹೀನಾಃ ಸ್ವಕಾಲಾಶನಲೋಲುಪಾಃ ।
ಅಪಾಸ್ತಸಶಿಖಾಶೇಷಕೇಶಕೌಪೀನಸುಸ್ಥಿತಾಃ ॥ ೧೯
ವಿಹಾರಾಸ್ಪದಲೋಭಾಯ ಸರ್ವೇಽಪ್ಯಧಮಜಾತಯಃ ।
ಯಮಾಶ್ರಯಂತಿ ಕಿಂ ತೇನ ಸೌಗತೇನ ನಯೇನ ತೇ ॥ ೨೦

೨೧. ಅದನ್ನು ಕೇಳಿ ಆ ವ್ಯಾಪಾರಿಯು ಹೇಳಿದನು. "ಪುತ್ರನೆ, ಧರ್ಮವು ಒಂದೇ ಸ್ವರೂಪದ್ದಲ್ಲ. ಲೋಕೋತ್ತರ ಧರ್ಮವೇ ಬೇರೆ, ಸಾರ್ವಲೌಕಿಕ ಧರ್ಮವೇ ಬೇರೆ.

೨೨–೨೩. ರಾಗದ್ವೇಷಗಳಿಲ್ಲದಿರುವುದನ್ನು ಬ್ರಾಹ್ಮಣ್ಯವೆಂದು ಕರೆಯುತ್ತಾರೆ. ಸತ್ಯ, ಪ್ರಾಣಿದಯೆಯಿರುವ, ವ್ಯರ್ಥವಾದ ಜಾತಿಕಲಹವಿಲ್ಲದಿರುವ ಅಲ್ಲದೆ, ಎಲ್ಲ ಪ್ರಾಣಿಗಳಿಗೂ ಅಭಯವನ್ನು ನೀಡುವ ಈ ಧರ್ಮವನ್ನು ನೀನು ಪುರುಷದೋಷವನ್ನು ಮುಂದಿಟ್ಟುಕೊಂಡು ದೂಷಿಸಬಾರದು.

೨೪–೨೫. ಉಪಕಾರದ ಧರ್ಮಸ್ವರೂಪದ ಬಗ್ಗೆ ಯಾರಿಗೂ ವಿವಾದವಿಲ್ಲ. ಪ್ರಾಣಿಗಳಿಗೆ ಅಭಯವನ್ನು ನೀಡುವುದಕ್ಕಿಂತ ಬೇರೆ ಉಪಕಾರ ನನಗೆ ಕಾಣುತ್ತಿಲ್ಲ. ಅಹಿಂಸೆಯೇ ಪ್ರಧಾನವಾಗಿ ಮೋಕ್ಷದಾಯಕವಾದ ಈ ದರ್ಶನದಲ್ಲಿ ನನಗೆ ಆಸಕ್ತಿಯುಂಟಾದರೆ ಅದು ಅಧರ್ಮ ಹೇಗಾದೀತು ?'

೨೬. ಈ ರೀತಿಯಾಗಿ ಅವನು ಹೇಳಿದಾಗ ಪುತ್ರನು ಅದನ್ನು ಸಹಿಸದೆ ಮತ್ತೆ ತನ್ನ ತಂದೆಯನ್ನು ನಿಂದಿಸಿದನು.

೨೭ ಆಗ ತಂದೆಯು ದುಃಖಗೊಂಡು ಧರ್ಮಶಾಸಕನಾದ ಕಳಿಂಗರಾಜನ ಬಳಿಗೆ ಹೋಗಿ ಎಲ್ಲವನ್ನೂ ಹೇಳಿದನು.

---

ತಚ್ಛ್ರುತ್ವಾ ಸ ವಣಿಕ್ ಪ್ರಾಹ ನ ಧರ್ಮಸ್ಯೈಕರೂಪತಾ ।<br>
ಅನ್ಯೋ ಲೋಕೋತ್ತರಃ ಪುತ್ರ ಧರ್ಮೋಽನ್ಯಃ ಸಾರ್ವಲೌಕಿಕಃ ॥ ೨೧<br>
ಬ್ರಾಹ್ಮಣ್ಯಮಪಿ ತತ್ ಪ್ರಾಹುರ್ಯದ್ರಾಗಾದಿವಿವರ್ಜನಮ್ ।<br>
ಸತ್ಯಂ ದಯಾ ಚ ಭೂತೇಷು ನ ಮೃಷಾ ಜಾತಿವಿಗ್ರಹಃ ॥ ೨೨<br>
ಕಿಂ ಚ ದರ್ಶನಮೇತತ್ ತ್ವಂ ಸರ್ವಸತ್ತ್ವಾಭಯಪ್ರದಮ್ ।<br>
ಪ್ರಾಯಃ ಪುರುಷದೋಷೇಣ ನ ದೂಷಯಿತುಮರ್ಹಸಿ ॥ ೨೩<br>
ಉಪಕಾರಸ್ಯ ಧರ್ಮತ್ವೇ ವಿವಾದೋ ನಾಸ್ತಿ ಕಸ್ಯಚಿತ್ ।<br>
ಭೂತೇಷ್ವಭಯದಾನೇನ ನಾನ್ಯಾ ಚೋಪಕೃತಿರ್ಮಮ ॥ ೨೪<br>
ತದಹಿಂಸಾಪ್ರಧಾನೇಽಸ್ಮಿನ್ ವತ್ಸ ಮೋಕ್ಷಪ್ರದಾಯಿನಿ ।<br>
ದರ್ಶನೇಽತಿರತಿಶ್ಚೇನ್ಮೇ ತದಧರ್ಮೋ ಮಮಾತ್ರ ಕಃ ॥ ೨೫<br>
ಇತಿ ತೇನೋದಿತಃ ಪಿತ್ರಾ ವಣಿಕ್ಪುತ್ರಃ ಪ್ರಸಹ್ಯ ಸಃ ।<br>
ನ ತಥಾ ಪ್ರತಿಪೇದೇ ತನ್ನಿಂದಾಭ್ಯಧಿಕಂ ಪುನಃ ॥ ೨೬<br>
ತತಸ್ಸ ತತ್ಪಿತಾ ಖೇದಾದ್ಗತ್ವಾ ಧರ್ಮಾನುಶಾಸಿತುಃ ।<br>
ರಾಜ್ಞಃ ಕಲಿಂಗದತ್ತಸ್ಯ ಪುರತಃ ಸರ್ವಮಬ್ರವೀತ್ ॥ ೨೭

೨೮. ರಾಜನು ಆ ವ್ಯಾಪಾರಿ ಪುತ್ರನನ್ನು ಉಪಾಯದಿಂದ ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಹುಸಿ ಕೋಪದಿಂದ ಕಟುಕನಿಗೆ ಹೀಗೆಂದು ಆಜ್ಞೆಮಾಡಿದನು.

೨೯. ""ಈ ವ್ಯಾಪಾರಿಪುತ್ರನು ಪಾಪಿಯೂ ದುಷ್ಟನೂ ಆಗಿರುವನು ಎಂದು ನಾನು ಕೇಳಿದ್ದೇನೆ. ಆದ್ದರಿಂದ ಯಾವ ಯೋಚನೆಯನ್ನು ಮಾಡದೆ ಈ ದೇಶದ್ರೋಹಿಯನ್ನು ಕೊಂದು ಹಾಕು."

೩೦-೩೧. ಹೀಗೆ ಹೇಳಿದ ರಾಜನು ತಂದೆಯ ವಿನಂತಿಯ ಮೇರೆಗೆ ಧರ್ಮಾಚರಣೆಗೆ ಎರಡು ತಿಂಗಳು ಅವಕಾಶವನ್ನು ಕೊಟ್ಟು ಅನಂತರ ಪುತ್ರನನ್ನು ಕರೆತನ್ನಿ ಎಂದು ಆಜ್ಞೆಮಾಡಿ ಆ ಪುತ್ರನನ್ನು ಅವನ ತಂದೆಯ ಕೈಗೆ ಒಪ್ಪಿಸಿದನು.

೩೨-೩೩ ತಂದೆಯಿಂದ ಮನೆಗೆ ಕರೆದೊಯ್ಯಲ್ಪಟ್ಟ ಪುತ್ರನು ಭೀತನಾಗಿ "ನಾನು ರಾಜನಿಗೆ ಯಾವ ಅಪಕಾರವನ್ನು ಮಾಡಿದೆ' ಎಂದು ಚಿಂತಿಸುತ್ತಾ ನಿಷ್ಕಾರಣವಾಗಿ ಎರಡು ತಿಂಗಳ ಕೊನೆಯಲ್ಲಿ ಮರಣವು ಎದುರಾಗುವುದನ್ನು ಊಹಿಸಿ ನಿದ್ರಾಹಾರಗಳನ್ನು ಬಿಟ್ಟು ಸೊರಗಿ ಹಗಲಿರುಳೂ ಕಳೆದನು.

೩೪. ಕೃಶನಾಗಿ ಬಿಳಿಚಿಕೊಂಡಿದ್ದ ತನ್ನ ಮಗನನ್ನು ಎರಡು ತಿಂಗಳು ಕಳೆದಮೇಲೆ ವ್ಯಾಪಾರಿಯು ರಾಜನ ಬಳಿಗೆ ಕರೆದೊಯ್ದನು.

---

ಸೋಽಪಿ ರಾಜಾ ತಮಾಸ್ಥಾನೇ ಯುಕ್ತ್ಯಾನಾಯ್ಯ ವಣಿಕ್ಸುತಮ್ ।
ಮೃಷಾರಚಿತಕೋಪಸ್ಸನ್ನೇವಂ ಕ್ಷತ್ತಾರಮಾದಿಶತ್ ॥ ೨೮
ಶ್ರುತಂ ಮಯಾ ವಣಿಕ್ಪುತ್ರಃ ಪಾಪೋಽಯಮತಿದುಷ್ಕೃತೀ ।
ನಿರ್ವಿಚಾರಂ ತದೇಷೋಽದ್ಯ ಹನ್ಯತಾಂ ದೇಶದೂಷಕಃ ॥ ೨೯
ಇತ್ಯೂಚಿವಾಂಸ್ತತಃ ಪಿತ್ರಾ ಕೃತವಿಜ್ಞಾಪನಃ ಕಿಲ ।
ನೃಪತಿರ್ಧರ್ಮಚರ್ಯಾರ್ಥಂ ದ್ವೌ ಮಾಸೌ ವಧನಿಗ್ರಹಮ್ ॥ ೩೦
ಸಂವಿಧಾರ್ಯ ತದಂತೇ ಚ ಪುನರಾನಯನಾಯ ಸಃ ।
ತಸ್ಯೈವ ತತ್ಪಿತುರ್ಹಸ್ತೇ ನ್ಯಸ್ತವಾಂಸ್ತಂ ವಣಿಕುತ್ತಮ್ ॥ ೩೧
ಸೋಽಪಿ ಪಿತ್ರಾ ಗೃಹಂ ನೀತೋ ವಣಿಕ್ಪುತ್ರೋ ಭಯಾಕುಲಃ ।
ಕಿಂ ಮಯಾಪಕೃತಂ ರಾಜ್ಞೋ ಭವೇದಿತಿ ವಿಚಿಂತಯನ್ ॥ ೩೨
ಅಕಾರಣಂ ದ್ವಿಮಾಸಾಂತೇ ಮರಣಂ ಭಾವಿ ಭಾವಯನ್ ।
ಅನಿದ್ರೋಽಪಚಿತಾಹಾರಕ್ಲಾಂತಸ್ತಸ್ಥೌ ದಿವಾನಿಶಮ್ ॥ ೩೩
ತತೋ ಮಾಸದ್ವಯೇ ಯಾತೇ ರಾಜಾಗ್ರೇ ಕೃಶಪಾಂಡುರಃ ।
ಪುನಃ ಸ್ವಪಿತ್ರಾ ತೇನಾಸೌ ವಣಿಕ್ಸೂನುರನೀಯತ ॥ ೩೪

೩೫ ಅಂತಹ ದುಸ್ಥಿತಿಯಲ್ಲಿದ್ದ ಅವನನ್ನು ನೋಡಿ ರಾಜನು ಹೇಳಿದನು : ""ಇದೇನು ನೀನು ಇಷ್ಟೊಂದು ತೆಳ್ಳಗಾಗಿರುವೆ ? ನೀನು ಊಟಮಾಡಲು ನಾನೇನು ತಡೆದಿದ್ದೆನೆ ?".

೩೬–೩೭ ಅದನ್ನು ಕೇಳಿ ಆ ವ್ಯಾಪಾರಿ ಪುತ್ರನು ರಾಜನಿಗೆ ಹೇಳಿದನು. "ಪ್ರಭುವೆ, ಭಯದಿಂದ ನನ್ನನ್ನೇ ಮರೆತಿದ್ದೇನೆ. ಊಟದ ಬಗ್ಗೆ ಏನು ಹೇಳಲಿ ? ನೀವು ವಧೆಗಾಗಿ ಆದೇಶಿಸಿದ್ದನ್ನು ಕೇಳಿದಾಗಿನಿಂದ ಮೃತ್ಯುವು ಬರುತ್ತಾ ಬರುತ್ತಾ ಇರುವುದನ್ನು ಕುರಿತೇ ಪ್ರತಿದಿನವೂ ಚಿಂತಿಸುತ್ತಿದ್ದೇನೆ'

೩೮. ಹೀಗೆ ಹೇಳಿದ ವ್ಯಾಪಾರಿ ಪುತ್ರನಿಗೆ ರಾಜನು ಹೇಳಿದನು. ""ಮಗು! ಪ್ರಾಣಭಯ ಎಂತಹದು ಎಂದು ನಾನು ನಿನಗೆ ಉಪಾಯದಿಂದ ತಿಳಿಸಿದೆ.

೩೯. ಇದೇ ರೀತಿಯಲ್ಲಿ ಎಲ್ಲ ಪ್ರಾಣಿಗಳಿಗೂ ಮೃತ್ಯುಭಯ ಇದ್ದೇ ಇರುತ್ತದೆ. ಮೃತ್ಯುವಿನಿಂದ ರಕ್ಷಿಸುವುದಕ್ಕಿಂತಲೂ ಮಿಗಿಲಾದ ಯಾವ ಧರ್ಮವಿದೆ, ಹೇಳು.

೪೦. ಆದ್ದರಿಂದ ನಿನಗೆ ಧರ್ಮ ಮತ್ತು ಮೋಕ್ಷದ ಜ್ಞಾನಕ್ಕೋಸ್ಕರ ಇದನ್ನು ತೋರಿಸಲಾಯಿತು. ಮರಣಕ್ಕೆ ಹೆದರಿ ಬುದ್ಧಿವಂತ ಮನುಷ್ಯನು ಮೋಕ್ಷಕ್ಕಾಗಿ ಪ್ರಯತ್ನಿಸುತ್ತಾನೆ.

೪೧. ಆದ್ದರಿಂದ ಈ ಧರ್ಮವನ್ನು ಆಚರಿಸುವ ನಿನ್ನ ತಂದೆಯನ್ನು ನೀನು ನಿಂದಿಸಬಾರದು" ಎಂದು ರಾಜನು ಹೇಳಿದ ಮಾತನ್ನು ಕೇಳಿ ವಿನೀತನಾಗಿ ವ್ಯಾಪಾರಿಪುತ್ರನು ಹೇಳಿದನು.

---

ರಾಜಾ ತಂ ಚ ತಥಾಭೂತಂ ವೀಕ್ಷ್ಯಾಪೃಚ್ಛನ್ನಮಭಾಷತ ।
ಕಿಮೀದೃಕ್ ತ್ವಂ ಕೃಶೀಭೂತಃ ಕಿಂ ರುದ್ಧಂ ತೇ ಮಯಾಶನಮ್ ॥ ೩೫
ತಚ್ಛ್ರುತ್ವಾ ಸ ವಣಿಕ್ಪುತ್ರೋ ರಾಜಾನಂ ತಮಭಾಷತ ।
ಆತ್ಮಾಪಿ ವಿಸ್ಮೃತೋ ಭೀತ್ಯಾ ಮಮ ಕಾ ತ್ವಶನೇ ಕಥಾ ॥ ೩೬
ಯುಷ್ಮದಾದಿಷ್ಟನಿಧನಶ್ರವಣಾತ್ ಪ್ರಭೃತಿ ಪ್ರಭೋ ।
ಮೃತ್ಯುಮಾಯಾಂತಮಾಯಾಂತಮನ್ವಹಂ ಚಿಂತಯಾಮ್ಯಹಮ್ ॥ ೩೭
ಇತ್ಯುಕ್ತವಂತಂ ತಂ ರಾಜಾ ಸ ವಣಿಕ್ಪುತ್ರಮಬ್ರವೀತ್ ।
ಬೋಧಿತೋಽಸಿ ಮಯಾ ವತ್ಸ ಯುಕ್ತ್ಯಾ ಪ್ರಾಣಭಯಂ ಸ್ವತಃ ॥ ೩೮
ಈದೃಗೇವ ಹಿ ಸರ್ವಸ್ಯ ಜಂತೋರ್ಮೃತ್ಯುಭಯಂ ಭವೇತ್ ।
ತದ್ರಕ್ಷೋಪಕಾರಾಚ್ಚ ಧರ್ಮಃ ಕೋಽಭ್ಯಧಿಕೋ ವದ ॥ ೩೯
ತದೇತತ್ತವ ಧರ್ಮಾಯ ಮುಮುಕ್ಷಾಯೈ ಚ ದರ್ಶಿತಮ್ ।
ಮೃತ್ಯುಭೀತೋ ಹಿ ಯತತೇ ನರೋ ಮೋಕ್ಷಾಯ ಬುದ್ಧಿಮಾನ್ ॥ ೪೦
ಅತೋ ನ ಗರ್ಹಣೀಯೋಽಯಮೇತದ್ಧರ್ಮಾ ಪಿತಾ ತ್ವಯಾ ।
ಇತಿ ರಾಜವಚಃ ಶ್ರುತ್ವಾ ಪ್ರಹ್ವೋಽವಾದೀದ್ವಣಿಕ್ಸುತಃ ॥ ೪೧

೪೨. "ಪ್ರಭುಗಳ ಧರ್ಮೋಪದೇಶದಿಂದ ನಾನು ಕೃತಾರ್ಥನಾದೆ. ಮೋಕ್ಷದ ಬಗ್ಗೆ ಆಸಕ್ತಿ ಉಂಟಾಗಿದೆ. ಪ್ರಭುವೆ, ನನಗೂ ಅದನ್ನು ಬೋಧಿಸಿ.'

೪೩. ಅದನ್ನು ಕೇಳಿ ರಾಜನು ಪುರದ ಉತ್ಸವ ಬಂದಾಗ ಅವನ ಕೈಯಲ್ಲಿ ಎಣ್ಣೆ ತುಂಬಿದ ಪಾತ್ರೆಯನ್ನು ಇಟ್ಟು ಹೇಳಿದನು.

೪೪. "ಈ ಪಾತ್ರೆಯನ್ನು ತೆಗೆದುಕೊಂಡು ನೀನು ಊರಲ್ಲೆಲ್ಲ ಸುತ್ತಾಡಿ ಬಾ. ಎಣ್ಣೆಯ ಒಂದು ಹನಿಯೂ ಬೀಳದಂತೆ ನೀನು ರಕ್ಷಿಸಬೇಕು.

೪೫. ಎಣ್ಣೆಯ ಒಂದೇ ಒಂದು ಹನಿ ಕೆಳಗೆ ಬಿದ್ದರೆ ಕೂಡಲೇ ಈ ಪುರುಷರು ನಿನ್ನನ್ನು (ನಿನ್ನತಲೆಯನ್ನು) ಉರುಳಿಸುವರು.'

೪೬. ಈ ರೀತಿಯಾಗಿ ಹೇಳಿ ರಾಜನು ಆ ವ್ಯಾಪಾರಿ ಪುತ್ರನ್ನು ತಿರುಗಾಡಲು ಕಳಿಸಿಕೊಟ್ಟು ಅವನ ಹಿಂದೆ ಬಿಚ್ಚುಗತ್ತಿಯ ಪುರುಷರನ್ನು ಇಟ್ಟು ಕಳಿಸಿಕೊಟ್ಟನು.

೪೭. ವ್ಯಾಪಾರಿ ಪುತ್ರನೂ ಸಹ ಭಯದಿಂದ ಒಂದೇ ಒಂದು ತೈಲಬಿಂದುವೂ ಬೀಳದಂತೆ ರಕ್ಷಿಸುತ್ತಾ ಆ ಊರಿನಲ್ಲಿ ಸುತ್ತಾಡಿ ಬಹಳ ಕಷ್ಟದಿಂದ ರಾಜನ ಹತ್ತಿರಕ್ಕೆ ಬಂದನು.

೪೮. ತೈಲವನ್ನು ಚೆಲ್ಲದೆ ತಂದಿದ್ದನ್ನು ನೋಡಿ ರಾಜನು ಅವನಿಗೆ ಹೇಳಿದನು. "ಪುರದಲ್ಲಿ ನೀನು ಸುತ್ತಾಡುವಾಗ ಯಾರನ್ನಾದರೂ ನೋಡಿದೆಯಾ".

---

ಧರ್ಮೋಪದೇಶಾದ್ದೇವೇನ ಕೃತೀ ತಾವದಹಂ ಕೃತಃ ।
ಮೋಕ್ಷಾಯೇಚ್ಛಾ ಪ್ರಜಾತಾ ಮೇ ತಮಪ್ಯುಪದಿಶ ಪ್ರಭೋ ॥ ೪೨
ತಚ್ಛ್ರುತ್ವಾ ತಂ ವಣಿಕ್ಪುತ್ರಂ ಪ್ರಾಪ್ತೇ ತತ್ರ ಪುರೋತ್ಸವೇ ।
ತೈಲಪೂರ್ಣಂ ಕರೇ ಪಾತ್ರಂ ದತ್ವಾ ರಾಜಾ ಜಗಾದ ಸಃ ॥ ೪೩
ಇದಂ ಪಾತ್ರಂ ಗೃಹೀತ್ವಾ ತ್ವಮೇಹಿ ಭ್ರಾಂತ್ವಾ ಪುರೀಮಿಮಾಮ್ ।
ತೈಲಬಿಂದುನಿಪಾತಶ್ಚ ರಕ್ಷಣೀಯಸ್ತ್ವಯಾ ಸುತ ॥ ೪೪
ನಿಪತಿಷ್ಯತಿ ಯದ್ಯೇಕಸ್ತೈಲಬಿಂದುರಿತಸ್ತವ ।
ಸದ್ಯೋ ನಿಪಾತಯಿಷ್ಯಂತಿ ತ್ವಾಮೇತೇ ಪುರುಷಾಸ್ತತಃ ॥ ೪೫
ಏವಂ ಕಿಲೋಕ್ತ್ವಾ ವ್ಯಸೃಜತ್ತಂ ಭ್ರಮಾಯ ವಣಿಕ್ಸುತಮ್ ।
ಉತ್ಖಾತಖಡ್ಗಾನ್ ಪುರುಷಾನ್ ದತ್ವಾ ಪಶ್ಚಾತ್ಸ ಭೂಪತಿಃ ॥ ೪೬
ವಣಿಕ್ಪುತ್ರೋಽಪಿ ಸ ಭಯಾದ್ರಕ್ಷಂಸ್ತೈಲಲವಚ್ಯುತಿಮ್ ।
ಪುರೀಂ ತಾಮಭಿತೋ ಭ್ರಾಂತ್ವಾ ಕೃಚ್ಛ್ರಾದಾಗಾತ್ ನೃಪಾಂತಿಕಮ್ ॥ ೪೭
ನೃಪೋಽಪ್ಯಗಲಿತಾನೀತತೈಲಂ ದೃಷ್ಟ್ವಾ ತಮಭ್ಯಧಾತ್ ।
ಕಶ್ಚಿತ್ ಪುರಭ್ರಮೇಽಪ್ಯದ್ಯ ದೃಷ್ಟೋಽತ್ರ ಭ್ರಮತಾ ತ್ವಯಾ ॥ ೪೮

೪೯. ಅದನ್ನು ಕೇಳಿ ವರ್ತಕನ ಮಗನು ಕೈಮುಗಿದುಕೊಂಡು ಹೇಳಿದನು. ""ರಾಜನೇ, ನಿಜ ಹೇಳಬೇಕು ಎನ್ನುವುದಾದರೆ ನಾನು ಏನನ್ನೂ ನೋಡಲೂ ಇಲ್ಲ ಕೇಳಲೂ ಇಲ್ಲ

೫೦. ನಾನು ಖಡ್ಗವು ಬೀಳುವುದೆಂಬ ಭಯದಿಂದ ಎಣ್ಣೆಯು ಚೆಲ್ಲದಿರುವಂತೆ ಏಕಾಗ್ರತೆಯಿಂದ ರಕ್ಷಿಸುತ್ತಾ ಪುರವನ್ನು ಸುತ್ತಿದೆನು."

೫೧. ಹೀಗೆ ವ್ಯಾಪಾರಿಯ ಪುತ್ರನು ಹೇಳಿದ್ದನ್ನು ಕೇಳಿ ರಾಜನು ಅವನಿಗೆ ಹೇಳಿದನು. "ತೈಲವನ್ನು ಏಕಚಿತ್ತತೆಯಿಂದ ನೋಡುತ್ತಿದ್ದ ನೀನು ಬೇರೆ ಏನನ್ನೂ ನೋಡಲಿಲ್ಲ.

೫೨. ಅದೇ ರೀತಿಯ ತನ್ಮಯತೆಯಿಂದ ಮೋಕ್ಷವನ್ನು ಕುರಿತೂ ಧ್ಯಾನಿಸು. ಏಕಾಗ್ರತೆಯುಳ್ಳವನು ಬಾಹ್ಯ ವೃತ್ತಿಯಿಂದ ದೂರನಾಗಿ ತತ್ತ್ವವನ್ನು ಕಾಣುತ್ತಾನೆ.

೫೩. ತತ್ತ್ವದರ್ಶನವುಳ್ಳವನು ಮತ್ತೆ ಕರ್ಮಪಾಶದಲ್ಲಿ ಸಿಕ್ಕಿಬೀಳುವುದಿಲ್ಲ. ಈ ಮೋಕ್ಷೋಪದೇಶವನ್ನು ನಾನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ.'

೫೪. ಹೀಗೆ ರಾಜನು ಹೇಳಿ ಅವನನ್ನು ಕಳಿಸಿಕೊಟ್ಟನು. ಆ ವ್ಯಾಪಾರಿಯ ಪುತ್ರನೂ ರಾಜನ ಕಾಲಿಗೆ ಬಿದ್ದು ಕೃತಾರ್ಥನಾಗಿ ಸಂತೋಷದಿಂದ ತನ್ನ ತಂದೆಯ ಮನೆಗೆ ಹೋದನು.

೫೫. ಹೀಗೆ ಪ್ರಜೆಗಳನ್ನು ಚೆನ್ನಾಗಿ ಆಳುತ್ತಿದ್ದ ಕಳಿಂಗದತ್ತನಿಗೆ ತಾರಾದತ್ತೆ ಎಂಬ ಹೆಸರಿನ ರಾಣಿ ಇದ್ದಳು. ಆಕೆ ರಾಜನಿಗೆ ತಕ್ಕ ಉತ್ತಮ ಕುಲದವಳಾಗಿದ್ದಳು.

---

ತಚ್ಛ್ರುತ್ವಾ ಸ ವಣಿಕ್ಪುತ್ರಃ ಪ್ರೋವಾಚ ರಚಿತಾಂಜಲಿಃ ।
ಯತ್ಸತ್ಯಂ ನ ಮಯಾ ದೇವ ದೃಷ್ಟಂ ಕಿಂಚಿನ್ನ ಚ ಶ್ರುತಮ್ ॥ ೪೯
ಅಹಂ ಹ್ಯೇಕಾವಧಾನೇನ ತೈಲಲೇಶಪರಿಚ್ಯುತಮ್ ।
ಖಡ್ಗಪಾತಭಯಾದ್ರಕ್ಷಂಸ್ತದಾನೀಮಭ್ರಮಂ ಪುರೀಮ್ ॥ ೫೦
ಏವಂ ವಣಿಕ್ಸುತೇನೋಕ್ತೇ ಸ ರಾಜಾ ನಿಜಗಾದ ತಮ್ ।
ದೃಶ್ಯತೈಲೈಕಚಿತ್ತೇನ ನ ತ್ವಯಾ ಕಿಂಚಿದೀಕ್ಷಿತಮ್ ॥ ೫೧
ತತ್ತೇನೈವಾವಧಾನೇನ ಪರಾನುಧ್ಯಾನಮಾಚರ ।
ಏಕಾಗ್ರೋ ಹಿ ಬಹಿರ್ವೃತ್ತಿನಿವೃತ್ತಸ್ತತ್ತ್ವಮೀಕ್ಷತೇ ॥ ೫೨
ದೃಷ್ಟತತ್ತ್ವಶ್ಚ ನ ಪುನಃ ಕರ್ಮಜಾಲೇನ ಬಧ್ಯತೇ ।
ಏಷ ಮೋಕ್ಷೋಪದೇಶಸ್ತೇ ಸಂಕ್ಷೇಪಾತ್ ಕಥಿತೋ ಮಯಾ ॥ ೫೩
ಇತ್ಯುಕ್ತ್ವಾ ಪ್ರಹಿತೋ ರಾಜ್ಞಾ ಪತಿತ್ವಾ ತಸ್ಯ ಪಾದಯೋಃ ।
ಕೃತಾರ್ಥಃ ಸ ವಣಿಕ್ಪುತ್ರೋ ಹೃಷ್ಟಃ ಪಿತೃಗೃಹಂ ಯಯೌ ॥ ೫೪
ಏವಂ ಕಲಿಂಗದತ್ತಸ್ಯ ಪ್ರಜಾಸ್ತಸ್ಯಾನುಶಾಸತಃ ।
ತಾರಾದತ್ತಾಭಿಧಾನಾಭೂದ್ರಾಜ್ಞೀ ರಾಜ್ಞಃ ಕುಲೋಚಿತಾ ॥ ೫೫

೫೬. ನಾನಾದೃಷ್ಟಾಂತಗಳ ರಸಾನುಭವ ಪಡೆಯುವ ಒಳ್ಳೆಯ ಕವಿಯು ವಾಣಿಯಿಂದ ಶೋಭಿಸುವಂತೆ ಒಳ್ಳೆಯ ನಡತೆಯಿಂದ ಕೂಡಿದ ಆ ಸುಂದರಿಯಿಂದ ರಾಜನು ಶೋಭಿಸಿದನು.

೫೭. ಹೊಳೆಯುವ ಬೆಳಕಿನ ಗುಣದಿಂದ ಮುದಗೊಳಿಸುವ ಬೆಳದಿಂಗಳಿನೊಡನೆ ಚಂದ್ರನು ಕೂಡಿರುವಂತೆ ಅಮೃತಮಯನಾದ ಆ ರಾಜನೊಡನೆ ಅವಳು ಒಂದಾಗಿ ಬಾಳಿದಳು.

೫೮. ಸ್ವರ್ಗದಲ್ಲಿ ಶಚೀದೇವಿಯೊಡನೆ ಇಂದ್ರನು ಇದ್ದಂತೆ ಆ ದೇವಿಯೊಡನಿದ್ದ ರಾಜನ ದಿನಗಳು ಸುಖವಾಗಿ ಕಳೆದವು.

೫೯. ಏತನ್ಮಧ್ಯೆ ಯಾವುದೋ ಒಂದು ಸಂದರ್ಭನಿಮಿತ್ತ ದೇವಲೋಕದಲ್ಲಿ ಇಂದ್ರನಿಗೆ ಒಂದು ಮಹೋತ್ಸವವು ಏರ್ಪಾಡಾಗಿತ್ತು.

೬೦. ಅಲ್ಲಿ ಎಲ್ಲ ಅಪ್ಸರೆಯರೂ ನರ್ತಿಸಲು ಸೇರಿದ್ದರೂ ಸುರಭಿದತ್ತಾ ಎಂಬ ಶ್ರೇಷ್ಠಳಾದ ಅಪ್ಸರೆಯು ಮಾತ್ರ ಕಾಣಿಸಲಿಲ್ಲ.

೬೧. ಆಗ ಅವಳು ಒಬ್ಬ ವಿದ್ಯಾಧರನೊಡನೆ ಬೇರೊಂದು ಉದ್ಯಾನದಲ್ಲಿ ರಹಸ್ಯ ದಲ್ಲಿರುವುದನ್ನು ಇಂದ್ರನು ತನ್ನ ಧ್ಯಾನ ಶಕ್ತಿಯಿಂದ ಕಂಡನು.

೬೨. ಅದನ್ನು ನೋಡಿ ಒಳಗೊಳಗೇ ಕೋಪಗೊಂಡು ಇಂದ್ರನು ಯೋಚಿಸಿದನು. ಕೆಟ್ಟನಡವಳಿಕೆಯ ಇವರಿಬ್ಬರೂ ಕಾಮಾಂಧರಾಗಿದ್ದಾರೆ.

---

ಯಯಾ ಸ ರಾಜಾ ಶುಶುಭೇ ರೀತಿಮತ್ಯಾ ಸುವೃತ್ತಯಾ ।
ನಾನಾದೃಷ್ಟಾಂತರಸಿಕೋ ಭಾರತ್ಯಾ ಸುಕವಿರ್ಯಥಾ ॥ ೫೬
ಯಾ ಪ್ರಕಾಶಗುಣಶ್ಲಾಘ್ಯಾ ಜ್ಯೋತ್ಸ್ನೇವ ಶಶಲಕ್ಷ್ಮಣಃ ।
ತಸ್ಯಾಮೃತಮಯಸ್ಯಾಭೂದವಿಭಿನ್ನೈವ ಭೂಪತೇಃ ॥ ೫೭
ತಯಾ ದೇವ್ಯಾ ಸಮಂ ತತ್ರ ಸುಖಿನಸ್ತಸ್ಯ ತಿಷ್ಠತಃ ।
ನೃಪಸ್ಯ ಜಗ್ಮುರ್ದಿವಸಾಃ ಶಚ್ಯೇವ ದಿವಿ ವಜ್ರಿಣಃ ॥ ೫೮
ಅತ್ರಾಂತರೇ ಕಿಲೈತಸ್ಮಿನ್ ಕಥಾಸಂಧೌ ಶತಕ್ರತೋಃ ।
ಕುತೋಽಪಿ ಹೇತೋಸ್ತ್ರಿದಿವೇ ವರ್ತತೇ ಸ್ಮ ಮಹೋತ್ಸವಃ ॥ ೫೯
ತತ್ರಾಪ್ಸರಸ್ಸು ಸರ್ವಾಸು ನರ್ತಿತುಂ ಮಿಲಿತಾಸ್ವಪಿ ।
ಏಕಾ ಸುರಭಿದತ್ತಾಖ್ಯಾ ನಾದೃಶ್ಯತ ವರಾಪ್ಸರಾಃ ॥ ೬೦
ಪ್ರಣಿಧಾನಾತ್ತತಃ ಶಕ್ರಸ್ತಾಂ ದದರ್ಶ ರಹಃಸ್ಥಿತಾಮ್ ।
ವಿದ್ಯಾಧರೇಣ ಕೇನಾಪಿ ಸಹಿತಾಂ ನಂದನಾಂತರೇ ॥ ೬೧
ತದ್‌ದೃಷ್ಟ್ವಾ ಜಾತಕೋಪೋಽಂತಃ ಸ ವೃತ್ರಾರಿರಚಿಂತಯತ್ ।
ಅಹೋ ಏತೌ ದುರಾಚಾರೌ ಮದನಾಂಧಾವುಭಾವಪಿ ॥ ೬೨

೬೩. ಒಬ್ಬಳು ನಮ್ಮನ್ನು ಮರೆತು ಸ್ವತಂತ್ರಳಾದಂತೆ ವರ್ತಿಸುತ್ತಿದ್ದರೆ ಬೇರೊಬ್ಬನು ದೇವಲೋಕಕ್ಕೆ ಬಂದು ವಿನಯವಿಲ್ಲದೆ ನಡೆದುಕೊಳ್ಳುತ್ತಿದ್ದಾನೆ.

೬೪. ಅಥವಾ ಈ ಬಡಪಾಯಿ ವಿದ್ಯಾಧರನ ದೋಷವಾದರೂ ಏನು ? ಇವನು ಅವಳ ರೂಪದಿಂದ ಆಕರ್ಷಿತನಾಗಿ ಅವಳಿಗೆ ವಶನಾಗಿದ್ದಾನೆ

೬೫. ತುಂಬು ಎದೆ ಎಂಬ ದಡವುಳ್ಳ ಲಾವಣ್ಯದ ನದಿಯಂತಿರುವ ಆ ಕಾಂತೆಯಿಂದ ವಶೀಕೃತನಾಗಿ ಅವನು ತನ್ನ ನಿಯಂತ್ರಣ ಕಳೆದುಕೊಂಡಿದ್ದಾನೆ.

೬೬. ಹಿಂದೆ ಬ್ರಹ್ಮನು ಎಲ್ಲ ಉತ್ತಮ ವಸ್ತುಗಳಿಂದ ಎಳ್ಳುಕಾಳಿನಷ್ಟು ಗುಣಗಳನ್ನು ಸಂಗ್ರಹಿಸಿ ಸೃಷ್ಟಿಸಿದ ತಿಲೋತ್ತಮೆಯನ್ನು ಕಂಡು ಶಿವನೂ ಚಂಚಲಗೊಳ್ಳಲಿಲ್ಲವೇ ?

೬೭. ಮೇನಕೆಯನ್ನು ನೋಡಿ ವಿಶ್ವಾಮಿತ್ರನು ತಪಸ್ಸನ್ನೇ ತ್ಯಜಿಸಲಿಲ್ಲವೆ ? ಶರ್ಮಿಷ್ಠೆಯ ರೂಪಲೋಭದಿಂದ ಯಯಾತಿಯು ಮುಪ್ಪನ್ನು ತಡೆಯಲಿಲ್ಲವೆ ?

೬೮. ಆದ್ದರಿಂದ ಈ ವಿದ್ಯಾಧರ ತರುಣನು ಅಪರಾಧಿಯಲ್ಲ. ಮೂರು ಲೋಕಗಳನ್ನೂ ಕ್ಷೋಭೆಗೊಳಿಸುವಂತಹ ರೂಪವುಳ್ಳ ಅಪ್ಸರೆಯಿಂದ ಅಪಹರಿಸಲ್ಪಟ್ಟಿದ್ದಾನೆ.

೬೯. ಸ್ವರ್ಗಲೋಕದ ಈ ಹೆಣ್ಣು ಕೀಳು ಅಭಿರುಚಿಯ ಅಪರಾಧಿನಿ. ಇವಳೇ ಈ ತರುಣನನ್ನು ದೇವತೆಗಳನ್ನೂ ಕಡೆಗಣಿಸಿ ನಂದನವನಕ್ಕೆ ಕರೆತಂದಿದ್ದಾಳೆ.

---

ಏಕಾ ಯದಾ ಚರತ್ಯೇವ ವಿಸ್ಮೃತ್ಯಾಸ್ಮಾನ್ ಸ್ವತಂತ್ರವತ್ ।
ಕರೋತ್ಯವಿನಯಂ ಚಾನ್ಯೋ ದೇವಭೂಮೌ ಪ್ರವಿಶ್ಯ ಯತ್ ॥ ೬೩
ಅಥವಾಸ್ಯ ವರಾಕಸ್ಯ ದೋಷೋ ವಿದ್ಯಾಧರಸ್ಯ ಕಃ ।
ಆಕೃಷ್ಟೋ ಹಿ ವಶೀಕೃತ್ಯ ರೂಪೇಣಾಯಮಿಹಾನಯಾ ॥ ೬೪
ಕಾಂತಯಾಂತಃ ಕಿಲಾಪೂರ್ಣತುಂಗಸ್ತನತಟಾಂತಯಾ ।
ಲಾವಣ್ಯಾಂಬುತರಂಗಿಣ್ಯಾ ಹೃತಃಸ್ಯಾದಾತ್ಮನಃ ಪ್ರಭುಃ ॥ ೬೫
ಚುಕ್ಷುಭೇ ಕಿಂ ನ ಶರ್ವೋಽಪಿ ಪುರಾ ದೃಷ್ಟ್ವಾ ತಿಲೋತ್ತಮಾಮ್ ।
ಧಾತ್ರಾ ಗೃಹೀತ್ವಾ ರಚಿತಾಮುತ್ತಮೇಭ್ಯಸ್ತಿಲಂ ತಿಲಮ್ ॥ ೬೬
ತಪಶ್ಚ ಮೇನಕಾಂ ದೃಷ್ಟ್ವಾ ವಿಶ್ವಾಮಿತ್ರೋ ನ ಕಿಂ ಜಹೌ ।
ಶರ್ಮಿಷ್ಠಾ ರೂಪಲೋಭಾಚ್ಚ ಯಯಾತಿರ್ನಾಪ್ತವಾನ್ ಜರಾಮ್ ॥ ೬೭
ಅತೋ ವಿದ್ಯಾಧರಯುವಾ ನೈವಾಯಮಪರಾಧ್ಯತಿ ।
ತ್ರಿಜಗತ್ಕ್ಷೋಭಶಕ್ತೇನ ರೂಪೇಣಾಪ್ಸರಸಾ ಹೃತಃ ॥ ೬೮
ಇಯಂ ತು ಸ್ವರ್ವಧೂಃ ಪಾಪಾ ಹೀನಾಸಕ್ತಾಪರಾಧಿನೀ ।
ಪ್ರವೇಶಿತಃ ಸುರಾನ್ ಹಿತ್ವಾ ಯಯಾಯಮಿಹ ನಂದನೇ ॥ ೬೯

೭೦. ಹೀಗೆಂದು ಆಲೋಚಿಸಿ ವಿದ್ಯಾಧರ ತರುಣನನ್ನು ಬಿಟ್ಟು ಅಹಲ್ಯಾಕಾಮುಕನಾದ ಇಂದ್ರನು ಅಪ್ಸರೆಗೆ ಶಾಪವಿತ್ತನು.

೭೧. ""ಎಲೌ ಪಾಪಿ, ಮನುಷ್ಯಲೋಕಕ್ಕೆ ಹೋಗು. ಅಯೋನಿಜೆಯಾದ ಒಂದು ಹೆಣ್ಣು ಮಗುವನ್ನು ಪಡೆದು ದೇವತೆಗಳ ಕೆಲಸವನ್ನು ಮಾಡಿ ನೀನು ಈ ಸ್ವರ್ಗಲೋಕಕ್ಕೆ ಮರಳಿ ಬಾ"ಎಂದನು.

೭೨. ಏತನ್ಮಧ್ಯೆ, ತಕ್ಷಶಿಲಾಪುರಿಯಲ್ಲಿ ರಾಜನಾದ ಕಳಿಂಗದತ್ತನ ರಾಣಿ ತಾರಾದತ್ತೆಯು ಗರ್ಭವನ್ನು ಧರಿಸಿದಳು.

೭೩. ಇಂದ್ರನ ಶಾಪದಿಂದ ಭ್ರಷ್ಟಳಾದ ಅಪ್ಸರೆ ಸುರಭಿದತ್ತೆಯು ಆ ರಾಣಿಯ ಗರ್ಭದೊಳಗೆ ಸೇರಿ ಆಕೆಯ ದೇಹ ಸೌಂದರ್ಯವನ್ನು ಹೆಚ್ಚಿಸಿದಳು.

೭೪. ಆಗ ಆಕಾಶದಿಂದ ಕೆಳಗೆ ಬಂದ ಒಂದು ಜ್ವಾಲೆಯು ತನ್ನ ಗರ್ಭವನ್ನು ಪ್ರವೇಶಿಸುತ್ತಿರುವಂತೆ ತಾರಾದತ್ತಾದೇವಿಯು ಒಂದು ಕನಸನ್ನು ಕಂಡಳು.

೭೫. ಆಶ್ಚರ್ಯಗೊಂಡ ಅವಳು ಮಾರನೆಯ ದಿನ ಕನಸಿನ ವಿಷಯವನ್ನು ಸಂತೋಷ ದಿಂದ ರಾಜನಿಗೆ ತಿಳಿಸಿದಳು. ಅವನೂ ಸಹ ಸಂತೋಷಗೊಂಡು ಅವಳಿಗೆ ಹೀಗೆಂದನು.

೭೬. "ದೇವಿ, ಶಾಪವಶರಾದ ದೇವಲೋಕದವರು ಮನುಷ್ಯ ಗರ್ಭದಲ್ಲಿ ಬೀಳುತ್ತಾರೆ. ದೇವಜಾತಿಯ ಯಾವನೋ ಒಬ್ಬನು ನಿನ್ನ ಗರ್ಭವನ್ನು ಪ್ರವೇಶಿಸಿದ್ದಾನೆ ಎಂದು ನನ್ನ ತಿಳಿವಳಿಕೆ.

---

ಇತ್ಯಾಲೋಚ್ಯ ವಿಮುಚ್ಯೈನಂ ವಿದ್ಯಾಧರಕುಮಾರಕಮ್ ।
ಅಹಲ್ಯಾಕಾಮುಕಃ ಸೋಽಸ್ಯೈ ಶಾಪಮಪ್ಸರಸೇ ದದೌ ॥ ೭೦
ಪಾಪೇ ಪ್ರಯಾಹಿ ಮಾನುಷ್ಯಂ ಪ್ರಾಪ್ಯ ಚಾಯೋನಿಜಾಂ ಸುತಾಮ್ ।
ದಿವ್ಯಂ ಕೃತ್ವಾ ಚ ಕರ್ತವ್ಯಮೇಷ್ಯಸಿ ದ್ಯಾಮಿಮಾಮಿತಿ ॥ ೭೧
ಅತ್ರಾಂತರೇ ಚ ಸಾ ತಸ್ಯ ರಾಜ್ಞಸ್ತಕ್ಷಶಿಲಾಪುರಿ ।
ರಾಜ್ಞೀ ಕಲಿಂಗದತ್ತಸ್ಯ ತಾರಾದತ್ತಾ ಯಯಾವೃತುಮ್ ॥ ೭೨
ತಸ್ಯಾಃ ಸುರಭಿದತ್ತಾ ಸಾ ಶಕ್ರಶಾಪಚ್ಯುತಾಪ್ಸರಾಃ ।
ಸಂಬಭೂವೋದರೇ ದೇವ್ಯಾ ದೇಹಸೌಂದರ್ಯದಾಯಿನೀ ॥ ೭೩
ತದಾ ಚ ನಭಸೋ ಭ್ರಷ್ಟಾಂ ಜ್ವಾಲಾಂ ದೇವೀ ದದರ್ಶ ಸಾ ।
ತಾರಾದತ್ತಾ ಕಿಲ ಸ್ವಪ್ನೇ ಪ್ರವಿಶಂತೀಂ ನಿಜೋದರೇ ॥ ೭೪
ಪ್ರಾತಶ್ಚಾವರ್ಣಯತ್ ಸ್ವಪ್ನಂ ಭರ್ತ್ರೇ ತಂ ಸಾ ಸವಿಸ್ಮಯಾ ।
ರಾಜ್ಞೇ ಕಲಿಂಗದತ್ತಾಯ ಸೋಽಪಿ ಪ್ರೀತೋ ಜಗಾದ ತಾಮ್ ॥ ೭೫
ದೇವಿ ದಿವ್ಯಾಃ ಪತಂತ್ಯೇವ ಶಾಪಾನ್ಮಾನುಷಯೋನಿಷು ।
ತಜ್ಜಾನೇ ದೇವಜಾತೀಯಃ ಕೋಽಪಿ ಗರ್ಭೇ ತವಾರ್ಪಿತಃ ॥ ೭೬

೭೭. ಒಳ್ಳೆಯ ಮತ್ತು ಕೆಟ್ಟ ಕರ್ಮಗಳಿಂದ ವಿಚಿತ್ರವಾದ ರೀತಿಯಲ್ಲಿ ಬಂಧಿತರಾದ ಜೀವಿಗಳು ಈ ಮೂರೂ ಲೋಕಗಳಲ್ಲಿ ಶುಭಾಶುಭ ಫಲವನ್ನು ಪಡೆಯಲು ಸಂಚರಿಸುತ್ತಿರುತ್ತಾರೆ.'

೭೮. ಆಗ ರಾಣಿಯು ಸಂದರ್ಭೋಚಿತವಾಗಿ ಹೀಗೆ ಹೇಳಿದಳು. "ನಿಜ, ಕರ್ಮವೇ ಶುಭಾಶುಭ ಫಲಗಳನ್ನು ನೀಡುವುದು.

೭೯. ಅದರ ಬಗ್ಗೆ ನಾನು ಕೇಳಿದ ಈ ಕಥೆಯನ್ನು ಹೇಳುತ್ತೇನೆ, ಕೇಳಿ. ಕೋಸಲದೇಶದಲ್ಲಿ ಧರ್ಮದತ್ತ ಎಂಬ ರಾಜನಿದ್ದನು.

೮೦. ಅವನಿಗೆ ಪತಿಯೇ ದೇವರೆಂದು ಭಾವಿಸಿದ್ದ ನಾಗಶ್ರೀ ಎಂಬ ರಾಣಿ ಇದ್ದಳು. ಸತಿಯಾದವಳ ಹೊಣೆಗಾರಿಕೆಯನ್ನರಿತ ಆಕೆಯು ಭೂಮಿಯ ಮೇಲಿನ ಅರುಂಧತೀ ಎಂದೇ ಖ್ಯಾತಳಾಗಿದ್ದಳು.

೮೧. ಎಲೈ ಶತ್ರುದಮನನಾದ ರಾಜನೇ, ಕಾಲಕ್ರಮೇಣ ಆ ರಾಣಿಯಲ್ಲಿ ಆ ರಾಜನಿಗೆ ನಾನು ಮಗಳಾಗಿ ಜನಿಸಿದೆ.

೮೨. ನಾನು ತುಂಬಾ ಚಿಕ್ಕವಳಿದ್ದಾಗ ನನ್ನ ತಾಯಿಯು ತನ್ನ ಪೂರ್ವಜನ್ಮವನ್ನು ಸ್ಮರಿಸಿ ತನ್ನ ಗಂಡನಿಗೆ ಹೀಗೆಂದಳು.

---

ವಿಚಿತ್ರಸದಸತ್ಕರ್ಮನಿಬದ್ಧಾಃ ಸಂಚರಂತಿ ಹಿ ।
ಜಂತವಸ್ತ್ರಿಜಗತ್ಯಸ್ಮಿನ್ ಶುಭಾಶುಭಫಲಾಪ್ತಯೇ ॥ ೭೭
ಇತ್ಯುಕ್ತಾ ಭೂಭೃತಾ ರಾಜ್ಞೀ ಸಾ ಪ್ರಸಂಗಾದುವಾಚ ತಮ್ ।
ಸತ್ಯಂ ಕರ್ಮೈವ ಬಲವದ್ ಭೋಗದಾಯಿ ಶುಭಾಶುಭಮ್ ॥ ೭೮
ತಥಾ ಚೇದಮುಪೋದ್ಘಾತಂ ಶ್ರುತಂ ವಚ್ಮ್ಯತ್ರ ತೇ ಶೃಣು ।
ಅಭವದ್ಧರ್ಮದತ್ತಾಖ್ಯಃ ಕೋಶಲಾಧಿಪತಿರ್ನೃಪಃ ॥ ೭೯
ನಾಗಶ್ರೀರಿತಿ ತಸ್ಯಾಸೀದ್ರಾಜ್ಞೀ ಯಾ ಪತಿದೇವತಾ ।
ಭೂಮಾವರುಂಧತೀ ಖ್ಯಾತಾ ರುಂಧತ್ಯಪಿ ಸತೀಧುರಮ್ ॥ ೮೦
ಕಾಲೇ ಗಚ್ಛತಿ ತಸ್ಯಾಂ ಚ ದೇವ್ಯಾಂ ತಸ್ಯ ಚ ಭೂಪತೇಃ ।
ಅಹಮೇಷಾ ಸಮುತ್ಪನ್ನಾ ದುಹಿತಾಹಿತಸೂದನ ॥ ೮೧
ತತೋ ಮಯ್ಯತಿಬಾಲಾಯಾಂ ದೇವ ಸಾ ಜನನೀ ಮಮ ।
ಅಕಸ್ಮಾತ್ ಪೂರ್ವಜಾತಿಂ ಸ್ವಾಂ ಸ್ಮೃತ್ವಾ ಸ್ವಪತಿಮಬ್ರವೀತ್ ॥ ೮೨

೧೨. "ರಾಜನೇ, ಇದ್ದಕ್ಕಿದಂತೆಯೇ ನನಗೆ ಇಂದು ಹಿಂದಿನ ಜನ್ಮದ ನೆನಪಾಗಿದೆ. (ಇದನ್ನು) ಹೇಳದಿದ್ದರೆ ಪ್ರೀತಿಯಿಲ್ಲವೆಂದಾಗುತ್ತದೆ. ಹೇಳಿದರೆ ನನಗೆ ಮರಣ.

೧೩. ಹಿಂದಿನ ಜನ್ಮವನ್ನು ಸ್ಮರಿಸುವುದು ಮೃತ್ಯುವಿಗೆ ಕಾರಣವೆಂದು ಹೇಳುತ್ತಾರೆ. ಆದ್ದರಿಂದಲೇ ನನಗೆ ಬಹಳ ದುಃಖವಾಗಿದೆ.

೧೪. ಹೀಗೆಂದು ಅವಳು ಹೇಳಿದಾಗ ರಾಜನು ಅವಳಿಗೆ ಪ್ರತ್ಯುತ್ತರ ನೀಡಿದನು. "ಪ್ರಿಯೆ, ನೀನು ಸ್ಮರಿಸಿದಂತೆಯೇ ನನಗೂ ಕೂಡ ಇದ್ದಕ್ಕಿದ್ದಂತೆಯೇ ಹಿಂದಿನ ಜನ್ಮದ ನೆನಪಾಯಿತು.

೧೫. ನೀನು ಅದನ್ನು ನನಗೆ ಹೇಳು. ಆ ಮೇಲೆ ನಾನು ನಿನಗೆ ಹೇಳುವೆನು. ವಿಧಿಯ ಬರಹವನ್ನು ತಿದ್ದಲು ಯಾರಿಗೆ ತಾನೇ ಸಾಧ್ಯ ?’

೧೬. ಹೀಗೆಂದು ರಾಜನಿಂದ ಪ್ರೇರಿತಳಾದ ರಾಣಿಯು ಅವನಿಗೆ ಹೇಳಿದಳು. "ರಾಜನೆ, ನೀನು ಒತ್ತಾಯಿಸುವುದಾದರೆ ಹೇಳುತ್ತೇನೆ ಕೇಳು.

೧೭. ಈ ದೇಶದಲ್ಲಿಯೇ ಮಾಧವ ಎಂಬ ಬ್ರಾಹ್ಮಣನ ಮನೆಯಲ್ಲಿ ಹಿಂದಿನ ಜನ್ಮದಲ್ಲಿ ನಾನು ಒಳ್ಳೆಯ ನಡವಳಿಕೆಯುಳ್ಳ ದಾಸಿಯಾಗಿದ್ದೆನು.

೧೮. ನನ್ನ ಪತಿಯ ಹೆಸರು ದೇವದಾಸ. ಅವನು ಒಬ್ಬ ವ್ಯಾಪಾರಿಯ ಮನೆಯಲ್ಲಿ ಕೆಲಸಮಾಡುತ್ತಿದ್ದನು.

---

ರಾಜನ್ನಕಾಂಡ ಏವಾದ್ಯ ಪೂರ್ವಜನ್ಮ ಸ್ಮೃತಂ ಮಯಾ ।
ಅಪ್ರೀತ್ಯೈತದನಾಖ್ಯಾತಮಾಖ್ಯಾತಂ ಮೃತಯೇ ಚ ಮೇ ॥ ೧೨
ಅಶಂಕಿತಂ ಸ್ಮೃತಾ ಜಾತಿಃ ಸ್ಯಾದಾಖ್ಯಾತೈವ ಮೃತ್ಯವೇ ।
ಇತಿ ಹ್ಯಾಹುರತೋ ದೇವ ಮಯ್ಯತೀವ ವಿಷಾದಿತಾ ॥ ೧೩
ಇತ್ಯುಕ್ತಃ ಸ ತಯಾ ಪತ್ನ್ಯಾ ರಾಜಾ ತಾಂ ಪ್ರತ್ಯಭಾಷತ ।
ಪ್ರಿಯೇ ಮಯಾಪಿ ಪ್ರಾಗ್ಜನ್ಮ ತ್ವಯೇವ ಸಹಸಾ ಸ್ಮೃತಮ್ ॥ ೧೪
ತನ್ಮಮಾಚಕ್ಷ್ವ ತಾವತ್ತ್ವಂ ಕಥಯಿಷ್ಯಾಮ್ಯಹಂ ಚ ತೇ ।
ಯದಸ್ತು ಕೋಽನ್ಯಥಾ ಕರ್ತುಂ ಶಕ್ತೋ ಹಿ ಭವಿತವ್ಯತಾಮ್ ॥ ೧೫
ಇತಿ ಸಾ ಪ್ರೇರಿತಾ ತೇನ ಭರ್ತ್ರಾ ರಾಜ್ಞೀ ಜಗಾದ ತಮ್ ।
ನಿರ್ಬಂಧೋ ಯದಿ ತೇ ರಾಜನ್ ಶೃಣು ತರ್ಹಿ ವದಾಮ್ಯಹಮ್ ॥ ೧೬
ಇಹೈವ ದೇಶೇ ವಿಪ್ರಸ್ಯ ಮಾಧವಾಖ್ಯಸ್ಯ ಕಸ್ಯಚಿತ್ ।
ಗೃಹೇಽಹಮಭವಂ ದಾಸೀ ಸುವೃತ್ತಾ ಪೂರ್ವಜನ್ಮನಿ ॥ ೧೭
ದೇವದಾಸಾಭಿಧಾನಶ್ಚ ಪತಿರತ್ರ ಮಮಾಭವತ್ ।
ಕಸ್ಯಾಪ್ಯೇಕಸ್ಯ ವಣಿಜಃ ಸಾಧುಃ ಕರ್ಮಕರೋ ಗೃಹೇ ॥ ೧೮

೯೦. ನಾವಿಬ್ಬರೂ ನಮಗೆ ಯೋಗ್ಯವಾದ ಮನೆಯೊಂದನ್ನು ಮಾಡಿಕೊಂಡು ನಮ್ಮ ನಮ್ಮ ಒಡೆಯರ ಮನೆಯಿಂದ ಆಹಾರ ತಂದು ಜೀವಿಸುತ್ತಿದ್ದೆವು.

೯೧. ಒಂದು ನೀರಿನ ಕೊಡ, (ಅನ್ನ ಬೇಯಿಸುವ) ಪಾತ್ರೆ, ಒಂದು ಪೊರಕೆ ಮತ್ತು ಒಂದು ಮಂಚ ನಾನು ಮತ್ತು ನನ್ನ ಗಂಡ–ಹೀಗೆ ಮೂರು ಜೊತೆಗಳಾಗಿ ಇದ್ದೆವು.

೯೨. ಬೇರೆ ತೊಂದರೆ ಇಲ್ಲದ ಆ ಮನೆಯಲ್ಲಿ ದೇವ–ಪಿತೃ ಅತಿಥಿಗಳಿಗೆ ಕೊಟ್ಟು ಉಳಿದಿದ್ದನ್ನು ತಿನ್ನುತ್ತಾ ನಾವಿಬ್ಬರೂ ಸುಖವಾಗಿ ಇದ್ದೆವು.

೯೩. ನಮ್ಮಿಬ್ಬರಿಗೂ ಸಾಕಾಗಿ ಹೆಚ್ಚು ಉಳಿದಿದ್ದನ್ನು ತೀವ್ರ ಕಷ್ಟದಲ್ಲಿದ್ದ ಯಾವನಿಗಾದರೂ ಕೊಟ್ಟುಬಿಡುತ್ತಿದ್ದೆವು.

೯೪. ಒಮ್ಮೆ ತೀವ್ರವಾದ ಬರಗಾಲ ಎರಗಿತು. ಆಗ ನಮ್ಮಿಬ್ಬರಿಗೆ ಪ್ರತಿದಿನ ದೊರೆಯುತ್ತಿದ್ದ ಅನ್ನವು ಬಹಳ ಕಡಮೆಯಾಯಿತು.

೯೫. ಹಸಿವಿನಿಂದ ಕ್ರಮೇಣ ನಾವು ಬಡವಾಗಿ ನಿಧಾನವಾಗಿ ಕ್ಷೀಣಿಸುತ್ತಿದ್ದ ಕಾಲದಲ್ಲೇ ಬಸವಳಿದಿದ್ದ ಒಬ್ಬ ಬಡ ಬ್ರಾಹ್ಮಣನು ಊಟದ ಸಮಯದಲ್ಲಿ ಬಂದನು.

---

ತಾವಾವಾಮವಸಾವಾತ್ರ ಕೃತ್ವಾ ಗೇಹಂ ನಿಜೋಚಿತಾಮ್ ।
ಸ್ವಸ್ವಸ್ವಾಮಿಗೃಹಾನೀತಪಕ್ವಾನ್ನಕೃತವರ್ತನೌ ॥ ೯೦
ವಾರಿಧಾನೀ ಚ ಕುಂಭಶ್ಚ ಮಾರ್ಜನೀ ಮಂಚಕಸ್ತಥಾ ।
ಅಹಂ ಚ ಮತ್ಪತಿಶ್ಚೇತಿ ಯುಗ್ಮತ್ರಿತಯಮೇವ ನೌ ॥ ೯೧
ಅಕಲಿಪ್ರಸರೇ ಗೇಹೇ ಸಂತೋಷ ಸುಖಿನೋರಭೂತ್ ।
ದೇವಪಿತ್ರತಿಥಿಪ್ರತ್ತಶೇಷಂ ಪ್ರಮಿತಮಶ್ನತೋಃ ॥ ೯೨
ಏಕೈಕತೋಽಧಿಕಂ ಕಿಂಚಿದ್ಯದಾಚ್ಛಾದನಮಪ್ಯಭೂತ್ ।
ಸುದುರ್ಗತಾಯ ಕಸ್ಮೈಚಿತ್ತದಾವಾಭ್ಯಾಮದೀಯತ ॥ ೯೩
ಅಥಾತ್ರೋದಭವತ್ತೀವ್ರೋ ದುರ್ಭಿಕ್ಷಸ್ತೇನ ಚಾವಯೋಃ ।
ಭೃತ್ಯನ್ನಮನ್ವಹಂ ಪ್ರಾಪ್ಯಮಲ್ಪಮಲ್ಪಮುಪಾನಮತ್ ॥ ೯೪
ತತಃ ಕ್ಷುತ್ಕ್ಷಾಮವಪುಷೋಃ ಶನೈರ್ನಾವವಸೀದತೋಃ ।
ಕದಾಚಿದಾಗಾದಾಹಾರಕಾಲೇ ಕ್ಲಾಂತೋಽತಿಥಿರ್ದ್ವಿಜಃ । ೯೫

೯೬-೯೭ ಪ್ರಾಣವೇ ಹೋಗುವಂತಹ ತುಂಬ ಕಷ್ಟದ ಪರಿಸ್ಥಿತಿಯಲ್ಲಿದ್ದರೂ ನಮ್ಮಿಬ್ಬರ ಆಹಾರವನ್ನೇ ಅವನಿಗೆ ಕೊಟ್ಟು ಅವನು ಅದನ್ನು ತಿಂದು ಹೊರಟುಹೋಗುತ್ತಿದ್ದಂತೆಯೇ ಅತಿಥಿಯಲ್ಲಿ ಇರುವ ಆದರ ನಮ್ಮಲ್ಲಿ ಇಲ್ಲ ಎಂಬ ಕೋಪದಿಂದಲೋ ಎಂಬಂತೆ ಪ್ರಾಣಗಳು ನನ್ನ ಪತಿಯನ್ನು ಬಿಟ್ಟು ಹೋದುವು.

೯೮. ಅನಂತರ ನಾನು ಗಂಡನಿಗೆ ಉಚಿತವಾದ ಚಿತೆಯನ್ನು ರಚಿಸಿ ಅದನ್ನು ನಾನೂ ಹತ್ತಿದೆನು. ನನ್ನ ಆತ್ಮದ ದುಃಖದ ಭಾರ ಕೆಳಗಿಳಿಯಿತು.

೯೯. ಮುಂದೆ ರಾಜವಂಶದಲ್ಲಿ ಹುಟ್ಟಿ ನಿಮ್ಮ ರಾಣಿಯಾದೆನು. ಪುಣ್ಯವೆಂಬ ವೃಕ್ಷವು ಶೀಘ್ರವಾಗಿಯೇ ಅನಿರೀಕ್ಷಿತ ಫಲವನ್ನು ನೀಡುತ್ತದೆ.'

೧೦೦. ಈ ರೀತಿ ಅವಳು ಹೇಳಿದಾಗ ರಾಜ ಧರ್ಮದತ್ತನು ಅವಳಿಗೆ ಹೇಳಿದನು. "'ಪ್ರಿಯೆ, ಬಾ. ನಾನೇ ನಿನ್ನ ಪೂರ್ವಜನ್ಮದ ಪತಿ.

೧೦೧. ವ್ಯಾಪಾರಿಯ ಬಳಿ ಕೆಲಸಕ್ಕಿದ್ದ ಸೇವಕ ದೇವದಾಸನು ನಾನೇ. ನಾನು ನನ್ನ ಪೂರ್ವಜನ್ಮವನ್ನು ಅರಿತೆನು."

೧೦೨. ಹೀಗೆಂದು ಹೇಳಿ ತನ್ನ ಗುರುತುಗಳನ್ನೆಲ್ಲ ತಿಳಿಸಿ ದುಃಖ ಮತ್ತು ಸುಖ ಎರಡನ್ನೂ ಹಂಚಿಕೊಂಡು ಆ ರಾಜನು ಕೂಡಲೇ ಅವಳೊಡನೆ ಸ್ವರ್ಗಸ್ಥನಾದನು.

---

ತಸ್ಮೈ ನಿಃಶೇಷಮಾವಾಭ್ಯಾಂ ದ್ವಾಭ್ಯಾಮಪಿ ನಿಜಾಶನಮ್ ।
ಪ್ರಾಣಸಂಶಯಕಾಲೇಽಪಿ ದತ್ತಂ ಯಾವಚ್ಚ ಯಚ್ಚ ತತ್ ॥ ೯೬
ಭುಕ್ತ್ವಾ ತಸ್ಮಿನ್ ಗತೇ ಪ್ರಾಣಾ ಭರ್ತಾರಂ ಮೇ ತಮತ್ಯಜನ್ ।
ಅರ್ಥಿನ್ಯಸ್ಯಾದರೋ ನಾಸ್ಮಾಸ್ವಿತಿ ಮನ್ಯುವಶಾದಿವ ॥ ೯೭
ತತಶ್ಚಾಹಂ ಸಮಾಧಾಯ ಪತ್ಯೇ ಸಮುಚಿತಾಂ ಚಿತಾಮ್ ।
ಆರೂಢಾ ಚಾವರೂಢಶ್ಚ ವಿಪದ್ಭಾರೋ ಮಮಾತ್ಮನಃ ॥ ೯೮
ಅಥ ರಾಜಗೃಹೇ ಜಾತಾ ಜಾತಾಹಂ ಮಹಿಷೀ ತವ ।
ಅಚಿಂತ್ಯಂ ಹಿ ಫಲಂ ಸೂತೇ ಸದ್ಯಃ ಸುಕೃತಪಾದಪಃ ॥ ೯೯
ಇತ್ಯುಕ್ತೇ ಸ ತಯಾ ರಾಜ್ಞ್ಯಾ ಧರ್ಮದತ್ತೋ ನೃಪೋಽಬ್ರವೀತ್ ।
ಏಹಿ ಪ್ರಿಯೇ ಸ ಏವಾಹಂ ಪೂರ್ವಜನ್ಮಪತಿಸ್ತವ ॥ ೧೦೦
ವಣಿಕ್ಕರ್ಮಕರೋಽಭೂವಂ ದೇವದಾಸೋಽಹಮೇವ ಸಃ ।
ಏತದೇವ ಮಯಾಪ್ಯದ್ಯ ಪ್ರಾಕ್ತನಂ ಜನ್ಮ ಹಿ ಸ್ಮೃತಮ್ ॥ ೧೦೧
ಇತ್ಯುಕ್ತ್ವಾ ಸ್ವಾನ್ಯಭಿಜ್ಞಾನಾನ್ಯುದೀರ್ಯ ಸ ತಯಾ ಸಹ ।
ದೇವ್ಯಾ ವಿಷಣ್ಣೋ ಹೃಷ್ಟಶ್ಚ ರಾಜಾ ಸದ್ಯೋ ದಿವಂ ಗತಃ ॥ ೧೦೨

೧೧೩. ಹೀಗೆ ನನ್ನ ತಾಯಿ ತಂದೆಯರು ಮರಣಹೊಂದಿದ ಮೇಲೆ ನನ್ನ ಚಿಕ್ಕಮ್ಮನು ನನ್ನನ್ನು ಸಾಕುವುದಕ್ಕೋಸ್ಕರ ತನ್ನ ಮನೆಗೆ ಒಯ್ದಳು.

೧೧೪. ನಾನು ಇನ್ನೂ ಕನ್ಯಾವಸ್ಥೆಯಲ್ಲಿ ಇದ್ದಾಗ ಒಬ್ಬ ಋಷಿಯು ಅತಿಥಿಯಾಗಿ ಬಂದನು. ಅವರ ಸೇವೆಯನ್ನು ಮಾಡಲು ಚಿಕ್ಕಮ್ಮನು ನನ್ನನ್ನು ನಿಯೋಜಿಸಿದಳು.

೧೧೫. ಕುಂತಿಯು ದುರ್ವಾಸರನ್ನು ಸೇವಿಸಿದಂತೆ ನಾನು ಅವರ ಸೇವೆಯನ್ನು ಮಾಡಿದೆನು. ಅವನ ವರದಿಂದಲೇ ಧಾರ್ಮಿಕರಾದ ನೀವು ನನ್ನ ಪತಿಯಾದಿರಿ.

೧೧೬. ಹೀಗೆ ಧರ್ಮವನ್ನು ಆದರಿಸಿದ್ದರಿಂದ ಒಳ್ಳೆಯದಾಗುತ್ತದೆ. ತಾಯಿತಂದೆಯರೊಡನೆ ರಾಜ್ಯಕ್ಕೆ ಬಂದು ಪೂರ್ವ ಜನ್ಮವನ್ನೂ ಸ್ಮರಿಸುವಂತಾಯಿತು.'

೧೧೭. ತಾರಾದತ್ತಾದೇವಿಯ ಈ ಮಾತನ್ನು ಕೇಳಿ ಕಳಿಂಗದತ್ತರಾಜನು ಧರ್ಮದಲ್ಲಿ ಅತ್ಯಂತ ಶ್ರದ್ಧೆಯಿಂದ ಕೂಡಿದವನಾಗಿ ಅವಳಿಗೆ ಹೇಳಿದನು.

೧೧೮. "ಎಲೈ ದೇವಿಯೇ, ಶ್ರದ್ಧೆಯಿಂದ ಆಚರಿಸಿದ ಅತ್ಯಲ್ಪವಾದ ಧರ್ಮವೂ ಸಹ ಹೆಚ್ಚು ಫಲವನ್ನು ನೀಡುತ್ತದೆ. ಈ ಸಂದರ್ಭದಲ್ಲಿ ಏಳುಜನ ಬ್ರಾಹ್ಮಣರ ಕಥೆಯನ್ನು ಹೇಳುತ್ತೇನೆ ಕೇಳು.

೧೧೯. ಹಿಂದೆ ಕುಂಡಿನ ಪುರದಲ್ಲಿ ಒಬ್ಬ ಬ್ರಾಹ್ಮಣ ಗುರುವಿದ್ದನು. ಅವನಿಗೆ ಏಳುಜನ ಬ್ರಾಹ್ಮಣ ಬಾಲಕರು ಶಿಷ್ಯರಾಗಿದ್ದರು.

---

ಏವಂ ತಯೋಶ್ಚ ಮತ್ಪಿತ್ರೋರ್ಲೋಕಾಂತರಮುಪೇಯುಷೋಃ ।
ಮಾತುಃ ಸ್ವಸಾ ವರ್ಧಯಿತುಂ ಮಾಮನೈಷೀನ್ನಿಜಂ ಗೃಹಮ್ ॥ ೧೧೩
ಕನ್ಯಾಯಾಂ ಮಯಿ ಚಾಭ್ಯಾಗಾದೇಕಸ್ತತ್ರಾತಿಥಿರ್ಮುನಿಃ ।
ಮಾತೃಸ್ವಸಾ ಚ ಮಾಂ ತಸ್ಯ ಶುಶ್ರೂಷಾಯೈ ಸಮಾದಿಶತ್ ॥ ೧೧೪
ಸ ಚ ಕುಂತ್ಯೇವ ದುರ್ವಾಸಾ ಯತ್ನೇನಾರಾಧಿತೋ ಮಯಾ ।
ತದ್ವರಾಚ್ಚ ಮಯಾ ಪ್ರಾಪ್ತೋ ಧಾರ್ಮಿಕಸ್ತ್ವಂ ಪತಿಃ ಪ್ರಭೋ ॥ ೧೧೫
ಏವಂ ಭವಂತಿ ಭದ್ರಾಣಿ ಧರ್ಮಾದೇವ ಯದಾದರಾತ್ ।
ಪಿತೃಭ್ಯಾಂ ಸಹ ಸಂಪ್ರಾಪ್ಯ ರಾಜ್ಯಂ ಜಾತಿರಪಿ ಸ್ಮೃತಾ ॥ ೧೧೬
ಏತತ್ಸ ತಾರಾದತ್ತಾಯಾ ದೇವ್ಯಾಃ ಶ್ರುತ್ವಾ ವಚೋ ನೃಪಃ ।
ಕಲಿಂಗದತ್ತೋ ಧರ್ಮೈಕಸಾದರೋ ನಿಜಗಾದ ತಾಮ್ ॥ ೧೧೭
ಸತ್ಯಂ ಸಮ್ಯಕ್ಕೃತೋಽಲ್ಪೋಽಪಿ ಧರ್ಮೋ ಭೂರಿಫಲೋ ಭವೇತ್ ।
ತಥಾ ಚ ಪ್ರಾಕ್ತನೀಂ ದೇವಿ ಸಪ್ತದ್ವಿಜಕಥಾಂ ಶೃಣು ॥ ೧೧೮
ಕುಂಡಿನಾಖ್ಯೇ ಪುರೇ ಪೂರ್ವಮುಪಾಧ್ಯಾಯಸ್ಯ ಕಸ್ಯಚಿತ್ ।
ಬ್ರಾಹ್ಮಣಸ್ಯಾಭವನ್ ಶಿಷ್ಯಾಃ ಸಪ್ತ ಬ್ರಾಹ್ಮಣಪುತ್ರಕಾಃ ॥ ೧೧೯

೧೧೦. ದುರ್ಭಿಕ್ಷ ಬಂದಿದ್ದರಿಂದ ಆ ಉಪಾಧ್ಯಾಯನು ಒಂದು ಹಸುವನ್ನು ತರಲು ಅನೇಕ ಹಸುಗಳನ್ನು ಹೊಂದಿದ್ದ ತನ್ನ ಮಾವನ ಮನೆಗೆ ಅವರನ್ನು ಕಳಿಸಿದನು.

೧೧೧. ಬರಗಾಲದ ದೆಸೆಯಿಂದ ಬಳಲಿ ಬೆಂಡಾಗಿದ್ದ ಆ ಶಿಷ್ಯರು ಗುರುವಿನ ಮಾತಿನಂತೆ ಬೇರೆ ದೇಶದಲ್ಲಿದ್ದ ಅವನ ಮಾವನ ಮನೆಗೆ ಹೋಗಿ ಹಸುವನ್ನು ಬೇಡಿದರು.

೧೧೨. ಅವನು ಹಾಲುಕರೆಯುವ ಹಸುವನ್ನೇನೋ ಅವರಿಗೆ ಕೊಟ್ಟನು. ಆದರೆ ಜಿಪುಣನಾದ ಅವನು ಹಸಿದಿದ್ದ ಆ ಬಾಲಕರಿಗೆ ಅನ್ನವನ್ನು ಮಾತ್ರ ಹಾಕಲಿಲ್ಲ.

೧೧೩. ಅನಂತರ ಅವರು ಹಸುವನ್ನು ಒಯ್ಯುತ್ತಾ ಬರುತ್ತಿದ್ದಾಗ ಮಾರ್ಗಮಧ್ಯದಲ್ಲಿ ಹಸಿವಿನಿಂದ ಬಳಲಿ ನೆಲಕ್ಕೆ ಉರುಳಿದರು.

೧೧೪. ಗುರುಗಳ ಮನೆ ದೂರದಲ್ಲಿದೆ. ನಾವು ದೂರದಲ್ಲಿ ಆಪತ್ತಿಗೊಳಗಾದೆವು. ಸುತ್ತಮುತ್ತ ಆಹಾರವೂ ಸಿಗುವುದಿಲ್ಲ. ಇನ್ನು ನಾವು ಸತ್ತಂತೆಯೇ.

೧೧೫. ಅಂತೆಯೇ ಈ ಹಸುವೂ ಕೂಡ ನೀರು, ಹುಲ್ಲು, ಪಾಲಕರು ಇಲ್ಲದೆ ಈ ಕಾಡಿನಲ್ಲಿ ಸತ್ತಂತೆಯೇ. ಇದರಿಂದ ಗುರುಗಳಿಗೆ ಪ್ರಯೋಜನವೇನು ?

೧೧೬. ಆದ್ದರಿಂದ ಇದರ ಮಾಂಸದಿಂದ ಬೇಗನೇ ನಾವೂ ಬದುಕಿ ಉಳಿದಿದ್ದನ್ನು ಗುರುಗಳಿಗೆ ತೆಗೆದುಕೊಂಡು ಹೋಗೋಣ. ಈಗ ಆಪತ್ಕಾಲವಲ್ಲವೇ?

---

ಸ ತಾನ್ ಶಿಷ್ಯಾನುಪಾಧ್ಯಾಯೋ ಧೇನುಂ ದುರ್ಭಿಕ್ಷದೋಷತಃ ।
ಗೋಮತಃ ಶ್ವಶುರಾದೇಕಾಂ ಯಾಚಿತುಂ ಪ್ರಾಹಿಣೋತ್ತತಃ ॥ ೧೧೦
ತೇ ಚ ಗತ್ವಾನ್ಯದೇಶಸ್ಥಂ ದುರ್ಭಿಕ್ಷಕ್ಷಾಮಕುಕ್ಷಯಃ ।
ತಂ ತದ್ಗಿರಾ ತಚ್ಛ್ವಶುರಂ ತಚ್ಛಿಷ್ಯಾ ಗಾಂ ಯಯಾಚಿರೇ ॥ ೧೧೧
ಸೋಽಪಿ ವೃತ್ತಿಕರೀಮೇಕಾಂ ಧೇನುಂ ತೇಭ್ಯಃ ಸಮಾರ್ಪಯತ್ ।
ಕೃಪಣಃ ಕ್ಷುಧಿತೇಭ್ಯೋಽಪಿ ನ ತು ತೇಭ್ಯೋಽಶನಂ ದದೌ ॥ ೧೧೨
ತತಸ್ತೇ ತಾಂ ಗೃಹೀತ್ವಾ ಗಾಮಾಯಾಂತೋಽರ್ಧಪಥೇ ಕ್ಷುಧಾ ।
ಉದ್ಗಾಢಪೀಡಿತಾಃ ಕ್ಲಾಂತಾ ನಿಪೇತುರ್ಧರಣೀತಲೇ ॥ ೧೧೩
ಉಪಾಧ್ಯಾಯಗೃಹಂ ದೂರಂ ದೂರೇ ಚಾಪದ್ಗತಾ ವಯಮ್ ।
ದುರ್ಲಭಂ ಸರ್ವತಶ್ಚಾನ್ನಂ ತತ್ಪ್ರಾಣೈರ್ಗತಮೇವ ನಃ ॥ ೧೧೪
ಏವಂ ಚ ಧೇನುರಪ್ಯೇಷಾ ನಿಸ್ತೋಯಯವಸಮಾನುಷೇ ।
ಅರಣ್ಯೇಽಸ್ಮಿನ್ ವಿಪನ್ನೈವ ಗುರ್ವರ್ಥೋಽಲ್ಪೋಽಪಿ ಕಸ್ತತಃ ॥ ೧೧೫
ತದಸ್ಯಾಃ ಪಿಶಿತೈಃ ಪ್ರಾಣಾನ್ ಸಂಧಾರ್ಯಾಶು ಗುರೂನಪಿ ।
ಸಂಭಾವಯಾಮಸ್ತಚ್ಛೇಷೈರಾಪತ್ಕಾಲೋ ಹಿ ವರ್ತತೇ ॥ ೧೧೬

೧೧೭–೧೧೮. ಹೀಗೆ ಯೋಚಿಸಿ ಆ ಏಳು ಜನ ಬ್ರಹ್ಮಚಾರಿಗಳು ಹಸುವನ್ನು ಶಾಸ್ತ್ರೋಕ್ತರೀತ್ಯಾ ಪಶುವನ್ನಾಗಿ ಮಾಡಿ ದೇವಯಜ್ಞ ಮತ್ತು ಪಿತೃಯಜ್ಞವನ್ನು ಮಾಡಿ ಹಸುವಿನ ಮಾಂಸವನ್ನು ತಿಂದು ಉಳಿದದ್ದನ್ನು ಗುರುಗಳ ಹತ್ತಿರಕ್ಕೆ ತೆಗೆದುಕೊಂಡು ಹೋದರು.

೧೧೯. ಗುರುವಿಗೆ ನಮಸ್ಕಾರ ಮಾಡಿ ನಡೆದದ್ದನ್ನು ಯಥಾವತ್ತಾಗಿ ಹೇಳಿದರು. ಅವರು ತಪ್ಪುಮಾಡಿದ್ದರೂ ಸತ್ಯವನ್ನು ನುಡಿದಿದ್ದರಿಂದ ಗುರುವು ಸಂತೋಷಪಟ್ಟನು.

೧೨೦. ಆದರೆ ಒಂದು ವಾರದಲ್ಲೇ ಬರಗಾಲದಿಂದ ಅವರೆಲ್ಲರೂ ಮೃತರಾದರು. ಸತ್ಯವನ್ನು ನುಡಿದಿದ್ದರಿಂದ ಅವರು ಜಾತಿಸ್ಮರರಾಗಿ (ಹಿಂದಿನ ಜನ್ಮದ ಸ್ಮರಣೆಯುಳ್ಳವರಾಗಿ) ಜನಿಸಿದರು.

೧೨೧. ಹೀಗೆ ನೀರು ಹಾಕಿದ ಬೀಜಗಳು ಕೃಷಿಕರಿಗೆ ಫಲ ನೀಡುವಂತೆ ಶುದ್ಧ ಸಂಕಲ್ಪವೆಂಬ ನೀರಿನಿಂದ ಸಿಂಪಡಿಸಿದ್ದಕ್ಕೆ ಪುಣ್ಯವೆಂಬ ಬೀಜವು ಫಲವನ್ನು ನೀಡುತ್ತದೆ.

೧೨೨. ದುಷ್ಟಸಂಕಲ್ಪದಿಂದ ಕೆಟ್ಟ ಫಲವೂ ದೊರೆಯುತ್ತದೆ. ಈ ವಿಷಯದಲ್ಲಿ ಮತ್ತೊಂದು ಕಥೆಯನ್ನು ಹೇಳುತ್ತೇನೆ ಕೇಳು.

೧೨೩. ಹಿಂದೆ ಗಂಗಾನದೀತೀರದಲ್ಲಿ ಒಬ್ಬ ಬ್ರಾಹ್ಮಣನೂ ಒಬ್ಬ ಚಂಡಾಲನೂ ಒಂದೇ ಕಾಲದಲ್ಲಿ ಅನಶನ ವ್ರತದಿಂದ ತಪಸ್ಸು ಮಾಡುತ್ತಿದ್ದರು.

---

ಇತಿ ಸಂಮಂತ್ರ್ಯ ಸಪ್ತಾಪಿ ಜಘ್ನುಃ ಸಬ್ರಹ್ಮಚಾರಿಣಃ ।
ಶಾಸ್ತ್ರೋಕ್ತವಿಧಿನಾ ಧೇನುಂ ತಾಂ ಪಶೂಕೃತ್ಯ ತತ್ರ ತೇ ॥ ೧೧೭
ಇಷ್ಟ್ವಾ ದೇವಾನ್ ಪಿತೄನ್ ಭುಕ್ತ್ವಾ ತನ್ಮಾಂಸಂ ವಿಧಿವಚ್ಚ ತತ್ ।
ಜಗುರಾದಾಯ ತಚ್ಛೇಷಮುಪಾಧ್ಯಾಯಸ್ಯ ಚಾಂತಿಕಮ್ ॥ ೧೧೮
ತಸ್ಮೈ ಪ್ರಣಮ್ಯ ಸರ್ವಂ ತೇ ಶಸಂಸುಸ್ತದ್ಯಥಾ ಕೃತಮ್ ।
ಸ ತೇಭ್ಯಃ ಸಾಪರಾಧೇಭ್ಯೋಽಪ್ಯತುಷ್ಯತ್ ಸತ್ಯಭಾಷಣಾತ್ ॥ ೧೧೯
ದಿನೈಃ ಸಪ್ತಾಪಿ ದುರ್ಭಿಕ್ಷದೋಷಾತ್ ತೇ ಚ ವಿಪೇದಿರೇ ।
ಜಾತಿಸ್ಮರಾಶ್ಚ ಭೂಯೋಽಪಿ ತೇನ ಸತ್ಯೇನ ಜಜ್ಞಿರೇ ॥ ೧೨೦
ಇತ್ಥಂ ಫಲತಿ ಶುದ್ಧೇನ ಸಿಕ್ತಂ ಸಂಕಲ್ಪವಾರಿಣಾ ।
ಪುಣ್ಯಬೀಜಮಪಿ ಸ್ವಲ್ಪಂ ಪುಂಸಾಂ ಕೃಷಿಕೃತಾಮಿವ ॥ ೧೨೧
ತದೇವ ದೂಷಿತಂ ದೇವಿ ದುಷ್ಟಸಂಕಲ್ಪಪಾಥಸಾ ।
ಫಲತ್ಯನಿಷ್ಟಮತ್ರೇದಂ ವಚ್ಮ್ಯನ್ಯದಪಿ ತಚ್ಛೃಣು ॥ ೧೨೨
ಗಂಗಾಯಾಂ ತುಲ್ಯಕಾಲೌ ದ್ವೌ ತಪಸ್ಯನಶನೇ ಜನೌ ।
ಏಕೋ ವಿಪ್ರೋ ದ್ವಿತೀಯಶ್ಚ ಚಂಡಾಲಸ್ತಸ್ಥತುಃ ಪುರಾ ॥ ೧೨೩

೧೨೪–೧೨೫. ಅವರಿಬ್ಬರಲ್ಲಿ ಬೆಸ್ತರು ಮೀನುಗಳನ್ನು ಹಿಡಿದು ಹಿಡಿದು ತಿನ್ನುತ್ತಿದ್ದುದನ್ನು ನೋಡಿ, ಹಸಿದು ಕಂಗಾಲಾಗಿದ್ದ ಮೂಢಬ್ರಾಹ್ಮಣನು 'ಈ ಧೂರ್ತ ಬೆಸ್ತರು ಎಂತಹ ಪುಣ್ಯ ಮಾಡಿದ್ದಾರೆ. ಪ್ರತಿದಿನವೂ ಶಫರ ಮೀನುಗಳ ಮಾಂಸವನ್ನು ಮನಸ್ಸಿಗೆ ಬಂದಷ್ಟು ತಿನ್ನುತ್ತಿದ್ದಾರೆ' ಎಂದುಕೊಂಡನು.

೧೨೬–೧೨೭. ಆದರೆ ಚಂಡಾಲನು ಮಾತ್ರ ಅದೇ ಬೆಸ್ತರನ್ನು ನೋಡಿ, ಪ್ರಾಣಿ ಹಿಂಸೆ ಮಾಡುತ್ತಿರುವ ಇವರಿಗೆ ಧಿಕ್ಕಾರ. ಇಂಥವರ ಮುಖವನ್ನು ನಾನೇಕೆ ನೋಡಲಿ, ಎಂದು ಚಿಂತಿಸಿ ಕಣ್ಣುಮುಚ್ಚಿಕೊಂಡು ಧ್ಯಾನಸ್ಥನಾದನು.

೧೨೮–೧೨೯. ಕಾಲಕ್ರಮೇಣ ಹಸಿವಿನಿಂದ ಅವರಿಬ್ಬರೂ ಸತ್ತುಹೋದರು. ಬ್ರಾಹ್ಮಣನ ಹೆಣವನ್ನು ನಾಯಿಗಳು ತಿಂದವು. ಆ ಚಂಡಾಲನು ಗಂಗೆಯ ನೀರಿನಲ್ಲಿ ಲಯವಾದನು. ಆನಂತರ ಭ್ರಷ್ಟನಾದ ಬ್ರಾಹ್ಮಣನು ಅಲ್ಲೇ ಬೆಸ್ತನಾಗಿ ಹುಟ್ಟಿದನು. ಆದರೆ ತೀರ್ಥಕ್ಷೇತ್ರದ ಮಹಿಮೆಯಿಂದ ಜಾತಿಸ್ಮರನಾದನು.

೧೩೦. ಚಂಡಾಲನೂ ಕೂಡ ಅದೇ ಗಂಗಾತೀರದಲ್ಲಿ ರಾಜನ ಮನೆಯಲ್ಲಿ ಜಾತಿಸ್ಮರನಾಗಿ ಹುಟ್ಟಿದನು.

೧೩೧. ಹೀಗೆ ಹಿಂದಿನ ಜನ್ಮದ ಸ್ಮರಣೆಯಿಂದ ಒಬ್ಬನು ಬೆಸ್ತನಾಗಿ ದುಃಖಿಸಿದರೆ ಮತ್ತೊಬ್ಬನು ರಾಜನಾಗಿ ಸಂತೋಷದಿಂದಿದ್ದನು.

---

ತಯೋರ್ವಿಪ್ರಃ ಕ್ಷುಧಾಕ್ರಾಂತೋ ನಿಷಾದಾನ್ವೀಕ್ಷ್ಯ ತತ್ರಗಾನ್ ।
ಮತ್ಸ್ಯಾನಾದಾಯ ಭುಂಜಾನಾನೇವಂ ಮೂಢೋ ವ್ಯಚಿಂತಯತ್ ॥ ೧೨೪
ಅಹೋ ದಾಸ್ಯಾಃಸುತಾ ಏತೇ ಧನ್ಯಾ ಜಗತಿ ಧೀವರಾಃ ।
ಯೇ ಯಥಾಕಾಮಮಶ್ನಂತಿ ಪ್ರತ್ಯಹಂ ಶಫರಾಮಿಷಮ್ ॥ ೧೨೫
ದ್ವಿತೀಯಸ್ತು ಸ ಚಾಂಡಾಲೋ ದೃಷ್ಟ್ವಾ ತಾನೇವ ಧೀವರಾನ್ ।
ಅಚಿಂತಯತ್ ಧಿಗಸ್ತ್ವೇತಾನ್ ಕ್ರವ್ಯಾದಾನ್ ಪ್ರಾಣಘಾತಿನಃ ॥ ೧೨೬
ತತ್ಕಿಮೇವಂ ಸ್ಥಿತಸ್ಯೇಹ ದೃಷ್ಟೈರೇಷಾಂ ಮುಖೈರ್ಮಮ ।
ಇತಿ ಸಂಮೀಲ್ಯ ನೇತ್ರೇ ಸ ತತ್ರಾಸೀತ್ ಸ್ವಾತ್ಮನಿ ಸ್ಥಿತಃ ॥ ೧೨೭
ಕ್ರಮಾಚ್ಚಾನಶನೇನೋಭೌ ವಿಪನ್ನೌ ತೌ ದ್ವಿಜಾಂತ್ಯಜೌ ।
ದ್ವಿಜಸ್ತತ್ರ ಶ್ವಭಿರ್ಭುಕ್ತಃ ಶೀರ್ಣೋ ಗಂಗಾಜಲೇಽಂತ್ಯಜಃ ॥ ೧೨೮
ತತೋಽಕೃತಾತ್ಮಾ ಕೈವರ್ತಕುಲ ಏವಾತ್ರ ಸ ದ್ವಿಜಃ ।
ಅಭ್ಯಜಾಯತ ತೀರ್ಥಸ್ಯ ಗುಣಾತ್ ಜಾತಿಸ್ಮರಸ್ತ್ವಭೂತ್ ॥ ೧೨೯
ಚಂಡಾಲೋಽಪಿ ಸ ತತ್ರೈವ ಗಂಗಾತೀರೇ ಮಹೀಭುಜಃ ।
ಗೃಹೇ ಜಾತಿಸ್ಮರೋ ಜಜ್ಞೇ ಧೀರೋಽನುಪಹತಾತ್ಮಕಃ ॥ ೧೩೦
ಜಾತಯೋಶ್ಚ ತಯೋರೇವಂ ಪ್ರಾಗ್ಜನ್ಮ ಸ್ಮರತೋರ್ದ್ವಯೋಃ ।
ಏಕೋಽನುತೇಪೇ ದಾಶಃ ಸನ್ ರಾಜಾ ಸನ್ ಮುಮುದೇಽಪರಃ ॥ ೧೩೧

೧೩೨. ಹೀಗೆ ಧರ್ಮವೆಂಬ ವೃಕ್ಷಕ್ಕೆ ಮನಸ್ಸೇ ಬೇರು. ಅಶುದ್ಧ ಮತ್ತು ಶುದ್ಧ ಮನಸ್ಸು ತನಗೆ ತಕ್ಕ ಫಲವನ್ನು ಪಡೆಯುತ್ತದೆ.

೧೩೩ ಈ ರೀತಿಯಾಗಿ ಕಲಿಂಗದತ್ತನು ತಾರಾದತ್ತಾದೇವಿಗೆ ಹೇಳಿ ಮತ್ತೆ ಪ್ರಸಂಗವಶಾತ್ ಹೀಗೆಂದನು.

೧೩೪. ದೇವಿಯೆ, ಹೆಚ್ಚು ಸತ್ತ್ವದಿಂದ ಕೂಡಿದ ಕರ್ಮವು ಅದಕ್ಕೆ ತಕ್ಕ ಫಲವನ್ನು ಪಡೆಯುತ್ತದೆ. ಏಕೆಂದರೆ ಸಂಪತ್ತು ಸತ್ತ್ವವನ್ನು ಅನುಸರಿಸುತ್ತದೆ.

೧೩೫ ಅಂದುಹಾಗೆ ಒಂದು ವಿಚಿತ್ರವಾದ ಕಥೆಯನ್ನು ಹೇಳುತ್ತೇನೆ ಕೇಳು. ಅವಂತೀದೇಶದಲ್ಲಿ ಲೋಕಪ್ರಸಿದ್ಧವಾದ ಉಜ್ಜಯಿನೀ ಎಂಬ ನಗರವಿದೆ.

೧೩೬ ಮಹಾಕಾಲ ಎಂಬ ಹೆಸರಿನಿಂದ ಶಿವನು ನೆಲೆಸಿರುವ ಈ ನಗರವು ಶಿವನ ಸೇವೆಗೈಯ್ಯಲು ಬಂದ ಕೈಲಾಸ ಶಿಖರಗಳೋ ಎಂಬಂತಿರುವ ಬಿಳಿಯಬಣ್ಣದ ಅರಮನೆಗಳಿಂದ ಶೋಭಿಸುತ್ತಿದೆ.

೧೩೭ ಆ ನಗರದ ಪರಿಸರವು ಒಳ್ಳೆಯ ಚಕ್ರವರ್ತಿಯು ಕುಡಿಯಲು ಯೋಗ್ಯವಾದ ನೀರುಳ್ಳದ್ದಾಗಿಯೂ ನೂರಾರು ಸೈನ್ಯಗಳು ಬಂದು ಸೇರುವಂತಹುದಾಗಿಯೂ (ನೂರಾರು ನದಿಗಳು ಬಂದು ಸೇರುವಂತಹುದಾಗಿಯೂ) ತನ್ನ ಪಕ್ಷದ ರಾಜರಿಗೆ ಆಶ್ರಯ ನೀಡುವಂತಹುದೂ (ರೆಕ್ಕೆಯಿರುವ ಪರ್ವತಗಳಿಗೆ ಆಶ್ರಯಸ್ಥಾನವಾದುದೂ) ಸಮುದ್ರದಂತೆ ಗಂಭೀರವಾಗಿಯೂ (ಆಳವಾಗಿಯೂ) ಆಗಿದೆ

---

ಇತಿಧರ್ಮತರೋರ್ಮೂಲಮಶುದ್ಧಂ ಯಸ್ಯ ಮಾನಸಮ್ ।
ಶುದ್ಧಂ ಯಸ್ಯ ಚ ತದ್ರೂಪಂ ಫಲಂ ತಸ್ಯ ನ ಸಂಶಯಃ ॥ ೧೩೨
ಇತ್ಯೇತದುಕ್ತ್ವಾ ದೇವೀಂ ತಾಂ ತಾರಾದತ್ತಾಂ ಸ ಭೂಪತಿಃ ।
ಕಲಿಂಗದತ್ತಃ ಪುನರಪ್ಯುವಾಚೈನಾಂ ಪ್ರಸಂಗತಃ ॥ ೧೩೩
ಕಿಂ ಚ ಸತ್ತ್ವಾಧಿಕಂ ಕರ್ಮ ದೇವೀ ಯನ್ನಾಮ ಯಾದೃಶಮ್ ।
ಫಲಾಯ ತದ್ಯತಃ ಸತ್ತ್ವಮನುದ್ರಾವಂತಿ ಸಂಪದಃ ॥ ೧೩೪
ತಥಾ ಚ ಕಥಯಾಮ್ಯತ್ರ ಶೃಣು ಚಿತ್ರಾಮಿಮಾಂ ಕಥಾಮ್ ।
ಅಸ್ತೀಹ ಭುವನಖ್ಯಾತಾವಂತೀಷೂಜ್ಜಯಿನೀ ಪುರೀ ॥ ೧೩೫
ರಾಜತೇ ಸಿತಹರ್ಮ್ಯೈರ್ಯಾ ಮಹಾಕಾಲನಿವಾಸಭೂಃ ।
ತತ್ಸೇವಾರಸಸಂಪ್ರಾಪ್ತೈಕೈಲಾಸಶಿಖರೈರಿವ ॥ ೧೩೬
ಸಚ್ಚಕ್ರವರ್ತಿಪಾನೀಯಃ ಪ್ರವಿಶದ್ವಾಹಿನೀಶತಃ ।
ಯದಾಭೋಗೋಽಬ್ಧಿಗಂಭೀರಃ ಸಪಕ್ಷಕ್ಷ್ಮಾಭೃದಾಶ್ರಿತಃ ॥ ೧೩೭

೧೩೮. ಆ ನಗರದಲ್ಲಿ ವಿಕ್ರಮಸಿಂಹ ಎಂಬ ಅನ್ವರ್ಥ ಹೆಸರಿನ ರಾಜನಿದ್ದನು. ಸಿಂಹ ಪರಾಕ್ರಮಿಯಾದ ಅವನಿಗೆ ಶತ್ರುಗಳೆಂಬ ಪ್ರಾಣಿಗಳು ಎಲ್ಲೂ ಎದುರಾಗಲಿಲ್ಲ.

೧೩೯. ಶತ್ರುಗಳೇ ಇರಲಿಲ್ಲವಾದ್ದರಿಂದ ಯುದ್ಧದಲ್ಲಿ ವಿಜಯೋತ್ಸವ ಮಾಡುವ ಸಂದರ್ಭವೂ ಇರಲಿಲ್ಲ. ಇದರಿಂದ ಅಸ್ತ್ರಗಳಲ್ಲಿ ಮತ್ತು ಭುಜಬಲದಲ್ಲಿ ಉದಾಸೀನತೆಯುಂಟಾಗಿ ಆ ರಾಜನು ಒಳಗೊಳಗೇ ಕೊರಗುತ್ತಿದ್ದನು.

೧೪೦. ಒಮ್ಮೆ ಏನೋ ವಿಷಯ ಮಾತನಾಡುವ ಸಂದರ್ಭ ಬಂದಾಗ ರಾಜನ ಮನಸ್ಸನ್ನು ಅರಿತ ಅಮರಗುಪ್ತ ಎಂಬ ಮಂತ್ರಿಯು ರಾಜನಿಗೆ ಹೇಳಿದನು.

೧೪೧. 'ದೇವ, ತೋಳ್ಬಲದ ದರ್ಪದಿಂದಲೂ ಶಸ್ತ್ರವಿದ್ಯೆಯ ಮದದಿಂದಲೂ ಶತ್ರುಗಳನ್ನು ಬಯಸುವ ರಾಜನ ದೋಷವು ಸಹಜವಾದದ್ದೇ.

೧೪೨. ಹಿಂದೆ ಬಾಣಾಸುರನು ಸಾವಿರ ಭುಜಗಳು ಇವೆ ಎಂಬ ದರ್ಪದಿಂದ ತನ್ನೊಡನೆ ಯುದ್ಧ ಮಾಡಲು ಯೋಗ್ಯನಾದ ಶತ್ರುವನ್ನು ಕೊಡು ಎಂದು ಶಿವನನ್ನು ಬೇಡಿದನು.

೧೪೩. ಅಂತಹ ವರವನ್ನು ಪಡೆದ ಅವನ ತೋಳುಗಳೆಂಬ ಕಾಡನ್ನು ಅವನ ವೈರಿಯಾದ ವಿಷ್ಣುವು ಯುದ್ಧದಲ್ಲಿ ತನ್ನ ತೋಳುಗಳಿಂದ ಕತ್ತರಿಸಿದನು.

೧೪೪. ಆದ್ದರಿಂದ ನೀನೂ ಕೂಡ ಯುದ್ಧವಿಲ್ಲ ಎಂದು ದುಃಖಿಸಬಾರದು. ಎಂದಿಗೂ ಅನಿಷ್ಟನಾದ ಶತ್ರುವನ್ನು ಬಯಸಬಾರದು.

---

ತಸ್ಯಾಂ ವಿಕ್ರಮಸಿಂಹಾಖ್ಯೋ ಬಭೂವಾನ್ವರ್ಥಯಾಖ್ಯಯಾ ।
ರಾಜಾ ವೈರಿಮೃಗಾ ಯಸ್ಯ ನೈವಾಸನ್ ಸಂಮುಖಾಃ ಕ್ವಚಿತ್ ॥ ೧೩೮
ಸ ಚ ನಿಷ್ಪ್ರತಿಪಕ್ಷತ್ವಾತ್ ಅಲಬ್ಧಸಮರೋತ್ಸವಃ ।
ಅಸ್ತ್ರೇಷು ಬಾಹುವೀರ್ಯೇ ಚ ಸಾವಜ್ಞೋಽಂತರತಪ್ಯತ ॥ ೧೩೯
ಅಥ ಸೋಽಮರಗುಪ್ತೇನ ತದಭಿಪ್ರಾಯವೇದಿನಾ ।
ಕಥಾಂತರೇ ಪ್ರಸಂಗೇನ ಮಂತ್ರಿಣಾ ಜಗದೇ ನೃಪಃ ॥ ೧೪೦
ದೇವ ದೋರ್ದಂಡದರ್ಪೇಣ ಶಸ್ತ್ರವಿದ್ಯಾಮದೇನ ಚ ।
ಆಶಂಸತಾಮಪಿ ರಿಪೂನ್ ರಾಜ್ಞಾಂ ದೋಷೋ ನ ದುರ್ಲಭಃ ॥ ೧೪೧
ತಥಾ ಚ ಪೂರ್ವಂ ಬಾಣೇನ ಯುದ್ಧಯೋಗ್ಯಮರಿಂ ಹರಃ ।
ದರ್ಪಾದ್ಭುಜಸಹಸ್ರಸ್ಯ ತಾವದಾರಾಧ್ಯ ಯಾಚಿತಃ ॥ ೧೪೨
ಯಾವತ್ಪ್ರಾಪ್ತತಥಾಭೂತತದ್ವರಃ ಸ ಮುರಾರಿಣಾ ।
ದೇವೇನ ವೈರಿಣಾ ಸಂಖ್ಯೇ ಲೂನಬಾಹುವನಃ ಕೃತಃ ॥ ೧೪೩
ತಸ್ಮಾತ್ ತ್ವಯಾಪಿ ಕರ್ತವ್ಯೋ ನಾಸಂತೋಷೋ ಯುಧಂ ವಿನಾ ।
ಕಾಂಕ್ಷಣೀಯೋ ನ ಚಾನಿಷ್ಟೋ ವಿಪಕ್ಷೋಽಪಿ ಕದಾಚನ ॥ ೧೪೪

೧೪೫. ಶಸ್ತ್ರವಿದ್ಯೆಯನ್ನೂ ನಿನ್ನ ಪರಾಕ್ರಮವನ್ನೂ ನೀನು ತೋರಿಸಬೇಕೆಂದಿರುವೆಯಾದರೆ ಕಾಡಿನ ಯೋಗ್ಯಸ್ಥಳದಲ್ಲಿ ಬೇಟೆಯಾಡುವಾಗ ತೋರಿಸು.

೧೪೬. ಬೇಟೆಯಾಡುವುದೂ ಕೂಡ ರಾಜನ ವ್ಯಾಯಾಮಗಳಲ್ಲಿ ಸೇರಿದೆ. ಅಂತಹ ಪರಿಶ್ರಮವಿಲ್ಲದ ರಾಜರು ಯುದ್ಧದಲ್ಲಿ ಪ್ರಶಂಸೆಗೆ ಒಳಗಾಗುವುದಿಲ್ಲ.

೧೪೭. ಕಾಡಿನ ಕ್ರೂರಮೃಗಗಳು ಭೂಮಿಯನ್ನು ಬರಿದು ಮಾಡಬಯಸುತ್ತವೆ. ಆದ್ದರಿಂದ ಅವುಗಳನ್ನು ವಧೆ ಮಾಡುವುದಕ್ಕಾಗಿ ರಾಜನು ಬೇಟೆಯಾಡುವುದು ಅಪೇಕ್ಷಿತ ವಾದುದು.

೧೪೮. ಆದರೆ ಆ ಹವ್ಯಾಸವನ್ನು ಅತಿಯಾಗಿ ಇಟ್ಟುಕೊಳ್ಳಬಾರದು. ಹಿಂದೆಯೂ ಬೇಟೆಯ ಚಟದಿಂದ ಪಾಂಡು ಮುಂತಾದ ರಾಜರು ನಾಶವಾದರು.'

೧೪೯. ಬುದ್ಧಿವಂತ ಮಂತ್ರಿ ಅಮರಗುಪ್ತನು ಹೀಗೆ ಉಪದೇಶಿಸಿದಾಗ ರಾಜ ವಿಕ್ರಮಸಿಂಹನು ಹಾಗೆಯೇ ಸರಿ ಎಂದು ಒಪ್ಪಿದನು.

೧೫೦–೧೫೧. ಒಂದು ದಿನ ಆ ರಾಜನು ಕುದುರೆಗಳು, ಸೈನಿಕರು ಮತ್ತು ಬೇಟೆನಾಯಿ ಗಳಿಂದ ಭೂಮಿಯನ್ನು ತುಂಬಿರುವಂತೆ ಮಾಡುತ್ತಾ ಬಣ್ಣ ಬಣ್ಣದ ಮೇಲೆಸೆದ ಬಲೆಗಳಿಂದ ಎಲ್ಲ ದಿಕ್ಕುಗಳೂ ಆವರಿಸುವಂತೆ ಮಾಡುತ್ತಾ ಹಾಗೂ ಹರ್ಷಗೊಂಡ ಬೇಟೆಗಾರರ ಸಮೂಹದ ಕೂಗಾಟವು ಆಕಾಶವನ್ನೆಲ್ಲ ವ್ಯಾಪಿಸಿರುವಂತೆ ಮಾಡುತ್ತಾ ಬೇಟೆಯಾಡುವುದಕ್ಕೋಸ್ಕರ ನಗರದಿಂದ ಹೊರಟನು.

---

ಶಸ್ತ್ರಶಿಕ್ಷಾ ಸ್ವವೀರ್ಯಂ ಚ ದರ್ಶನೀಯಂ ತವೇಹ ಚೇತ್ ।
ಯೋಗ್ಯಭೂಮಾವಟವ್ಯಾಂ ತತ್ ಮೃಗಯಾಯಾಂ ಚ ದರ್ಶಯ ॥ ೧೪೫
ರಾಜ್ಞಾಂ ಚಾಖೇಟಕಮಪಿ ವ್ಯಾಯಾಮಾದಿಕೃತೇ ಮತಮ್ ।
ಯುದ್ಧಾಧ್ವನಿ ನ ಶಸ್ಯಂತೇ ರಾಜಾನೋ ಹ್ಯಕೃತಶ್ರಮಾಃ ॥ ೧೪೬
ಆರಣ್ಯಾಶ್ಚ ಮೃಗಾ ದುಷ್ಟಾಃ ಶೂನ್ಯಾಮಿಚ್ಛಂತಿ ಮೇದಿನೀಮ್ ।
ತೇನ ತೇ ನೃಪತೇರ್ವಧ್ಯಾ ಇತ್ಯಪ್ಯಾಖೇಟಮಿಷ್ಯತೇ ॥ ೧೪೭
ನ ಚಾತಿ ತೇ ನಿಷೇವ್ಯಂತೇ ತತ್ಸೇವಾವ್ಯಸನೇನ ಹಿ ।
ಗತಾ ನೃಪತಯಃ ಪೂರ್ವಮಪಿ ಪಾಂಡ್ವಾದಯಃ ಕ್ಷಯಮ್ ॥ ೧೪೮
ಇತ್ಯುಕ್ತೋಽಮರಗುಪ್ತೇನ ಮಂತ್ರಿಣಾ ಸ ಸುಮೇಧಸಾ ।
ರಾಜಾ ವಿಕ್ರಮಸಿಂಹೋಽತ್ರ ತಥೇತಿ ತದಮನ್ಯತ ॥ ೧೪೯
ಅನ್ಯೇದ್ಯುಶ್ಚಾಶ್ವಪಾದಾತಸಾರಮೇಯಮಯೀಂ ಭುವಮ್ ।
ವಿಚಿತ್ರವಾಗುರೋಚ್ಛ್ರಾಯಮಯೀಶ್ಚ ಸಕಲಾ ದಿಶಃ ॥ ೧೫೦
ಸಹರ್ಷಮೃಗಯುಗ್ರಾಮನಿನಾದಮಯಮಂಬರಮ್ ।
ಕುರ್ವನ್ ಸ ಮೃಗಯಾಹೇತೋಃ ನಗರ್ಯಾ ನಿರ್ಯಯೌ ನೃಪಃ ॥ ೧೫೧

೧೫೨–೧೫೩. ಆನೆಯ ಮೇಲೆ ಕುಳಿತುಕೊಂಡು ಹೊರಟ ರಾಜನು ನಗರದ ಹೊರಗಡೆ ಇರುವ ಒಂದು ಪಾಳು ದೇವಾಲಯದಲ್ಲಿ ಒಟ್ಟಿಗಿದ್ದ ಇಬ್ಬರು ಪುರುಷರನ್ನು ನೋಡಿ ಅವರು ಪರಸ್ಪರ ಏನನ್ನೋ ಮಾತನಾಡಿಕೊಳ್ಳುತ್ತಿದ್ದಾರೆಂದು ದೂರದಿಂದಲೇ ಊಹಿಸಿ ತನ್ನ ಪಾಡಿಗೆ ಬೇಟೆಗಾಗಿ ಕಾಡಿಗೆ ಹೋದನು.

೧೫೪. ಅಲ್ಲಿ ಕತ್ತಿಯನ್ನು ಸೆಳೆದು ಖಡ್ಗ ಮೃಗಗಳನ್ನೂ ಬೆಳೆದ ಹುಲಿಗಳನ್ನೂ ಕೊಂದು ಅರಣ್ಯ ಭೂಪ್ರದೇಶದಲ್ಲೂ ಪರ್ವತಪ್ರದೇಶಗಳಲ್ಲೂ ಸಿಂಹನಾದವನ್ನು ಉಂಟುಮಾಡಿ ಸಂತೋಷಪಟ್ಟನು.

೧೫೫. ಆನೆಗಳನ್ನು ಸಂಹರಿಸುವ ಸಿಂಹಗಳು ಸತ್ತಮೇಲೆ ಅವುಗಳ ಉಗುರುಗಳಿಂದ ಉದುರಿದ, ತನ್ನ ಪರಾಕ್ರಮದ ಬೀಜದಂತೆ ಹೊಳೆಯುವ ಮುತ್ತುಗಳನ್ನು ಭೂಮಿಯ ಮೇಲೆ ಹರಡಿದನು.

೧೫೬. ತಿರ್ಯಕ್ ಪ್ರಾಣಿಗಳು ಇವನಿಗೆ ಅಡ್ಡವಾಗಿ ವಕ್ರಗತಿಯಿಂದ ಇವನ ಮೇಲೆ ಹಾರಿಬಿದ್ದುವು. ರಾಜನ ಅವುಗಳನ್ನು ನೇರಗತಿಯಲ್ಲಿ ಅನಾಯಾಸವಾಗಿ ಕೊಂದು ಸಂತುಷ್ಟನಾದನು.

೧೫೭. ಬಹಳ ಹೊತ್ತು ಬೇಟೆಯಾಡಿ ಸೇವಕರನ್ನು ಆಯಾಸಗೊಳಿಸಿದ ರಾಜನು ಬಿಲ್ಲಿನ ಹೆದೆಯನ್ನು ಸಡಿಲಗೊಳಿಸಿ ಉಜ್ಜಯಿನಿಗೆ ಹಿಂತಿರುಗಿದನು.

೧೫೮. ಉಜ್ಜಯಿನಿಯ ದೇವಾಲಯದಲ್ಲಿ ಅಷ್ಟು ಹೊತ್ತಿನವರೆಗೂ ಅಲ್ಲಿಯೇ ಇದ್ದ ಆ ಇಬ್ಬರು ಪುರುಷರು ಹೊರಗೆ ಹೊರಟಿದ್ದನ್ನು ರಾಜನು ನೋಡಿದನು.

---

ನಿರ್ಗಚ್ಛನ್ ಗಜಪೃಷ್ಠಸ್ಥೋ ಬಾಹ್ಯೇ ಶೂನ್ಯೇ ಸುರಾಲಯೇ ।
ಪುರುಷೌ ದ್ವಾವಪಶ್ಯಚ್ಚ ವಿಜನೇ ಸಹಿತಸ್ಥಿತೌ ॥ ೧೫೨
ಸ್ವೈರಂ ಮಂತ್ರಯಮಾಣೌ ಚ ಮಿಥಃ ಕಿಮಪಿ ತಾವುಭೌ ।
ದೂರಾತ್ ಸ ತರ್ಕಯನ್ ರಾಜಾ ಜಗಾಮ ಮೃಗಯಾವನಮ್ ॥ ೧೫೩
ತತ್ರ ಪ್ರೋತ್ಖಾತಖಡ್ಗೇಷು ವೃದ್ಧವ್ಯಾಘ್ರೇಷು ಚ ವ್ಯಧಾತ್ ।
ತೋಷಂ ಸ ಸಿಂಹನಾದೇಷು ಭೂಭಾಗೇಷು ನಗೇಷು ಚ ॥ ೧೫೪
ತಾಂ ಸ ವಿಕ್ರಮಬೀಜಾಭೈರ್ಮಹೀಂ ತಸ್ತಾರ ಮೌಕ್ತಿಕೈಃ ।
ಸಿಂಹಾನಾಂ ಹಸ್ತಿಹಂತೄಣಾಂ ನಿಹತಾನಾಂ ನಖಚ್ಯುತೈಃ ॥ ೧೫೫
ತಿರ್ಯಂಚಸ್ತಿರ್ಯಗೇವಾಸ್ಯ ಪೇತುರ್ವಕ್ರಪ್ಲುತಾ ಮೃಗಾಃ ।
ಲಘು ನಿರ್ಭಿದ್ಯ ತಾನ್ ಪೂರ್ವಂ ಹರ್ಷಂ ಪ್ರಾಪದವಕ್ರಗಃ ॥ ೧೫೬
ಕೃತಾಖೇಟಶ್ಚ ಸುಚಿರಂ ರಾಜಾಸೌ ಶ್ರಾಂತಸೇವಕಃ ।
ಆಗಾಚ್ಛಿಥಿಲಿತಜ್ಯೇನ ಚಾಪೇನೋಜ್ಜಯಿನೀಂ ಪುನಃ ॥ ೧೫೭
ತಸ್ಯಾಂ ದೇವಕುಲೇ ತಸ್ಮಿನ್ ತಾವತ್ಕಾಲಂ ತಥೈವ ತೌ ।
ಸ್ಥಿತೌ ದದರ್ಶ ಪುರುಷೌ ನಿರ್ಗಚ್ಛನ್ ಯೌ ಸ ದೃಷ್ಟವಾನ್ ॥ ೧೫೮

೧೫೯. "ಇಷ್ಟು ಹೊತ್ತಿನವರೆಗೆ ಹೀಗೆ ರಹಸ್ಯವಾದ ಮಾತುಕತೆ ನಡೆಸುತ್ತಿರುವ ಇವರು ಯಾರು? ಖಂಡಿತವಾಗಿಯೂ ಇವರು ಗೂಢಚಾರರೇ.'

೧೬೦. ಹೀಗೆಂದು ಆಲೋಚನೆಮಾಡಿ ಆ ರಾಜನು ಸೇವಕನನ್ನು ಕಳಿಸಿ ಅವರಿಬ್ಬರನ್ನೂ ಕರೆಸಿಕೊಂಡನು ಮತ್ತು ಅವರನ್ನು ವಶ ಮಾಡಿಕೊಂಡು ಬಂಧಿಸಿದನು.

೧೬೧. ಮಾರನೆಯ ದಿನ ಅವರಿಬ್ಬರನ್ನೂ ತನ್ನ ಆಸ್ಥಾನಕ್ಕೆ ಕರೆಸಿಕೊಂಡು "ನೀವಿಬ್ಬರು ಯಾರು ? ನಿಮ್ಮಿಬ್ಬರ ದೀರ್ಘವಾದ ಮಂತ್ರಾಲೋಚನೆ ಏನು' ಎಂದು ಕೇಳಿದನು.

೧೬೨. ಅನಂತರ ಸ್ವತಃ ರಾಜನೇ ಒತ್ತಾಯಿಸಿದ್ದರಿಂದ ಅವರಲ್ಲಿ ತರುಣನಾಗಿದ್ದವನು ಅಭಯವನ್ನು ಬೇಡಿ ಮಾತನಾಡಲು ಪ್ರಾರಂಭಿಸಿದನು.

೧೬೩. "ಎಲೈರಾಜನೆ, ಈಗ ಯಥಾವತ್ತಾಗಿ ವರ್ಣಿಸುತ್ತೇನೆ ಕೇಳು. ನಿಮ್ಮ ಈ ಊರಿನಲ್ಲೇ ಕರಭಕ ಎಂಬ ಬ್ರಾಹ್ಮಣನು ಇದ್ದನು.

೧೬೪. ಅವನು ಉತ್ತಮೋತ್ತಮನಾದ ಪುತ್ರನು ಹುಟ್ಟಬೇಕೆಂಬ ಇಚ್ಛೆಯಿಂದ ಯಜ್ಞ ಮಾಡಿದ್ದರಿಂದ ವೇದಗಳನ್ನು ಬಲ್ಲ ನಾನು ಜನಿಸಿದೆ.

೧೬೫. ನನ್ನ ತಂದೆಯು ಪತ್ನಿಯೊಡನೆ ಸ್ವರ್ಗಸ್ಥನಾದಾಗ ಇನ್ನೂ ಚಿಕ್ಕವನಾಗಿದ್ದ ನಾನು ವಿದ್ಯಾವಂತನಾಗಿದ್ದರೂ ಸಹ ಅನಾಥನಾಗಿದ್ದುದರಿಂದ ಅಡ್ಡದಾರಿ ಹಿಡಿದೆನು.

---

ಕಾವೇತೌ ಮಂತ್ರಯೇತೇ ಚ ಕಿಂಸ್ವಿದೇವಮಿಯಚ್ಚಿರಮ್ ।
ನೂನಂ ಚಾರಾವಿಮೌ ದೀರ್ಘರಹಸ್ಯಾಲಾಪಸೇವಿನೌ ॥ ೧೫೯

ಇತ್ಯಾಲೋಚ್ಯ ಪ್ರತೀಹಾರಂ ವಿಸೃಜ್ಯಾನಾಯಯತ್ ಸ ತೌ ।
ಪುರುಷೌ ದ್ವಾವಷ್ಟಭ್ಯ ರಾಜಾ ಬದ್ಧೌ ಚಕಾರ ಚ ॥ ೧೬೦

ದ್ವಿತೀಯೇಽಹನಿ ಚಾಸ್ಥಾನಂ ತಾವಾನಾಯ್ಯ ಸ ಪೃಷ್ಟವಾನ್ ।
ಕೌ ಯುವಾಂ ಸುಚಿರಂ ಕಶ್ಚ ಮಂತ್ರಸ್ತಾವಾನ್ನ ವಾಮಿತಿ ॥ ೧೬೧

ತತಸ್ತಯೋಃ ಸ್ವಯಂ ರಾಜ್ಞಾ ತತ್ರ ಪರ್ಯನುಯುಕ್ತಯೋಃ ।
ಯಾಚಿತಾಭಯಯೋರೇಕೋ ಯುವಾ ವಕ್ತುಂ ಪ್ರಚಕ್ರಮೇ ॥ ೧೬೨

ಶ್ರೂಯತಾಂ ವರ್ಣಯಾಮ್ಯೇತದ್ಯಥಾವದಧುನಾ ಪ್ರಭೋ ।
ಅಭೂತ್ಕರಭಕೋ ನಾಮ ವಿಪ್ರೋಽಸ್ಯಾಮೇವ ವಃ ಪುರಿ ॥ ೧೬೩

ತಸ್ಯ ಪ್ರವೀರಪುತ್ರೇಚ್ಛಾಕೃತಾಗ್ನ್ಯಾರಾಧನೋದ್ಭವಃ ।
ಅಹಮೇಷ ಮಹಾರಾಜ ವೇದವಿದ್ಯಾವಿದಃ ಸುತಃ ॥ ೧೬೪

ತಸ್ಮಿಂಶ್ಚ ಭಾರ್ಯಾನುಗತೇ ಪಿತರಿ ಸ್ವರ್ಗತೇ ಶಿಶುಃ ।
ಅಧೀತವಿದ್ಯೋಽಪ್ಯನಾಥತ್ವಾತ್ ಸ್ವಮಾರ್ಗಂ ತ್ಯಕ್ತವಾನಹಮ್ ॥ ೧೬೫

೧೬. ನಾನು ಜೂಜು, ಮತ್ತು ಶಸ್ತ್ರವಿದ್ಯೆಗಳನ್ನು ಕಲಿಯಲು ತೊಡಗಿದೆನು. ಹಿರಿಯರ ಶಿಕ್ಷೆಯಿಲ್ಲದಂತಹ ಬಾಲ್ಯದಲ್ಲಿ ಸರಿಯಾದ ಶಿಕ್ಷಣವಿಲ್ಲದಿದ್ದರೆ ಯಾರು ತಾನೆ ಅಡ್ಡದಾರಿ ಹಿಡಿಯುವುದಿಲ್ಲ ?

೧೭. ಬಾಲ್ಯವು ಕ್ರಮೇಣ ಕಳೆದ ಮೇಲೆ ಭುಜಬಲದ ಗರ್ವದಿಂದ ನಾನು ಬಾಣಪ್ರಯೋಗ ಮಾಡಲು ಒಮ್ಮೆ ಕಾಡಿಗೆ ಹೋದೆನು.

೧೮. ಅಷ್ಟರಲ್ಲಿ ಅದೇ ಮಾರ್ಗದಲ್ಲಿ ಒಬ್ಬ ಸ್ತ್ರೀ, ಅನೇಕ ಜನರೊಡನೆ ರಥದಲ್ಲಿ ಕುಳಿತುಕೊಂಡು ನಗರದ ಕಡೆಯಿಂದ ಬರುತ್ತಿದ್ದಳು.

೧೯. ಆಗ ಇದ್ದಕ್ಕಿದ್ದಂತೆ ಎಲ್ಲಿಂದಲೋ ಯಾವುದೋ ಒಂದು ಆನೆಯು ಬಂದು ಮದದಿಂದ ಸರಪಳಿಯನ್ನು ಕಳಚಿಕೊಂಡು ಆ ಮಹಿಳೆಯ ಮೇಲೆ ಎರಗಿತು.

೨೦. ಅದರ ಭಯದಿಂದ ಅವಳನ್ನು ಅನುಸರಿಸಿಕೊಂಡು ಬಂದಿದ್ದ ಅವಳ ಗಂಡನೇ ಮೊದಲಾದ ಎಲ್ಲ ಜನರೂ ಹೇಡಿಗಳಂತೆ (ನಪುಂಸಕರಂತೆ) ಅತ್ತಿತ್ತ ಪಲಾಯನ ಮಾಡಿದರು.

೨೧–೨೨. ಆ ದೃಶ್ಯವನ್ನು ನೋಡಿ ಕೂಡಲೇ ನಾನು ಆತಂಕದಿಂದ ಚಿಂತಿಸಿದೆನು. "ಅಯ್ಯೋ, ಗಾಬರಿಗೊಂಡ ಈ ಜನರು ಸಂಕಟದಲ್ಲಿರುವ ಇವಳೊಬ್ಬಳನ್ನೇ ಬಿಟ್ಟುಹೋದರಲ್ಲ. ರಕ್ಷಣೆಯಿಲ್ಲದ ಇವಳನ್ನು ನಾನು ಆನೆಯಿಂದ ರಕ್ಷಿಸುತ್ತೇನೆ. ಕಷ್ಟದಲ್ಲಿರುವವರನ್ನು ರಕ್ಷಿಸದ ಈ ಪ್ರಾಣವು ಏಕೆ, ಈ ಪೌರುಷವಾದರೂ ಏಕೆ ?'

---

ಪ್ರವೃತ್ತಶ್ಚಾಭವಂ ದ್ಯೂತಂ ಶಸ್ತ್ರವಿದ್ಯಾಶ್ಚ ಸೇವಿತುಮ್ ।
ಕಸ್ಯ ನೋಚ್ಛೃಂಖಲಂ ಬಾಲ್ಯಂ ಗುರುಶಾಸನವರ್ಜಿತಮ್ ॥ ೧೬
ತೇನ ಕ್ರಮೇಣ ಚೋತ್ತೀರ್ಣೋ ಶೈಶವೇ ಜಾತದೋರ್ಮದಃ ।
ಅಟವೀಮೇಕದಾ ಬಾಣಾನಹಂ ಕ್ಷೇಪ್ತುಂ ಗತೋಽಭವಮ್ ॥ ೧೭
ತಾವತ್ತೇನ ಪಥಾ ಚೈಕಾ ನಗರ್ಯಾ ನಿರ್ಗತಾ ವಧೂಃ ।
ಆಗಾತ್ಕರ್ಣೀರಥಾರೂಢಾ ಜನೈರ್ಬಹುಭಿರನ್ವಿತಾ ॥ ೧೮
ಅಕಸ್ಮಾಚ್ಚ ತದೈವಾತ್ರ ಕರೀ ತ್ರೋಟಿತಶೃಂಖಲಃ ।
ಕುತೋಽಪ್ಯಾಗತ್ಯ ತಾಮೇವ ವಧೂಮಭ್ಯಾಪತನ್ಮದಾತ್ ॥ ೧೯
ತದ್ಭಯೇನ ಚ ಸರ್ವೇಽಪಿ ತ್ಯಕ್ತ್ವಾ ತಾಮನುಯಾಯಿನಃ ।
ತದ್ಭರ್ತ್ರಾಪಿ ಸಹ ಕ್ಲೀಬಾಃ ಪಲಾಯ್ಯೇತಸ್ತತೋಗತಾಃ ॥ ೨೦
ತದ್ದೃಷ್ಟ್ವಾ ಸಹಸೈವಾಹಂ ಸಸಂಭ್ರಮಮಚಿಂತಯಮ್ ।
ಹಾ ಕಥಂ ಕಾತರೈರೇಭಿಃ ತ್ಯಕ್ತೈಕೇಯಂ ತಪಸ್ವಿನೀ ॥ ೨೧
ತದಹಂ ವಾರಣಾದಸ್ಮಾತ್ ರಕ್ಷಾಮ್ಯಶರಣಾಮಿಮಾಮ್ ।
ಆಪನ್ನತ್ರಾಣವಿಕಲೈಃ ಕಿಂ ಪ್ರಾಣೈಃ ಪೌರುಷೇಣ ವಾ ॥ ೨೨

೧೭೩. ಎಂದು ನಾನು ಗರ್ಜಿಸುತ್ತಾ ಆ ಆನೆಯ ಕಡೆಗೆ ಧಾವಿಸಿದೆ. ಆ ಆನೆಯೂ ಸಹ ಅವಳನ್ನು ಬಿಟ್ಟು ನನ್ನ ಕಡೆಗೆ ಓಡಿ ಬಂದಿತು.

೧೭೪. ಅವಳು ಭೀತಿಯಿಂದ ನನ್ನ ಕಡೆ ನೋಡುತ್ತಿರುವಂತೆಯೇ ನಾನು ಅರಚುತ್ತಾ ಓಡಲು ತೊಡಗಿ (ನನ್ನ ಹಿಂದೆ ಬಂದ) ಆನೆಯನ್ನು ಬಹುದೂರ ಸೆಳೆದುಕೊಂಡು ಹೋದೆನು.

೧೭೫–೧೭೬. ಅನಂತರ ಎಲೆಗಳಿಂದ ದಟ್ಟವಾಗಿದ್ದ ಒಂದು ಮಹಾವೃಕ್ಷದ ಮುರಿದ ಕೊಂಬೆಯನ್ನು ಸೇರಿ ಅದರ ಮರೆಯಲ್ಲಿ ಮರದ ಮಧ್ಯಭಾಗಕ್ಕೆ ಹೋದೆನು. ನಂತರ ಕೊಂಬೆಯು ಹಗುರವಾಗಿದ್ದರಿಂದ ಅದನ್ನು ಅಲ್ಲಿ ಅಡ್ಡಲಾಗಿ ಇಟ್ಟು ನಾನು ಓಡಿಹೋದೆನು. ಆ ಆನೆಯು ಆ ಕೊಂಬೆಯನ್ನು ಚೂರು ಚೂರು ಮಾಡಿತು.

೧೭೭. ಆಮೇಲೆ ನಾನು ಆ ಮಹಿಳೆಯ ಹತ್ತಿರಕ್ಕೆ ಓಡಿಹೋದೆನು. ಹೆದರಿದ್ದ ಅವಳ ಯೋಗಕ್ಷೇಮವನ್ನು ವಿಚಾರಿಸಿದೆನು.

೧೭೮. ದುಃಖಿತಳಾದ ಅವಳು ನನ್ನನ್ನು ನೋಡಿ ಸಂತೋಷದಿಂದ ಹೀಗೆಂದಳು– "'ಇಂತಹ ಹೇಡಿ ಪುರುಷನಿಗೆ ಮದುವೆಮಾಡಿಕೊಡಲಾದ ನನಗೆ ಕುಶಲವೆಲ್ಲಿ ?

೧೭೯. ಇಂತಹ ಸಂಕಟದಲ್ಲಿ ಅವನು ನನ್ನನ್ನು ಬಿಟ್ಟು ಎಲ್ಲಿಗೋ ಹೋದನು. ನೀನು ಯಾವ ತೊಂದರೆಗೂ ಒಳಗಾಗದೆ ಹಿಂದಿರುಗಿ ಬಂದು ಪುನಃ ಕಾಣಿಸಿಕೊಂಡದ್ದೇ ನನಗಾದ ಕುಶಲ.

---

ಇತ್ಯಹಂ ಮುಕ್ತನಾದಸ್ತಂ ಗಜೇಂದ್ರಂ ಪ್ರತಿ ಧಾವಿತಃ ।
ಗಜೋಽಪಿ ತಾಂ ಸ್ತ್ರಿಯಂ ಹಿತ್ವಾ ಸ ಮಾಮೇವಾಭ್ಯದುದ್ರುವತ್ ॥ ೧೭೩
ತತೋಽಹಂ ಭೀತಯಾ ನಾರ್ಯಾ ವೀಕ್ಷ್ಯಮಾಣಸ್ತಯಾ ನದನ್ ।
ಪಲಾಯಮಾನಶ್ಚ ಗಜಂ ತಂ ದೂರಮಪಕೃಷ್ಟವಾನ್ ॥ ೧೭೪
ಕ್ರಮಾತ್ ಪತ್ರಘನಾಂ ಭಗ್ನಾಂ ಪ್ರಾಪ್ಯ ಶಾಖಾಂ ಮಹಾತರೋಃ ।
ಆತ್ಮಾನಂ ಚ ತಯಾಚ್ಛಾದ್ಯ ತರುಮಧ್ಯಮಗಾಮಹಮ್ ॥ ೧೭೫
ತತ್ರಾಗ್ರೇ ಸ್ಥಾಪಯಿತ್ವಾ ತಾಂ ಶಾಖಾಂ ತಿರ್ಯಕ್ ಸುಲಾಘವಾತ್ ।
ಪಲಾಯಿತೋಽಹಂ ಹಸ್ತೀ ಚ ಸ ತಾಂ ಶಾಖಾಮಚೂರ್ಣಯತ್ ॥ ೧೭೬
ತತೋಽಹಂ ಯೋಷಿತಸ್ತಸ್ಯಾಃ ಸಮೀಪಮಗಮಂ ದ್ರುತಮ್ ।
ಶರೀರಕುಶಲಂ ಚೈತಾಮಪೃಚ್ಛಮಿಹ ಭೀಷಿತಾಮ್ ॥ ೧೭೭
ಸಾಪಿ ಮಾಂ ವೀಕ್ಷ್ಯ ದುಃಖಾರ್ತಾ ಸಹರ್ಷಾ ಚಾವದತ್ತದಾ ।
ಕಿಂ ಮೇ ಕುಶಲಮೇತಸ್ಮೈ ದತ್ತಾ ಕಾಪುರುಷಾಯ ಯಾ ॥ ೧೭೮
ಈದೃಶೇ ಸಂಕಟೇ ಯೋ ಮಾಂ ತ್ಯಕ್ತ್ವಾ ಕ್ವಾಪಿ ಗತಃ ಪ್ರಭೋ ।
ಏತತ್ತು ಕುಶಲಂ ಯತ್ ತ್ವಮಕ್ಷತಃ ಪುನರೀಕ್ಷಿತಃ ॥ ೧೭೯

೧೮೦. ನನಗೆ ಅವನು ಎಂತಹ ಗಂಡ ? ನಿನ್ನ (ಪ್ರಾಣದ) ಚಿಂತೆಯಿಲ್ಲದೆ ನನ್ನನ್ನು ಸಾವಿನ ದವಡೆಯಿಂದ ಪಾರು ಮಾಡಿದ ನೀನೇ ನನ್ನ ಗಂಡ.

೧೮೧. ನನ್ನ ಗಂಡನು ಸೇವಕರೊಡನೆ ಬರುತ್ತಿದ್ದಾನೆ. ಈಗ ನೀನು ನಿಶ್ಚಿಂತೆಯಿಂದ ನನ್ನ ಹಿಂದೆಯೇ ಬಾ.

೧೮೨. ಅವಕಾಶ ಸಿಕ್ಕಾಗ ನಾವಿಬ್ಬರೂ ಎಲ್ಲಿಗಾದರೂ ಹೋಗೋಣ.” ಹೀಗೆ ಅವಳು ಹೇಳಿದಾಗ ನಾನು ಹಾಗೆಯೇ ಮಾಡಿದೆ.

೧೮೩. ಸುಂದರಿಯೂ ನನಗೆ ತನ್ನನ್ನು ಅರ್ಪಿಸಿಕೊಂಡವಳೂ ಆದ ಇವಳು ಪರಸ್ತ್ರೀ. ನನಗೆ ಇವಳು ಯಾಕೆ ಎಂಬುದು ಧೈರ್ಯದ ಮಾರ್ಗವೇ ಹೊರತು ಸುಖಾಸಕ್ತ ತಾರುಣ್ಯಾವಸ್ಥೆಯ ಮಾರ್ಗವಲ್ಲ.

೧೮೪. ಮರುಕ್ಷಣದಲ್ಲೇ ಅಲ್ಲಿಗೆ ಸೇವಕರೊಡನೆ ಬಂದ ಪತಿಯೊಡನೆ ಸಂಭಾವಿತಳಾಗಿ ಅವಳು ಹೊರಡಲು ತೊಡಗಿದಳು.

೧೮೫. ನಾನೂ ಕೂಡ ಅವಳು ರಹಸ್ಯವಾಗಿ ಕೊಟ್ಟ ಬುತ್ತಿಯೊಡನೆ ಬೇರೆ ಮಾರ್ಗದಲ್ಲಿ ಅವನಿಗೆ ಗೊತ್ತಾಗದಂತೆ ಅವರ ಹಿಂದೆಯೇ ಬಹುದೂರ ನಡೆದೆನು.

೧೮೬. ಅವಳಾದರೋ ತಾನು ಆನೆಗೆ ಹೆದರಿಬಿದ್ದು ದೇಹದಲ್ಲೆಲ್ಲ ಗಾಯವಾಗಿದೆ ಎಂದು ದಾರಿಯಲ್ಲಿ ಸುಳ್ಳು ಹೇಳಿ ಅವನು ತನ್ನನ್ನು ಮುಟ್ಟದಿರುವಂತೆ ಮಾಡಿದಳು.

---

ತನ್ಮೇ ಸ ಕತಮೋ ಭರ್ತಾ ತ್ವಮಿದಾನೀಂ ಪತಿರ್ಮಮ ।
ಯೇನಾತ್ಮನಿರಪೇಕ್ಷೇಣ ಹೃತಾ ಮೃತ್ಯುಮುಖಾದಹಮ್ ॥ ೧೮೦
ಸ ಚೈಷ ದೃಶ್ಯತೇ ಭೃತ್ಯೈಃ ಸಹಾಗಚ್ಛನ್ ಪತಿರ್ಮಮ ।
ಅತಃ ಸ್ವೈರಂ ತ್ವಮಸ್ಮಾಕಂ ಪಶ್ಚಾದಾಗಚ್ಛ ಸಾಂಪ್ರತಮ್ ॥ ೧೮೧
ಲಬ್ಧೇಽಂತರೇ ಹಿ ಮಿಲಿತಾ ಯಾಸ್ಯಾಮೋ ಯತ್ರಕುತ್ರಚಿತ್ ।
ಏವಮ ತಯೋಕ್ತಸ್ತದಹಂ ತಥೇತಿ ಪ್ರತಿಪನ್ನವಾನ್ ॥ ೧೮೨
ಸುರೂಪಾಪ್ಯರ್ಥಿತಾತ್ಮಾಪಿ ಪರಸ್ತ್ರೀಯಂ ಕಿಮೇತಯಾ ।
ಇತಿ ಧೈರ್ಯಸ್ಯ ಮಾರ್ಗೋಽಯಂ ನ ತಾರುಣ್ಯಸ್ಯ ಸಂಗಿನಃ ॥ ೧೮೩
ಕ್ಷಣಾದೇತ್ಯ ಚ ಸಾ ಭರ್ತ್ರಾ ಬಾಲಾ ಸಂಭಾವಿತಾ ಸತೀ ।
ತೇನ ಸಾಕಂ ಸಭೃತ್ಯೇನ ಗಂತುಂ ಪ್ರಾವರ್ತತೇ ಕ್ರಮಾತ್ ॥ ೧೮೪
ಅಹಂ ಚ ಗುಪ್ತತದ್ದತ್ತಪಾಥೇಯಃ ಪರವರ್ತ್ಮನಾ ।
ಪಶ್ಚಾದಲಕ್ಷಿತಸ್ತಸ್ಯ ದೂರಮಧ್ವಾನಮಭ್ಯಗಾಮ್ ॥ ೧೮೫
ಸಾ ಚ ಹಸ್ತಿಭಯಭ್ರಷ್ಟಭುಗಾಂಗಜನಿತಾಂ ರುಜಮ್ ।
ಪಥಿ ಮಿಥ್ಯಾ ವದಂತೀ ತಂ ಪತಿಂ ಸ್ಪರ್ಶೇಽಪ್ಯವರ್ಜಯತ್ ॥ ೧೮೬

೧೭೭. ಸಹಿಸಲಸಾಧ್ಯವಾದ ಗಾಢವಾದ ವಿಷವನ್ನು ತನ್ನೊಳಗೆ ಹೊಂದಿ ಹಾವಿನಂತಿರುವ ಯಾವ ನೊಂದ ಸ್ತ್ರೀ ತಾನೆ ಅಪಕಾರ ಮಾಡದೆ ಸುಮ್ಮನಿದ್ದಾಳು?

೧೭೮. ಕ್ರಮೇಣ ನಾವೆಲ್ಲರೂ ಲೋಹನಗರವನ್ನು ತಲುಪಿದೆವು. ಅಲ್ಲಿ ಆ ಮಹಿಳೆಯ ಪತಿಯು ವ್ಯಾಪಾರದಿಂದ ಜೀವಿಸುತ್ತಿದ್ದನು.

೧೭೯. ನಾನು ಆ ಊರಿನ ಹೊರಗೆ ಇದ್ದ ದೇವಾಲಯದಲ್ಲಿ ಅಂದಿನ ಹಗಲನ್ನು ಕಳೆದೆ. ಅಲ್ಲಿ ಈ ಬ್ರಾಹ್ಮಣನು ನನ್ನ ಸ್ನೇಹಿತನಾದನು.

೧೮೦. ಅದೇ ಮೊದಲ ದರ್ಶನವಾಗಿದ್ದರೂ ಸಹ ನಮ್ಮಿಬ್ಬರಲ್ಲಿ ಪರಸ್ಪರ ವಿಶ್ವಾಸ ಉಂಟಾಯಿತು. ಜನ್ಮಾಂತರದಲ್ಲಿ ಸಂಪಾದಿಸಿದ ಪ್ರೀತಿಯು ಪ್ರಾಣಿಗಳ ಮನಸ್ಸನ್ನು ತಿಳಿಯುತ್ತದೆ.

೧೮೧. ಆ ನಂತರ ನಾನು ನನ್ನ ರಹಸ್ಯವನ್ನೆಲ್ಲ ಅವನಿಗೆ ಹೇಳಿದೆನು. ಅದನ್ನು ತಿಳಿಯುತ್ತಲೇ ಅವನು ತಾನಾಗಿಯೇ ನನಗೆ ಹೀಗೆ ಹೇಳಿದನು.

೧೮೨–೧೮೩. ""ನೀನು ನಿಶ್ಚಿಂತನಾಗಿರು. ನೀನು ಬಂದಿರುವ ಕಾರ್ಯಕ್ಕೆಗೂಡಲು ಇಲ್ಲಿ ಒಂದು ಉಪಾಯ ಇದೆ. ಈ ಮಹಿಳೆಯ ಗಂಡನಿಗೆ ಒಬ್ಬ ತಂಗಿ ವ್ಯಾಪಾರ ಮಾಡಿಕೊಂಡು ಇದ್ದಾಳೆ. ಅವಳು ಸಂದರ್ಭವನ್ನು ಅರಿತು ನನ್ನ ಜೊತೆ ಬರಲು ಸಿದ್ಧಳಾಗಿದ್ದಾಳೆ. ಅವಳ ಸಹಾಯದಿಂದ ನಿನ್ನ ಕೆಲಸವನ್ನು ಮಾಡುತ್ತೇನೆ".

---

ಕಸ್ಯ ರಕ್ತೋನ್ಮುಖೀ ಗಾಢರೂಢಾಂತರ್ವಿಷದುಃಸಹಾ ।
ತಿಷ್ಠೇದನಪಕೃತ್ಯ ಸ್ತ್ರೀ ಭುಜಗೀವ ವಿಕಾರಿತಾ ॥ ೧೭೭
ಕ್ರಮಾಚ್ಚ ಲೋಹನಗರಂ ಪ್ರಾಪ್ತಾಃ ಸ್ಮಸ್ತೇ ಪುರಂ ವಯಮ್ ।
ವಣಿಜ್ಯಾಜೀವಿನೋ ಯತ್ರ ಭರ್ತುಸ್ತಸ್ಯಾ ಗೃಹಂ ಸ್ತ್ರಿಯಾಃ ॥ ೧೭೮
ಸ್ಥಿತಾಃ ಸ್ಮಸ್ತದಹಶ್ಚಾತ್ರ ಸರ್ವೇ ಬಾಹ್ಯೇ ಸುರಾಲಯೇ ।
ತತ್ರ ಸಂಮಿಲಿತಶ್ಚೈಷ ದ್ವಿತೀಯೋ ಬ್ರಾಹ್ಮಣಃ ಸಖಾ ॥ ೧೭೯
ನವೇಽಪಿ ದರ್ಶನೇಽನ್ಯೋನ್ಯಮಾಶ್ವಾಸಃ ಸಮಭೂಚ್ಚ ನೌ ।
ಚಿತ್ತಂ ಜಾನಾತಿ ಜಂತೂನಾಂ ಪ್ರೇಮ ಜನ್ಮಾಂತರಾರ್ಜಿತಮ್ ॥ ೧೮೦
ತತೋ ರಹಸ್ಯಮಾತ್ಮೀಯಂ ಸರ್ವಮಸ್ಮೈ ಮಯೋದಿತಮ್ ।
ತದ್‌ಬುದ್ಧ್ವೈವ ತದಾ ಸ್ವೈರಂ ಮಾಮೇವಮಯಮಬ್ರವೀತ್ ॥ ೧೮೧
ತೂಷ್ಣೀಂ ಭವಾಸ್ತ್ಯುಪಾಯೋಽತ್ರ ಯತ್ಕೃತೇ ತ್ವಮಿಹಾಗತಃ ।
ಏತಸ್ಯಾ ಭರ್ತೃಭಗಿನೀ ವಿದ್ಯತೇಽತ್ರ ವಣಿಕ್ಸ್ತ್ರಿಯಾಃ ॥ ೧೮೨
ಗೃಹೀತಾರ್ಥಾ ಮಯಾ ಸಾಕಮಿತಃ ಸಾ ಗಂತುಮುದ್ಯತಾ ।
ತತ್ಕರಿಷ್ಯೇ ತದೀಯೇನ ಸಾಹಾಯ್ಯೇನ ತವೇಪ್ಸಿತಮ್ ॥ ೧೮೩

೧೯೪. ಹೀಗೆಂದು ಹೇಳಿ ಆ ಬ್ರಾಹ್ಮಣನು ಆ ವ್ಯಾಪಾರಿ ಮಹಿಳೆಯ ನಾದಿನಿಯ ಹತ್ತಿರ ಗುಟ್ಟಾಗಿ ಹೋಗಿ ವಿಷಯವನ್ನು ಹೇಳಿದನು.

೧೯೫. ಮಾರನೆಯ ದಿನ ಆ ನಾದಿನಿಯು ತನ್ನ ಅತ್ತಿಗೆಗೆ ತಿಳಿಸಿ ಅವಳನ್ನು ದೇವಾಲಯಕ್ಕೆ ಕರೆದುಕೊಂಡು ಬಂದಳು.

೧೯೬-೧೯೭ ಅಲ್ಲಿ ನಾವಿಬ್ಬರೂ ಇದ್ದಾಗ ಅವಳು ನನ್ನ ಮಿತ್ರನಿಗೆ ತನ್ನ ಅತ್ತಿಗೆಯ ವೇಷವನ್ನು ಹಾಕಿ ಅವನನ್ನು ಕರೆದುಕೊಂಡು ನಾವು ಮಾಡಬೇಕಾದ ಕೆಲಸವನ್ನು ಹೇಳಿ ಹೊರಗೆ ಹೋದಳು.

೧೯೮. ನಾನೂ ಕೂಡ ಆ ವ್ಯಾಪಾರಿ ಮಹಿಳೆಗೆ ಪುರುಷ ವೇಷವನ್ನು ತೊಡಿಸಿ ಹೊರ ನಡೆದು ಈ ಉಜ್ಜಯಿನಿಗೆ ಬಂದೆ.

೧೯೯. ಆ ನಾದಿನಿಯೂ ಸಹ ಆ ದಿನ ಹಗಲು ಉತ್ಸವ ನಡೆದಿದ್ದರಿಂದ ಎಲ್ಲರೂ ಕುಡಿದು ಗಾಢವಾಗಿ ನಿದ್ರಿಸುತ್ತಿದ್ದಾಗ ಮನೆಯಿಂದ ಹೊರಟಳು.

೨೦೦. ಇವನೂ ಅವಳನ್ನು ಕರೆದುಕೊಂಡು ಬ್ರಾಹ್ಮಣರೊಡನಿದ್ದ ಪ್ರಯಾಣಿಕರೊಡನೆ ಈ ನಗರಕ್ಕೆ ಬಂದನು. ಹೀಗೆ ನಾವಿಬ್ಬರೂ ಇಲ್ಲಿ ಸೇರಿದೆವು.

---

ಇತ್ಯುಕ್ತ್ವಾ ಮಾಮಯಂ ವಿಪ್ರೋ ಗತ್ವಾ ತಸ್ಯಾಸ್ತದಾ ರಹಃ ।
ವಣಿಗ್ವಧ್ವಾ ನನಾಂದುಸ್ತದ್ಯಥಾವಸ್ತು ನ್ಯವೇದಯತ್ ॥ ೧೯೪
ಅನ್ಯೇದ್ಯುಃ ಕೃತಸಂವಿಚ್ಚ ಸಾ ನನಾಂದಾ ಸಮೇತ್ಯ ತಾಮ್ ।
ಪ್ರಾವೇಶಯತ್ ಭ್ರಾತೃಜಾಯಾಂ ತತ್ರ ದೇವಗೃಹಾಂತರೇ ॥ ೧೯೫
ತತ್ರಾಂತಃಸ್ಥಿತಯೋರ್ನೌ ಚ ಮಧ್ಯಾದೇತಂ ತದೈವ ಸಾ ।
ಮಿತ್ರಂ ಮೇ ಭ್ರಾತೃಜಾಯಾಯಾಸ್ತಸ್ಯ ವೇಷಮಕಾರಯತ್ ॥ ೧೯೬
ಕೃತತದ್ವೇಷಮೇನಂ ಚ ಗೃಹೀತ್ವಾ ನಗರಾಂತರಮ್ ।
ಭ್ರಾತ್ರಾ ಸಹಾವಿಶದ್ಗೇಹಂ ಕೃತ್ವಾ ನಃ ಕಾರ್ಯಸಂವಿದಮ್ ॥ ೧೯೭
ಅಹಂ ಚ ನಿರ್ಗತ್ಯ ತತಸ್ತಯಾ ಪುರುಷವೇಷಯಾ ।
ವಣಿಗ್ವಧ್ವಾ ಸಮಂ ಪ್ರಾಪ್ತಃ ಕ್ರಮೇಣೋಜ್ಜಯಿನೀಮಿಮಾಮ್ ॥ ೧೯೮
ತನ್ನನಾಂದಾ ಚ ಸಾ ರಾತ್ರೌ ತದಹಃ ಸೋತ್ಸವಾತ್ತತಃ ।
ಮತ್ತಸುಪ್ತಜನಾದ್ಗೇಹಾದನೇನ ಸಹ ನಿರ್ಗತಾ ॥ ೧೯೯
ತತಶ್ಚಾಯಂ ಗೃಹೀತ್ವಾ ತಾಂ ವಿಪ್ರಪ್ರಸನ್ನೈಃ ಪ್ರಯಾಣಿಕೈಃ ।
ಆಗತೋ ನಗರೀಮೇತಾಮಥಾವಾಂ ಮಿಲಿತಾವಿಹ ॥ ೨೦೦

೨೦೧. ಹೀಗೆ ನಮ್ಮಿಬ್ಬರಿಗೂ ಯೌವನಾವಸ್ಥೆಯಲ್ಲಿರುವ ಹೆಂಡತಿಯರು ದೊರಕಿದರು. ಆ ಅತ್ತಿಗೆ ನಾದಿನಿಯರೂ ನಮ್ಮನ್ನು ಅನುರಾಗದಿಂದ ನೋಡುತ್ತಿದ್ದಾರೆ.

೨೦೨. ರಾಜನೇ, ನಮಗೆ ಎಲ್ಲಿ ವಾಸಮಾಡಲೂ ಹೆದರಿಕೆ. ಹೀಗೆ ಸಾಹಸ ಕಾರ್ಯ ಮಾಡಿದ ಮನಸ್ಸು ಯಾರನ್ನು ನಂಬುತ್ತದೆ ?

೨೦೩. ಇಲ್ಲಿ ವಾಸವಾಗಿರುವುದಕ್ಕೆ ಬೇಕಾದ ಹಣದ ಬಗ್ಗೆ ನಾವಿಬ್ಬರೂ ರಹಸ್ಯಾಲೋಚನೆ ಮಾಡುತ್ತಿದ್ದಾಗ ತಾವು ದೂರದಿಂದಲೇ ನಮ್ಮನ್ನು ನೋಡಿದಿರಿ.

೨೦೪. ನೋಡಿದ ಮೇಲೆ ಕರೆಸಿಕೊಂಡು ಗೂಢಚಾರರೆಂದು ಶಂಕಿಸಿ ನಮ್ಮನ್ನು ಕಟ್ಟಿಹಾಕಿ ವಿಷಯವನ್ನು ಕೇಳಿದಿರಿ. ನಾನೂ ಸಹ ಹೇಳಿದೆನು.

೨೦೫. ಈಗ ನೀವು ಏನಾದರೂ ಮಾಡಬಹುದು" ಎಂದು ಆ ಬ್ರಾಹ್ಮಣನು ಹೇಳಿದಾಗ ರಾಜ ವಿಕ್ರಮಸಿಂಹನು ಆ ಇಬ್ಬರು ಬ್ರಾಹ್ಮಣರಿಗೂ ಹೇಳಿದನು.

೨೦೬. 'ನಿಮ್ಮ ಬಗ್ಗೆ ನನಗೆ ಸಂತೋಷವಾಗಿದೆ. ಹೆದರಬೇಡಿ. ಈ ಊರಿನಲ್ಲೇ ವಾಸವಾಗಿರಿ. ನಾನೇ ನಿಮ್ಮಿಬ್ಬರಿಗೂ ಬೇಕಾದಷ್ಟು ಹಣವನ್ನು ನೀಡುತ್ತೇನೆ.'

೨೦೭. ಎಂದು ಹೇಳಿ ಆ ರಾಜನು ಅವರಿಬ್ಬರಿಗೂ ಬೇಕಾದಷ್ಟು ಧನವನ್ನು ಕೊಟ್ಟನು. ಅವರೂ ಸಹ ತಮ್ಮ ಹೆಂಡತಿಯರೊಡನೆ ರಾಜನ ಹತ್ತಿರ ಸುಖವಾಗಿ ಇದ್ದರು.

---

ಇತ್ಯಾವಾಭ್ಯಾಮುಭೇ ಭಾರ್ಯೇ ಪ್ರಾಪ್ತೇ ಪ್ರತ್ಯಗ್ರಯೌವನೇ ।
ನನಾಂದೃಭ್ರಾತೃಜಾಯೇ ತೇ ಸ್ವಾನುರಾಗಸಮರ್ಪಿತೇ ॥ ೨೦೧
ಅತೋ ನಿವಾಸೇ ಸರ್ವತ್ರ ದೇವ ಶಂಕಾಮಹೇ ವಯಮ್ ।
ಕಸ್ಯಾಶ್ವಸಿತಿ ಚೇತೋ ಹಿ ವಿಹಿತಸ್ವೈರಸಾಹಸಮ್ ॥ ೨೦೨
ತದವಸ್ಥಾನಹೇತೋಶ್ಚ ವಿತ್ತಾರ್ಥಂ ಚ ರಹಶ್ಚಿರಮ್ ।
ಆವಾಂ ಮಂತ್ರಯಮಾಣೌ ಹ್ಯೋ ದೃಷ್ಟೌ ದೇವೇನ ದೂರತಃ ॥ ೨೦೩
ದೃಷ್ಟ್ವಾನಾಯ್ಯ ಚ ಸಂಯಮ್ಯ ಸ್ಥಾಪಿತೌ ಚಾರಶಂಕಯಾ ।
ಅದ್ಯ ಪೃಷ್ಟೌ ಚ ವೃತ್ತಾಂತಂ ಸ ಚೈಷ ಕಥಿತೋ ಮಯಾ ॥ ೨೦೪
ದೇವಃ ಪ್ರಭುರತೀದಾನೀಮಿತ್ಯನೇನೋದಿತೇ ತಥಾ ।
ರಾಜಾ ವಿಕ್ರಮಸಿಂಹಸ್ತೌ ವಿಪ್ರೌ ದ್ವಾವಪ್ಯಭಾಷತ ॥ ೨೦೫
ತುಷ್ಟೋಽಸ್ಮಿ ವಾಂ ಭಯಂ ಮಾ ಭೂದಿಹೈವ ಪುರಿ ತಿಷ್ಠತಮ್ ।
ಅಹಮೇವ ಚ ದಾಸ್ಯಾಮಿ ಪರ್ಯಾಪ್ತಂ ಯುವಯೋರ್ಧನಮ್ ॥ ೨೦೬
ಇತ್ಯುಕ್ತ್ವಾ ಸ ದದೌ ರಾಜಾ ಯಥೇಷ್ಟಂ ಜೀವನಂ ತಯೋಃ ।
ತೌ ಚ ಭಾರ್ಯಾನ್ವಿತೌ ತಸ್ಯ ನಿಕಟೇ ತಸ್ಥತುಃ ಸುಖಮ್ ॥ ೨೦೭

೨೦೮. ಹೀಗೆ ಬಲಿಷ್ಠರು ಕೂಡ ದೂರವಿಡುವಂತಹ ಸಾಹಸಕಾರ್ಯಗಳಲ್ಲಿ ಐಶ್ವರ್ಯವು ವಾಸಮಾಡುತ್ತದೆ. ಅದೇ ರೀತಿ ಸಾಹಸಕಾರ್ಯ ಮಾಡುವ ಬುದ್ಧಿವಂತರ ವಿಷಯದಲ್ಲಿ ರಾಜರು ಸಂತೋಷಗೊಂಡು ಸಹಾಯ ಮಾಡುತ್ತಾರೆ.

೨೦೯. ಹೀಗೆ ಈ ಲೋಕದಲ್ಲಿ ಮಾಡಿದ ಮತ್ತು ಹಿಂದಿನ ಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮಗಳಿಗೆ ಅನುಗುಣವಾದ ಫಲಗಳು ದೇವಾಸುರರಾದಿಯಾಗಿ ಎಲ್ಲ ಸೃಷ್ಟಿಗಳಿಗೂ ಯಾವಾಗಲೂ ದೊರೆಯುತ್ತವೆ.

೨೧೦. ಆದ್ದರಿಂದ ದೇವಿ ! ಕನಸಿನಲ್ಲಿ ಆಕಾಶದಿಂದ ಯಾವುದೋ ಒಂದು ಜ್ವಾಲೆಯು ಬಿದ್ದು ನಿನ್ನ ಗರ್ಭವನ್ನು ಪ್ರವೇಶಿಸಿದ್ದನ್ನು ಕಂಡೆಯಲ್ಲ ಅದು ತಾನು ಮಾಡಿದ ಕರ್ಮದ ಫಲವಾಗಿ ಯಾವುದೋ ದೇವ ವಂಶದ ಜೀವವು ನಿನ್ನ ಗರ್ಭವನ್ನು ಪ್ರವೇಶಿಸಿರುವುದನ್ನು ನಿಸ್ಸಂಶಯವಾಗಿ ಸೂಚಿಸುತ್ತದೆ.

---

ಇತ್ಥಂ ಕ್ರಿಯಾಸು ನಿವಸಂತ್ಯಪಿ ಯಾಸು ತಾಸು
ಪುಂಸಾಂ ಶ್ರಿಯಃ ಪ್ರಬಲಸತ್ತ್ವಬಹಿಷ್ಕೃತಾಸು ।
ಏವಂ ಚ ಸಾಹಸಧನೇಷ್ವಥ ಬುದ್ಧಿಮತ್ಸು
ಸಂತುಷ್ಯ ದಾನನಿರತಾಃ ಕ್ಷಿತಿಪಾ ಭವಂತಿ ॥ ೨೦೮

ಇತ್ಥೈಹಿಕೇನ ಚ ಪುರಾವಿಹಿತೇನ ಚಾಪಿ
ಸ್ವೇನೈವ ಕರ್ಮವಿಭವೇನ ಶುಭಾಶುಭೇನ ।
ಶಶ್ವದ್ಭವೇತ್ತದನುರೂಪವಿಚಿತ್ರಭೋಗಃ
ಸರ್ವೋऽಹಿ ನಾಮ ಸಸುರಾಸುರ ಏಷ ಸರ್ಗಃ ॥ ೨೦೯

ತತ್ ಸ್ವಪ್ನವೃತ್ತನಿಭತೋ ನಭಸಶ್ಚ್ಯುತಾ ಯಾ
ಜ್ವಾಲಾ ತ್ವಯಾಂತರುದರಂ ವಿಶತೀಹ ದೃಷ್ಟಾ ।
ಸಾ ಕಾಪಿ ದೇವಿ ಸುರಜಾತಿರಸಂಶಯಂ ತೇ
ಗರ್ಭಂ ಕೃತೋऽಪಿ ಖಲು ಕರ್ಮವಶಾತ್ ಪ್ರಪನ್ನಾ ॥ ೨೧೦

೨೧. ಹೀಗೆ ತನ್ನ ಗಂಡನಾದ ಕಳಿಂಗದತ್ತರಾಜನಿಂದ ಕೇಳಿದ ಗರ್ಭಿಣಿಯಾದ ತಾರಾದತ್ತಾದೇವಿಯು ಪರಮ ಸಂತೋಷವನ್ನು ಹೊಂದಿದಳು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದಲ್ಲಿ 'ಮದನಮಂಚುಕಾ'ಲಂಬಕದ**

**ಮೊದಲನೆಯ ತರಂಗವು ಮುಗಿಯಿತು.**

---

ಇತಿ ನಿಜಭರ್ತುರ್ವದನಾತ್ ಶ್ರುತ್ವಾ ನೃಪತೇಃ ಕಲಿಂಗದತ್ತಸ್ಯ ।
ದೇವೀ ತಾರಾದತ್ತಾ ಪ್ರಾಪ ಸಗರ್ಭಾ ಪರಂ ಪ್ರಮುದಮ್ ॥ ೨೧

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**'ಮದನಮಂಚುಕಾ'ಲಂಬಕೇ ಪ್ರಥಮಸ್ತರಂಗಃ**

## ಎರಡನೆಯ ತರಂಗ

೧ ಅತ್ತ ತಕ್ಷಶಿಲೆಯಲ್ಲಿ ರಾಜನಾದ ಕಳಿಂಗದತ್ತನ ಪತ್ನಿಯಾದ ತಾರಾದತ್ತೆಯ ನಡಿಗೆಯು ಗರ್ಭದ ಭಾರದಿಂದ ನಿಧಾನವಾಯಿತು.

೨. ಪ್ರಸವ ಸಮಯವನ್ನು ಸಮೀಪಿಸಿದ ಅವಳ ಮುಖ ಬಿಳಿಚಿಕೊಂಡು ಕಣ್ಣುಗಳು ಆತಂಕದಿಂದ ಚಂಚಲವಾಗಿದ್ದುವು. ಇದರಿಂದ ಅವಳು ಉದಯಿಸುತ್ತಿರುವ ಚಂದ್ರಲೇಖೆಯುಳ್ಳ ಹೊಳೆಯುವ ನಕ್ಷತ್ರಗಳಿಂದ ಕೂಡಿದ ಪೂರ್ವದಿಕ್ಕಿನಂತೆ ಕಾಣುತ್ತಿದ್ದಳು.

೩. ಶೀಘ್ರದಲ್ಲಿ ಅವಳು ಸೃಷ್ಟಿಕರ್ತನ ಸರ್ವಸೌಂದರ್ಯಸೃಷ್ಟಿಯ ಅಂಶವೋ ಎಂಬಂತಿದ್ದ ಅಸಮಾನಳಾಗಿದ್ದ ಒಬ್ಬ ಹೆಣ್ಣು ಮಗುವನ್ನು ಹೆತ್ತಳು.

೪. ಇಂತಹ ಗಂಡುಮಗು ಏಕೆ ಹುಟ್ಟಲಿಲ್ಲ ಎಂದು ಮಂಕಾದುವೋ ಎಂಬಂತೆ ರಕ್ಷೆಗಾಗಿ ಇಟ್ಟಿದ್ದ ದೀಪಗಳು ಎಣ್ಣೆಯಿಂದ ತುಂಬಿದ್ದರೂ ಕೂಡ ಆ ಮಗುವಿನ ಕಾಂತಿಯ ಮುಂದೆ ಕಳಾಹೀನವಾಗಿದ್ದುವು.

೫ ಅಂತಹ ಮಗು ಹುಟ್ಟಿದರೂ ಆ ಹೆಣ್ಣು ಮಗುವನ್ನು ನೋಡಿ ತಂದೆಯಾದ ಕಳಿಂಗದತ್ತನು ಅದೇ ರೀತಿಯ ರೂಪದಿಂದ ಕೂಡಿದ ಗಂಡು ಮಗು ಬೇಕೆಂಬ ಆಸೆಯು ವಿಫಲವಾಗಿದ್ದಕ್ಕೆ ಕೊರಗಿದನು.

---

## ದ್ವಿತೀಯಸ್ತರಂಗಃ

ತತಃ ಕಲಿಂಗದತ್ತಸ್ಯ ರಾಜ್ಞೋ ಗರ್ಭಭರಾಲಸಾ ।
ರಾಜ್ಞೀ ತಕ್ಷಶಿಲಾಯಾಂ ಸಾ ತಾರಾದತ್ತಾ ಶನೈರಭೂತ್ ॥ ೧
ಉದೇಷ್ಯಚ್ಚಂದ್ರಲೇಖಾಂ ಚ ಪ್ರಾಚೀಮನುಚಕಾರ ಸಾ ।
ಆಸನ್ನಪ್ರಸವಾ ಪಾಂಡುಮುಖೀ ತರಲತಾರಕಾ ॥ ೨
ಜಜ್ಞೇ ಚ ತಸ್ಯಾ ನ ಚಿರಾದನನ್ಯಸದೃಶೀ ಸುತಾ ।
ವೇಧಸಃ ಸರ್ವಸೌಂದರ್ಯಸರ್ಗವರ್ಣಕಸಂನಿಭಾ ॥ ೩
ಈದೃಕ್ಪುತ್ರೋ ನ ಕಿಂ ಜಾತ ಇತೀವ ಸ್ನೇಹಶಾಲಿನಃ ।
ರಕ್ಷಾಪ್ರದೀಪಾಸ್ತತ್ಕಾಂತಿಜಿತಾ ವಿಚ್ಛಾಯತಾಂ ಯಯುಃ ॥ ೪
ಪಿತಾ ಕಲಿಂಗದತ್ತಶ್ಚ ಜಾತಾಂ ತಾಂ ತಾದೃಶೀಮಪಿ ।
ದೃಷ್ಟ್ವಾ ತದ್ರೂಪಪುತ್ರಾಶಾವೈಫಲ್ಯವಿಮನಾ ಅಭೂತ್ ॥ ೫

೬ ಆ ಹೆಣ್ಣು ಮಗುವು ದಿವ್ಯವಾದುದೆಂದು ಭಾವಿಸಿದ್ದರೂ ಪುತ್ರಾಪೇಕ್ಷಿಯಾಗಿದ್ದ ಅವನು ನೊಂದುಕೊಂಡನು. ದುಃಖದ ಗಂಟಾದ ಹೆಣ್ಣು ಮಗುವೆಲ್ಲಿ, ಆನಂದವೇ ಮೂರ್ತಿವೆತ್ತ ಗಂಡು ಮಗುವೆಲ್ಲಿ ?

೭ ಅನಂತರ ದುಃಖಿತನಾಗಿದ್ದ ಆ ರಾಜನು ಮನಸ್ಸಿನ ವಿನೋದಕ್ಕಾಗಿ ಅರಮನೆಯಿಂದ ಹೊರಟು ಅನೇಕ ಜಿನಮೂರ್ತಿಗಳಿರುವ ವಿಹಾರಕ್ಕೆ ಹೋದನು.

೮ ಅಲ್ಲಿ ಒಂದು ಸ್ಥಳದಲ್ಲಿ ಜನರ ಮಧ್ಯದಲ್ಲಿ ಕುಳಿತಾಗ ಧರ್ಮಪ್ರವಚನ ಮಾಡುತ್ತಿದ್ದ ಭಿಕ್ಷುವು ಹೇಳುತ್ತಿದ್ದ ಈ ಕೆಳಕಂಡ ಮಾತು ಅವನ ಕಿವಿಗೆ ಬಿದ್ದಿತು.

೯. ಸಂಸಾರದಲ್ಲಿ ಸಂಪತ್ತನ್ನು ದಾನಮಾಡುವುದೇ ದೊಡ್ಡತಪಸ್ಸು. ಸಂಪತ್ತಿನ ದಾನವು ಪ್ರಾಣದಾನ ಎಂದು ಹೇಳಲಾಗಿದೆ. ಪ್ರಾಣವು ಸಂಪತ್ತಿನಲ್ಲಿ ಬಂಧಿತವಾಗಿದೆ.

೧೦. ಕರುಣೆಯಿಂದ ವ್ಯಾಕುಲನಾದ ಬುದ್ಧನು ಬೇರೆಯವರಿಗಾಗಿ ಆತ್ಮವನ್ನೇ ಹುಲ್ಲುಕಡ್ಡಿಯಂತೆ ದಾನಮಾಡಿದನು. ಇನ್ನು ತುಚ್ಛವಾದ ಹಣವೇನು ಮಹಾ?

೧೧. ಅಂತಹ ಸ್ಥಿರವಾದ ತಪಸ್ಸಿನಿಂದ ಆಸೆಯನ್ನು ದೂರಮಾಡಿ ದಿವ್ಯಜ್ಞಾನವನ್ನು ಪಡೆದ ಬುದ್ಧನು ಬುದ್ಧತ್ವವನ್ನು ಪಡೆದನು.

೧೨. ಪ್ರಾಜ್ಞನು ಶರೀರವಿರುವತನಕ ಎಲ್ಲ ಆಸೆಗಳಿಂದಲೂ ದೂರನಾಗಿ ಸಮ್ಯಕ್ ಜ್ಞಾನವನ್ನು ಪಡೆಯುವುದಕ್ಕೋಸ್ಕರ ಪ್ರಾಣಿಗಳಿಗೆ ಹಿತವನ್ನುಂಟು ಮಾಡಬೇಕು.

---

ದಿವ್ಯಾಂ ತಾಮಪಿ ಸಂಭಾವ್ಯ ಸ ಪುತ್ರೇಚ್ಛುರದೂಯತ ।
ಶೋಕಕಂದಃ ಕ್ವ ಕನ್ಯಾ ಹಿ ಕ್ವಾನಂದಃ ಕಾಯವಾನ್ ಸುತಃ ॥ ೬
ತತಶ್ಚೇತೋವಿನೋದಾಯ ಖಿನ್ನೋ ನಿರ್ಗತ್ಯ ಮಂದಿರಾತ್ ।
ಯಯೌ ನಾನಾಜಿನಾಕಾರಂ ವಿಹಾರಂ ಸ ಮಹೀಪತಿಃ ॥ ೭
ತತ್ರೈಕದೇಶೇ ಶುಶ್ರಾವ ಧರ್ಮಪಾಠಕಭಿಕ್ಷುಣಾ ।
ಜನಮಧ್ಯೋಪವಿಷ್ಟೇನ ಕಥ್ಯಮಾನಮಿದಂ ವಚಃ ॥ ೮
ಅರ್ಥಪ್ರದಾನಮೇವಾಹುಃ ಸಂಸಾರೇ ಸುಮಹತ್ತಪಃ ।
ಅರ್ಥದಃ ಪ್ರಾಣದಃ ಪ್ರೋಕ್ತ ಪ್ರಾಣಾ ಹ್ಯರ್ಥೇಷು ಕೀಲಿತಾಃ ॥ ೯
ಬುದ್ಧೇನ ಚ ಪರಸ್ಯಾರ್ಥೇ ಕರುಣಾಕುಲಚೇತಸಾ ।
ಆತ್ಮಾಪಿ ತೃಣವದ್ದತ್ತಃ ಕಾ ವರಾಕೇ ಧನೇ ಕಥಾ ॥ ೧೦
ತಾದೃಶೇನ ಚ ಧೀರೇಣ ತಪಸಾ ಚ ಗತಸ್ಪೃಹಃ ।
ಸಂಪ್ರಾಪ್ತದಿವ್ಯವಿಜ್ಞಾನೋ ಬುದ್ಧೋ ಬುದ್ಧತ್ವಮಾಗತಃ ॥ ೧೧
ಆಶರೀರಮತಃ ಸರ್ವೇಷ್ವಿಷ್ಟೇಷ್ವಾಶಾನಿವರ್ತನಾತ್ ।
ಪ್ರಾಜ್ಞಃ ಸತ್ತ್ವಹಿತಂ ಕುರ್ಯಾತ್ ಸಮ್ಯಕ್ಸಂಬೋಧಲಬ್ಧಯೇ ॥ ೧೨

೧೩. ಹಿಂದೆ ಪ್ರಸಿದ್ಧನಾದ ಒಬ್ಬ ರಾಜನಿಗೆ ಅತ್ಯಂತ ಸುಂದರಿಯರಾದ ಏಳು ಜನ ಹೆಣ್ಣು ಮಕ್ಕಳು ಕ್ರಮವಾಗಿ ಹುಟ್ಟಿದರು.

೧೪. ಚಿಕ್ಕವಯಸ್ಸಿನಲ್ಲೇ ವಿರಕ್ತರಾದ ಅವರು ತಂದೆಯ ಮನೆಯನ್ನು ಬಿಟ್ಟು ಸ್ಮಶಾನಕ್ಕೆ ಹೋದರು. ಸೇವಕರು ಪ್ರಶ್ನಿಸಿದಾಗ ಹೀಗೆ ಹೇಳಿದರು.

೧೫. ""ಈ ವಿಶ್ವವೇ ಸಾರವಿಲ್ಲದ್ದು. ಅದರಲ್ಲೂ ಈ ಶರೀರ. ಅದರಲ್ಲೂ ಆಸೆಗಳಿಂದ ಕೂಡಿದ ಸುಖ ಮೊದಲಾದವು ಕನಸಿನ ಭ್ರಮೆ.

೧೬. ಸಂಸಾರದಲ್ಲಿ ಪರೋಪಕಾರವೊಂದೇ ಸಾರವುಳ್ಳದ್ದು ಎಂದು ಹೇಳಲಾಗುತ್ತದೆ. ಆದ್ದರಿಂದ ಈ ಶರೀರದಿಂದ ನಾವು ಪ್ರಾಣಿಗಳಿಗೆ ಹಿತವನ್ನುಂಟುಮಾಡೋಣ.

೧೭. ಪ್ರಾಣಸಹಿತವಾಗಿಯೇ ಈ ಶರೀರವನ್ನು ಸ್ಮಶಾನದಲ್ಲಿ ಮಾಂಸಾಹಾರಿ ಪ್ರಾಣಿಗಳ ಉಪಯೋಗಕ್ಕಾಗಿ ಬಿಟ್ಟುಬಿಡೋಣ. ಸುಂದರವಾದ ಈ ಶರೀರದಿಂದ ಏನು ಪ್ರಯೋಜನ ?

೧೮. ಹಿಂದೆ ಒಬ್ಬ ರಾಜಕುಮಾರನಿದ್ದನು. ಸುಂದರ ಯುವಕನಾಗಿದ್ದರೂ ವಿರಕ್ತನಾಗಿ ಸಂನ್ಯಾಸವನ್ನು ಆಶ್ರಯಿಸಿದನು.

೧೯. ಅವನು ಭಿಕ್ಷುವಾಗಿ ಒಮ್ಮೆ ಒಬ್ಬ ವ್ಯಾಪಾರಿಯ ಮನೆಗೆ ಹೋದನು. ಅಲ್ಲಿ ತರುಣಿಯಾದ ಅವನ ಪತ್ನಿಯು ಕಮಲದಳದಂತಹ ಕಣ್ಣುಳ್ಳ ಇವನನ್ನು ನೋಡಿದಳು.

---

ತಥಾ ಚ ಪೂರ್ವಂ ಕಸ್ಯಾಪಿ ಕೃತನಾಮ್ನೋ ಮಹೀಪತೇಃ ।
ಅಜಾಯಂತಾತಿಸುಭಗಾಃ ಕ್ರಮಾತ್ ಸಪ್ತ ಕುಮಾರಿಕಾಃ ॥ ೧೩
ಬಾಲಾ ಏವ ಚ ತಾಃ ತ್ಯಕ್ತ್ವಾ ವೈರಾಗ್ಯೇಣ ಪಿತುರ್ಗೃಹಮ್ ।
ಶ್ಮಶಾನಂ ಶಿಶ್ರಿಯುಃ ಪೃಷ್ಟಾ ಜಗದುಶ್ಚ ಪರಿಚ್ಛದಮ್ ॥ ೧೪
ಅಸಾರಂ ವಿಶ್ವಮೇವೈತತ್ ತತ್ರಾಪೀದಂ ಶರೀರಕಮ್ ।
ತತ್ರಾಪ್ಯಭೀಷ್ಟಸಂಯೋಗಸುಖಾದಿ ಸ್ವಪ್ನವಿಭ್ರಮಃ ॥ ೧೫
ಏಕಂ ಪರಹಿತಂ ತ್ವತ್ರ ಸಂಸಾರೇ ಸಾರಮುಚ್ಯತೇ ।
ತದನೇನಾಪಿ ದೇಹೇನ ಕುರ್ಮಃ ಸತ್ತ್ವಹಿತಂ ವಯಮ್ ॥ ೧೬
ಕ್ಷಿಪಾಮೋ ಜೀವದೇವೈತಚ್ಛರೀರಂ ಪಿತೃಕಾನನೇ ।
ಕ್ರವ್ಯಾದ್ಗಣೋಪಯೋಗಾಯ ಕಾಂತೇನಾಪಿ ಹ್ಯನೇನ ಕಿಮ್ ॥ ೧೭
ತಥಾ ಚ ರಾಜಪುತ್ರೋಽತ್ರ ವಿರಕ್ತಃ ಕೋಽಪ್ಯಭೂತ್ ಪುರಾ ।
ಸ ಯುವಾಪಿ ಸುಕಾಂತೋಽಪಿ ಪರಿವ್ರಜ್ಯಾಮಶಿಶ್ರಿಯತ್ ॥ ೧೮
ಸ ಜಾತು ಭಿಕ್ಷುಃ ಕಸ್ಯಾಪಿ ಪ್ರವಿಷ್ಟೋ ವಣಿಜೋ ಗೃಹಮ್ ।
ದೃಷ್ಟಸ್ತರುಣ್ಯಾ ತತ್ಪತ್ನ್ಯಾ ಪದ್ಮಪತ್ರಾಯತೇಕ್ಷಣಃ ॥ ೧೯

೨೦. ಅವನ ಸುಂದರವಾದ ಕಣ್ಣುಗಳಿಂದ ಆಕರ್ಷಿತಳಾದ ಅವಳು ಅವನಿಗೆ ಹೇಳಿದಳು: '"ನೀನು ಇಂತಹ ಕ್ಲಿಷ್ಟವಾದ ವ್ರತವನ್ನು ಏಕೆ ಕೈಗೊಂಡಿರುವಿ ?

೨೧. ಯಾವಳು ನಿನ್ನ ಈ ಕಣ್ಣಿಗೆ ಬೀಳುತ್ತಾಳೋ ಅವಳೇ ಪುಣ್ಯಮಾಡಿದವಳು" ಎಂದು ಅವಳ ಹೇಳಿದಾಗ ಆ ಭಿಕ್ಷುವು ತನ್ನ ಒಂದು ಕಣ್ಣನ್ನು ಕಿತ್ತನು.

೨೨. ಅದನ್ನು ಕೈಯಲ್ಲಿ ಹಿಡಿದುಕೊಂಡು ಅವಳಿಗೆ ಹೇಳಿದನು : '"ತಾಯಿ, ರಕ್ತ ಮಾಂಸದಿಂದ ಕೂಡಿ ಅಸಹ್ಯವಾಗಿರುವ ಈ ಕಣ್ಣನ್ನು ನೋಡು. ಇಷ್ಟವಾದರೆ ತೆಗೆದುಕೊ.

೨೩. ಇದೇ ರೀತಿಯಲ್ಲಿ ಸುಂದರವಾದ ಎರಡನೇ ಕಣ್ಣೂ ಕೂಡ. ಇವುಗಳಿಂದ ಏನು ಪ್ರಯೋಜನ ?" ಹೀಗೆಂದು ಅವನು ಹೇಳಿದಾಗ ವ್ಯಾಪಾರಿಯ ಪತ್ನಿಯು ಕಣ್ಣುಗಳನ್ನು ನೋಡಿ ವಿಷಾದಿಸಿದಳು.

೨೪. ಮತ್ತೆ ಹೀಗೆಂದಳು: '"ಅಯ್ಯಯ್ಯೋ, ಪಾಪಿಯಾದ ನಾನು ಪಾಪಕಾರ್ಯವನ್ನು ಮಾಡಿದೆನಲ್ಲಾ. ನೀನು ಕಣ್ಣುಗಳನ್ನು ಕಿತ್ತುಹಾಕಲು ನಾನೇ ಕಾರಣಳಾದೆನಲ್ಲಾ".

೨೫. ಅದನ್ನು ಕೇಳಿ ಭಿಕ್ಷುವು ಹೇಳಿದನು : '"ತಾಯಿ, ದುಃಖಿಸಬೇಡ. ನನಗೆ ನಿನ್ನಿಂದ ಉಪಕಾರವೇ ಆಯಿತು. ಏಕೆಂದರೆ ಈ ನಿದರ್ಶನವನ್ನು ಕೇಳು:

---

ಸಾ ತಲ್ಲೋಚನಲಾವಣ್ಯಹೃತಚಿತ್ತಾ ತಮಬ್ರವೀತ್ ।
ಕಥಮಾತ್ತಮಿದಂ ಕಷ್ಟಮೀದೃಶೇನ ತ್ವಯಾ ವ್ರತಮ್ ॥ ೨೦
ಸಾ ಧನ್ಯಾ ಸ್ತ್ರೀ ತವಾನೇನ ಚಕ್ಷುಷಾ ಯಾ ನಿರೀಕ್ಷ್ಯತೇ ।
ಇತ್ಯುಕ್ತಃ ಸ ತಯಾ ಭಿಕ್ಷುಃ ಚಕ್ಷುರೇಕಮುಪಾಟಯತ್ ॥ ೨೧
ಊಚೇ ಚ ಹಸ್ತೇ ಕೃತ್ವಾ ತನ್ಮಾತಃ ಪಶ್ಯೇದಮೀದೃಶಮ್ ।
ಜುಗುಪ್ಸಿತಮಸೃಙ್ಮಾಂಸಂ ಗೃಹ್ಯತಾಂ ಯದಿ ರೋಚತೇ ॥ ೨೨
ಈದೃಗೇವ ದ್ವಿತೀಯಂ ಚ ವದ ರಮ್ಯಂ ಕಿಮೇತಯೋಃ ।
ಇತ್ಯುಕ್ತಾ ತೇನ ತದ್ ದೃಷ್ಟ್ವಾ ವ್ಯಷೀದತ್ಸಾ ವಣಿಗ್ವಧೂಃ ॥ ೨೩
ಉವಾಚ ಚ ಹಹಾ ಪಾಪಂ ಮಯಾ ಕೃತಮಭವ್ಯಯಾ ।
ಯದಹಂ ಹೇತುತಾಂ ಪ್ರಾಪ್ತಾ ಲೋಚನೋತ್ಪಾಟನೇ ತವ ॥ ೨೪
ತಚ್ಛ್ರುತ್ವಾ ಭಿಕ್ಷುರವದನ್ಮಾ ಭೂದಂಬ ತವ ವ್ಯಥಾ ।
ಮಮ ತ್ವಯಾ ಹ್ಯುಪಕೃತಂ ಯತಃ ಶೃಣು ನಿದರ್ಶನಮ್ ॥ ೨೫

೨೬-೨೭ ಹಿಂದೆ ಗಂಗಾತೀರದ ಯಾವುದೋ ಒಂದು ರಮ್ಯವಾದ ಉದ್ಯಾನದಲ್ಲಿ ಒಬ್ಬ ಯತಿಯು ಇದ್ದನು. ವೈರಾಗ್ಯವನ್ನು ಸಂಪೂರ್ಣವಾಗಿ ಒರೆಹಚ್ಚಲು ಬಯಸಿ ತಪಸ್ಸು ಮಾಡುತ್ತಿದ್ದನು. ಯಾವನೋ ಒಬ್ಬ ರಾಜನು ವಿಹಾರಾರ್ಥವಾಗಿ ತನ್ನ ಅಂತಃಪುರದ ಸ್ತ್ರೀಯರೊಡನೆ ಅಲ್ಲಿಗೇ ಬಂದನು.

೨೮. ಚೆನ್ನಾಗಿ ಸುತ್ತಾಡಿ ಮದ್ಯಪಾನಮಾಡಿ ನಿದ್ರಿಸುತ್ತಿದ್ದ ಆ ರಾಜನ ಪಕ್ಕದಿಂದ ಮೇಲೆದ್ದು ಚಪಲತೆಯಿಂದ ಆ ಸ್ತ್ರೀಯರು ಉದ್ಯಾನದಲ್ಲಿ ಸುತ್ತಾಡಿದರು.

೨೯. ಒಂದು ಕಡೆ ಸಮಾಧಿಸ್ಥಿತಿಯಲ್ಲಿದ್ದ ಮುನಿಯನ್ನು ನೋಡಿ ಇದೇನು ಎಂಬ ಕುತೂಹಲದಿಂದ ಅವನ ಸುತ್ತಲೂ ನೆರೆದರು.

೩೦. ಅವರು ಬಹಳ ಹೊತ್ತು ಅಲ್ಲೇ ಇದ್ದಾಗ ಎಚ್ಚರಗೊಂಡ ರಾಜನು ತನ್ನ ಪಕ್ಕದಲ್ಲಿ ಪತ್ನಿಯರು ಇಲ್ಲದ್ದನ್ನು ಗಮನಿಸಿ ಎಲ್ಲ ಕಡೆಯಲ್ಲೂ ಹುಡುಕಿದನು.

೩೧. ತನ್ನ ಪತ್ನಿಯರು ಮುನಿಯ ಸುತ್ತಲೂ ನೆರೆದಿರುವುದನ್ನು ಕಂಡನು. ಕೋಪಗೊಂಡು ಅಸೂಯೆಯಿಂದ ಆ ಮುನಿಯನ್ನು ಖಡ್ಗದಿಂದ ಹೊಡೆದನು.

೩೨. ಐಶ್ವರ್ಯ, ಅಸೂಯೆ, ನಿಷ್ಕರುಣತೆ, ಪಾನಮತ್ತತೆ ಮತ್ತು ಅವಿವೇಕ–ಒಂದೊಂದೂ ಏನು ತಾನೆ ಮಾಡುವುದಿಲ್ಲ ? ಈ ಐದೂ ಒಟ್ಟಾಗಿದ್ದರೆ ಹೇಳುವುದೇನು ?

---

ಆಸೀತ್ಕೋಽಪಿ ಪುರಾ ಕಾಂತೇ ಕುತ್ರಾಪ್ಯುಪವನೇ ಯತಿಃ ।
ಅನುಜಾಹ್ನವಿ ವೈರಾಗ್ಯನಿಃಶೇಷನಿಕಷೇಚ್ಛಯಾ ॥ ೨೬
ತಪಸ್ಯತಶ್ಚ ಕೋಽಪ್ಯಸ್ಯ ರಾಜಾ ತತ್ರೈವ ದೈವತಃ ।
ವಿಹರ್ತುಮಾಗತಃ ಸಾಕಮವರೋಧವಧೂಜನೈಃ ॥ ೨೭
ವಿಹೃತ್ಯ ಪಾನಸುಪ್ತಸ್ಯ ಪಾರ್ಶ್ವಾದುತ್ಥಾಯ ತಸ್ಯ ಚ ।
ನೃಪಸ್ಯ ಚಾಪಲಾದ್ರಾಜ್ಞ್ಯಃ ತದುದ್ಯಾನೇ ಕಿಲಾಭ್ರಮನ್ ॥ ೨೮
ದೃಷ್ಟ್ವಾ ತತ್ರೈಕದೇಶೇ ಚ ತಂ ಸಮಾಧಿಸ್ಥಿತಂ ಮುನಿಮ್ ।
ಅತಿಷ್ಠನ್ ಪರಿವಾರ್ಯೈನಂ ಕಿಮೇತದಿತಿ ಕೌತುಕಾತ್ ॥ ೨೯
ಚಿರಸ್ಥಿತಾಸು ತಾಸ್ವತ್ರ ಪ್ರಬುದ್ಧಃ ಸೋಽಥ ಭೂಪತಿಃ ।
ಅಪಶ್ಯನ್ ದಯಿತಾಃ ಪಾರ್ಶ್ವೇ ತತ್ರ ಬಭ್ರಾಮ ಸರ್ವತಃ ॥ ೩೦
ದದರ್ಶ ಚಾತ್ರ ರಾಜ್ಞೀಸ್ತಾಃ ಪರಿವಾರ್ಯ ಮುನಿಂ ಸ್ಥಿತಾಃ ।
ಕುಪಿತಶ್ಚೇರ್ಷ್ಯಯಾ ತಸ್ಮಿನ್ ಖಡ್ಗೇನ ಪ್ರಾಹರನ್ಮುನೌ ॥ ೩೧
ಐಶ್ವರ್ಯಮೀರ್ಷ್ಯಾ ನೈರ್ಘೃಣ್ಯಂ ಕ್ಷೀಬತ್ವಂ ನಿರ್ವಿವೇಕಿತಾ ।
ಏಕೈಕಂ ಕಿಂ ನ ಯತ್ಕುರ್ಯಾತ್ ಪಂಚಾಂಗಿತ್ವೇ ತು ಕಾ ಕಥಾ ॥ ೩೨

೩೩. ಆ ರಾಜನು ಹೊರಟುಹೋದ ಮೇಲೆ ಅಂಗಾಂಗಳೆಲ್ಲ ಕತ್ತರಿಸಿದ್ದರೂ ಕೋಪಿಸಿಕೊಳ್ಳದ ಆ ಮುನಿಯನ್ನು ನೋಡಿ ಒಬ್ಬ ದೇವತೆಯು ಪ್ರತ್ಯಕ್ಷಳಾಗಿ ಹೇಳಿದಳು.

೩೪. "ಎಲೈಮಹಾತ್ಮನೆ, ಯಾವ ದುಷ್ಟನು ನಿನ್ನ ಮೇಲೆ ಕೋಪದಿಂದ ಈ ಅಕಾರ್ಯವನ್ನು ಮಾಡಿದನೋ ಅವನನ್ನು ನೀನು ಸಮ್ಮತಿಸಿದರೆ, ನಾನು ಕೊಲ್ಲುತ್ತೇನೆ.

೩೫. ಅದನ್ನು ಕೇಳಿ ಆ ಋಷಿಯು ಹೇಳಿದನು : ""ದೇವಿ, ಹಾಗೆ ಮಾಡಬೇಡ, ಆ ರಾಜನು ನನ್ನ ಧರ್ಮಕಾರ್ಯದಲ್ಲಿ ಸಹಾಯವನ್ನೇ ಮಾಡಿದ್ದಾನೆ ಅಪ್ರಿಯವಾದುದನ್ನು ಮಾಡಿಲ್ಲ.

೩೬. ಅವನ ಕೃಪೆಯಿಂದ ನಾನು ಸಹನೆಯನ್ನು ಪಡೆದುಕೊಂಡೆ. ಅವನು ಹೀಗೆ ಮಾಡದಿದ್ದರೆ ನಾನು ಯಾರನ್ನು ತಾನೇ ಕ್ಷಮಿಸುತ್ತಿದ್ದೆ ?

೩೭. ಮನಸ್ಸನ್ನು ನಿಗ್ರಹಿಸಿದವನಿಗೆ ಈ ನಶ್ವರವಾದ ಶರೀರಕ್ಕೋಸ್ಕರ ಕೋಪವೇಕೆ ? ಪ್ರಿಯ ಮತ್ತು ಅಪ್ರಿಯಗಳೆರಡರಲ್ಲೂ ಸಮನಾಗಿ ಕ್ಷಮೆಯಿಂದಿರುವುದೇ ಬ್ರಹ್ಮಪದ."

೩೮. ಹೀಗೆ ಆ ಮುನಿಯು ಹೇಳಿದಾಗ ದೇವತೆಯು ಸಂತೋಷಗೊಂಡು ಅವನ ದೇಹದಲ್ಲಿ ಗಾಯಗಳಿಲ್ಲದಂತೆ ಮಾಡಿ ಅದೃಶ್ಯಳಾದಳು.

೩೯. ತಾಯಿಯೇ, ಆ ರಾಜನು ಆ ಋಷಿಗೆ ಹೇಗೆ ಉಪಕಾರ ಮಾಡಿದನೋ ಹಾಗೆಯೇ, ಕಣ್ಣನ್ನು ಕೀಳಲು ಕಾರಣವಾಗಿ ತಪೋವೃದ್ಧಿಯಾಗುವಂತೆ ಮಾಡಿ ಉಪಕರಿಸಿರುವೆ."

---

ತತೋ ಗತೇ ನೃಪೇ ತಸ್ಮಿನ್ ಕೃತ್ತಾಂಗಮಪಿ ತಂ ಮುನಿಮ್ ।
ಅಕ್ರುದ್ಧಂ ಪ್ರಕಟೀಭೂಯ ಕಾಪ್ಯುವಾಚಾತ್ರ ದೇವತಾ ॥ ೩೩
ಮಹಾತ್ಮನ್ ಯೇನ ಪಾಪೇನ ಕ್ರೋಧೇನೈತತ್ ಕೃತಂ ತ್ವಯಿ ।
ಸ್ವಶಕ್ತ್ಯಾ ತಮಹಂ ಹನ್ಮಿ ಮನ್ಯತೇ ಯದಿ ತದ್ಭವಾನ್ ॥ ೩೪
ತತ್ ಶ್ರುತ್ವಾ ಸ ಜಗಾದರ್ಷಿರ್ದೇವಿ ಮಾ ಸ್ಮೈವಮಾದಿಶಃ ।
ಸ ಹಿ ಧರ್ಮಸಹಾಯೋ ಮೇ ನ ವಿಪ್ರಿಯಕರಃ ಪುನಃ ॥ ೩೫
ತತ್ಪ್ರಸಾದಾತ್ ಕ್ಷಮಾಧರ್ಮಂ ಭಗವತ್ಯಾಪ್ತವಾನಹಮ್ ।
ಕಸ್ಯ ಕ್ಷಮೇಯ ಕಿಂ ದೇವಿ ನೈವಂ ಚೇತ್ಸ ಸಮಾಚರೇತ್ ॥ ೩೬
ಕಃ ಕೋಪೋ ನಶ್ವರಸ್ಯಾಸ್ಯ ದೇಹಸ್ಯಾರ್ಥೇ ಮನಸ್ವಿನಃ ।
ಪ್ರಿಯಾಪ್ರಿಯೇಷು ಸಾಮ್ಯೇನ ಕ್ಷಮಾ ಹಿ ಬ್ರಹ್ಮಣಃ ಪದಮ್ ॥ ೩೭
ಇತ್ಯುಕ್ತಾ ಮುನಿನಾ ಸಾಥ ತಪಸಾ ತಸ್ಯ ತೋಷಿತಾ ।
ಅಂಗಾನಿ ದೇವತಾ ಕೃತ್ವಾ ನಿರ್ವ್ರಣಾನಿ ತಿರೋದಧೇ ॥ ೩೮
ತದ್ಯಥಾ ಸೋಽಪಿ ತಸ್ಯರ್ಷೇರುಪಕಾರೀ ಮತೋ ನೃಪಃ ।
ನೇತ್ರೋತ್ಖನನಹೇತೋಸ್ತ್ವಂ ತಪೋವೃದ್ಧ್ಯಾ ತಥಾಂಬ ಮೇ ॥ ೩೯

೪೦. ಆ ಇಂದ್ರಿಯ ನಿಗ್ರಹವುಳ್ಳ ಭಿಕ್ಷುವು ವಿನಯವಂತಳಾದ ಆ ವ್ಯಾಪಾರಿ ಪತ್ನಿಗೆ ಹೀಗೆ ಹೇಳಿ ತನ್ನ ಸುಂದರವಾದ ದೇಹದಲ್ಲಿ ವೈರಾಗ್ಯಹೊಂದಿ ತಪಸ್ಸು ಮಾಡಲು ಹೊರಟನು.

೪೧. ಆದ್ದರಿಂದ ಎಳೆಯದೂ ಮನೋಹರವೂ ಆದರೂ ಈ ದೇಹದಲ್ಲಿ ಆಸಕ್ತಿ ಏಕೆ ? ಪ್ರಾಜ್ಞನಾದವನಿಗೆ ಪ್ರಾಣಿಗಳಿಗೆ ಮಾಡುವ ಉಪಕಾರವೇ ಈ ದೇಹಕ್ಕಿಂತ ಪ್ರಶಸ್ತವಾದುದು.

೪೨. ಆದ್ದರಿಂದ ನಾವು (ಏಳುಜನ ರಾಜಕುಮಾರಿಯರು) ಪ್ರಾಕೃತಿಕ ಸುಖದ ನೆಲೆಯಾದ ಈ ಸ್ಮಶಾನದಲ್ಲಿ ಪ್ರಾಣಿಗಳ ಹಿತಕ್ಕಾಗಿಯೇ ಶರೀರವನ್ನು ಇಡುತ್ತೇವೆ.”

೪೩ ಹೀಗೆ ಪರಿಜನರಿಗೆ ಹೇಳಿದ ಆ ರಾಜಕುಮಾರಿಯರು ಹಾಗೆಯೇ ಮಾಡಿದರು ಮತ್ತು ಪರಮ ಸಿದ್ಧಿಯನ್ನು ಪಡೆದರು.

೪೪. ಹೀಗೆ ಪ್ರಾಜ್ಞರಿಗೆ ತಮ್ಮ ಶರೀರದಲ್ಲೇ ಮಮಕಾರವು ಇಲ್ಲದ ಮೇಲೆ ಹೆಂಡತಿ ಮಕ್ಕಳು ಮೊದಲಾದವರೆಲ್ಲ ತೃಣಕ್ಕೆ ಸಮಾನ.

೪೫ ಇತ್ಯಾದಿಯಾಗಿ ಬೌದ್ಧ ವಿಹಾರದಲ್ಲಿ ಧರ್ಮಪಾಠವನ್ನು ಮಾಡುತ್ತಿದ್ದವನಿಂದ ಕೇಳಿ ರಾಜಕಳಿಂಗದತ್ತನು ಹಗಲನ್ನು ಅಲ್ಲೇ ಕಳೆದು ತನ್ನ ಅರಮನೆಗೆ ಬಂದನು.

೪೬ ಅಲ್ಲಿ ಹೆಣ್ಣು ಹುಟ್ಟಿದ ದುಃಖದಿಂದ ಮತ್ತೆ ಪೀಡಿತನಾದ ರಾಜನಿಗೆ ಅರಮನೆಯಲ್ಲೇ ಇದ್ದ ಒಬ್ಬ ವೃದ್ಧ ಬ್ರಾಹ್ಮಣನು ಹೇಳಿದನು.

---

ಇತ್ಯುಕ್ತ್ವಾ ಸ ವಶೀ ಭಿಕ್ಷುರ್ವಿನಮ್ರಾಂ ತಾಂ ವಣಿಗ್ವಧೂಮ್ ।
ಕಾಂತೇಽಪಿ ವಪುಷಿ ಸ್ವಸ್ಮಿನ್ನನಾಸ್ಥಃ ಸಿದ್ಧಯೇ ಯಯೌ ॥ ೪೦
ತಸ್ಮಾದ್ಬಾಲೇಽಪಿ ರಮ್ಯೇಽಪಿ ಕಃ ಕಾಯೇ ಗತ್ವರೇ ಗ್ರಹಃ ।
ಸತ್ತ್ವೋಪಕಾರಸ್ತ್ವೇತಸ್ಮಾದೇಕಃ ಪ್ರಾಜ್ಞಸ್ಯ ಶಸ್ಯತೇ ॥ ೪೧
ತದಿಮಾ ವಯಮೇತಸ್ಮಿನ್ನಿಸರ್ಗಸುಖಸದ್ಮನಿ ।
ಶ್ಮಶಾನೇ ಪ್ರಾಣಿನಾಮರ್ಥೇ ವಿನ್ಯಸ್ಯಾಮ ಶರೀರಕಮ್ ॥ ೪೨
ಇತ್ಯುಕ್ತ್ವಾ ಪರಿವಾರಂ ತಾಃ ಸಪ್ತ ರಾಜಕುಮಾರಿಕಾಃ ।
ತಥೈವ ಚಕ್ರುಃ ಪ್ರಾಪುಶ್ಚ ಸಂಸಿದ್ಧಿಂ ಪರಮಾಂ ತತಃ ॥ ೪೩
ಏವಂ ನಿಜೇ ಶರೀರೇಽಪಿ ಮಮತ್ವಂ ನಾಸ್ತಿ ಧೀಮತಾಮ್ ।
ಕಿಂ ಪುನಃ ಸುತದಾರಾದಿಪರಿಗ್ರಹತೃಣೋತ್ಕರೇ ॥ ೪೪
ಇತ್ಯಾದಿ ಸ ನೃಪಃ ಶ್ರುತ್ವಾ ವಿಹಾರೇ ಧರ್ಮಪಾಠಕಾತ್ ।
ಕಲಿಂಗದತ್ತೋ ನೀತ್ವಾ ಚ ದಿನಂ ಪ್ರಾಯಾತ್ ಸ್ವಮಂದಿರಮ್ ॥ ೪೫
ತತ್ರಾನುಬಧ್ಯಮಾನಶ್ಚ ಕನ್ಯಾಜನ್ಮಶುಚಾ ಪುನಃ ।
ಸ ರಾಜಾ ಗೃಹವೃದ್ಧೇನ ಕೇನಾಪ್ಯೂಚೇ ದ್ವಿಜನ್ಮನಾ ॥ ೪೬

೪೭. "ಎಲೈ ರಾಜನೆ, ಹೆಣ್ಣು ಮಗು ಹುಟ್ಟಿದ್ದಕ್ಕೆ ಪರಿತಾಪವೇಕೆ ? ಹೆಣ್ಣು ಮಕ್ಕಳು ಗಂಡು ಮಕ್ಕಳಿಗಿಂತ ಉತ್ತಮರು ಮತ್ತು ಇಹಕ್ಕೂ ಪರಕ್ಕೂ ಒಳ್ಳೆಯದನ್ನು ಮಾಡುವವರು.

೪೮. ಮರ್ಕಟಕಗಳಂತೆ (ಮೀನು) ತಂದೆಯನ್ನು ತಿನ್ನುವಂತಹ ರಾಜ್ಯಲೋಭಿಗಳಾದ ಮಕ್ಕಳಲ್ಲಿ ರಾಜನಿಗೆ ಅಪೇಕ್ಷೆಯಾದರೂ ಏಕೆ ?

೪೯. ಕುಂತಿಭೋಜ ಮೊದಲಾದ ರಾಜರು ಕುಂತೀ ಮೊದಲಾದ ಹೆಣ್ಣುಮಕ್ಕಳ ಗುಣಗಳಿಂದಲೇ ಅಸಹನೀಯರಾದ ದುರ್ವಾಸ ಮೊದಲಾದವರಿಂದ ಉಂಟಾಗಲಿದ್ದ ಪರಾಭವವನ್ನು ತಡೆದರು.

೫೦. ಕನ್ಯಾದಾನದಿಂದ ಪರಲೋಕದಲ್ಲಿ ಲಭಿಸುವ ಫಲವು ಪುತ್ರನಿಂದ ಎಲ್ಲಿ ಬಂದೀತು ? ಈ ವಿಷಯದಲ್ಲಿ ಸುಲೋಚನೆಯ ಕಥೆಯನ್ನು ಹೇಳುತ್ತೇನೆ ಕೇಳು.

೫೧. ಚಿತ್ರಕೂಟ ಪರ್ವತದಲ್ಲಿ ಸುಷೇಣ ಎಂಬ ತರುಣ ರಾಜನಿದ್ದನು. ಪರಶಿವನ ಮೇಲಿನ ಅಸೂಯೆಯಿಂದ ಬ್ರಹ್ಮನು ಅವನನ್ನು ಮತ್ತೊಬ್ಬ ಮನ್ಮಥನೋ ಎಂಬಂತೆ ಸೃಷ್ಟಿಸಿದ್ದನು.

೫೨. ಅವನು (ಸುಷೇಣನು) ಆ ಪರ್ವತದ ಬುಡದಲ್ಲಿ ದೇವತೆಗಳಿಗೆ ನಂದನೋದ್ಯಾನದ ವಾಸದಲ್ಲಿ ಅರುಚಿಯನ್ನುಂಟು ಮಾಡುವಂತಹ ದಿವ್ಯವಾದ ಒಂದು ಉದ್ಯಾನವನ್ನು ನಿರ್ಮಿಸಿದನು.

---

ರಾಜನ್ ಕಿಂ ಕನ್ಯಕಾರತ್ನಜನ್ಮನಾ ಪರಿತಪ್ಯಸೇ ।
ಪುತ್ರೇಭ್ಯೋಽಪ್ಯುತ್ತಮಾಃ ಕನ್ಯಾಃ ಶಿವಾಶ್ಚೇಹ ಪರತ್ರಚ ॥ ೪೭
ರಾಜ್ಯಲುಬ್ಧೇಷು ಕಾ ತೇಷು ಪುತ್ರೇಷ್ವಾಸ್ಥಾ ಮಹೀಭುಜಾಮ್ ।
ಯೇ ಭಕ್ಷಯಂತಿ ಜನಕಂ ಬತ ಮರ್ಕಟಕಾ ಇವ ॥ ೪೮
ನೃಪಾಸ್ತು ಕುಂತಿಭೋಜಾದ್ಯಾಃ ಕುಂತ್ಯಾದಿತನಯಾಗುಣೈಃ ।
ತೀರ್ಣಾ ದುಃಸಹದುರ್ವಾಸಃ ಪ್ರಭೃತಿಭ್ಯಃ ಪರಾಭವಮ್ ॥ ೪೯
ಫಲಂ ಯಚ್ಚ ಸುತಾದಾನಾತ್ ಕುತಃ ಪುತ್ರಾತ್ ಪರತ್ರ ತತ್ ।
ಸುಲೋಚನಾಕಥಾಮತ್ರ ಕಿಂಚ ವಚ್ಮಿ ನಿಶಮ್ಯತಾಮ್ ॥ ೫೦
ಆಸೀದ್ರಾಜಾ ಸುಷೇಣಾಖ್ಯಶ್ಚಿತ್ರಕೂಟಾಚಲೇ ಯುವಾ ।
ಕಾಮೋಽನ್ಯ ಇವ ಯೋ ಧಾತ್ರಾ ನಿರ್ಮಿತಸ್ತ್ರ್ಯಂಬಕೇರ್ಷ್ಯಯಾ ॥ ೫೧
ಸ ಚಕ್ರೇ ದಿವ್ಯಮಾರಾಮಂ ಮೂಲೇ ತಸ್ಯ ಮಹಾಗಿರೇಃ ।
ಸುರಾಣಾಂ ನಂದನೋದ್ಯಾನವಾಸವೈರಸ್ಯದಾಯಿನಮ್ ॥ ೫೨

೨೩. ಅದರ ಮಧ್ಯದಲ್ಲಿ ಲಕ್ಷ್ಮಿಯ ಕ್ರೀಡಾಕಮಲಗಳ ಹೊಸ ಆಕರಪ್ರದೇಶದಂತಿರುವ ಅರಳಿದ ಕಮಲಗಳಿಂದ ಕೂಡಿದ ಒಂದು ಸರೋವರವನ್ನು ನಿರ್ಮಿಸಿದನು.

೨೪. ಅಮೂಲ್ಯವಾದ ರತ್ನಖಚಿತ ಮೆಟ್ಟಿಲುಗಳುಳ್ಳ ಆ ಸರೋವರದ ದಡದಲ್ಲಿ ರಾಜನು ತನಗೆ ಅನುರೂಪರಾದ ಪತ್ನಿಯರು ಇಲ್ಲವಾದ್ದರಿಂದ ಸ್ತ್ರೀ ಸಹವಾಸ ಇಲ್ಲದವನಾಗಿ ಕುಳಿತಿದ್ದನು.

೨೫. ಒಮ್ಮೆ ಸುರಸುಂದರಿಯಾದ ರಂಭೆಯು ಆಕಸ್ಮಿಕವಾಗಿ ಇಂದ್ರನ ಮನೆಯಿಂದ ಆಕಾಶಮಾರ್ಗದಲ್ಲಿ ಅದೇ ಮಾರ್ಗದಲ್ಲಿ ಬಂದಳು.

೨೬. ಅರಳಿದ ಹೂವುಗಳ ಮಧ್ಯದಲ್ಲಿರುವ ದುಂಬಿಯಂತೆ ಆ ಉದ್ಯಾನದಲ್ಲಿ ವಿಹರಿಸುತ್ತಿದ್ದ ಆ ರಾಜನನ್ನು ಅವಳು ನೋಡಿದಳು.

೨೭. "ಇವನು ಸರೋವರದ ಕಮಲಗಳ ಸೌಂದರ್ಯಲಕ್ಷ್ಮಿಯನ್ನು ಹಿಂಬಾಲಿಸಿ ಸ್ವರ್ಗದಿಂದ ಇಳಿದು ಬಂದ ಚಂದ್ರನೋ ? ಇರಲಾರದು. ಇವನ ಸೌಂದರ್ಯವು ಅಕಳಂಕವಾಗಿದೆ. (ಚಂದ್ರನಲ್ಲಿ ಕಳಂಕವಿದೆ.)

೨೮. ನಿಶ್ಚಿತವಾಗಿಯೂ ಪುಷ್ಪಬಾಣನಾದ ಮನ್ಮಥನೇ ಬಂದಿರಬೇಕು. ಆದರೆ ಇವನ ಸಹಚಾರಿಣಿಯಾದ ರತಿಯು ಎಲ್ಲಿಗೆ ಹೋದಳು ?'

೨೯. ಹೀಗೆ ಕುತೂಹಲದಿಂದ ಚಿಂತಿಸಿದ ಆ ರಂಭೆಯು ಆಕಾಶದಿಂದ ಮಾನವ ರೂಪದಲ್ಲಿಳಿದು ರಾಜನ ಹತ್ತಿರಕ್ಕೆ ಬಂದಳು.

---

ತನ್ಮಧ್ಯೇ ಚ ಚಕಾರೈಕಾಂ ವಾಪೀಮುತ್ಫುಲ್ಲಪಂಕಜಾಮ್ ।
ಲಕ್ಷ್ಮೀಲೀಲಾರವಿಂದಾನಾಂ ನವಾಕರಮಹೀಮಿವ ॥ ೨೩
ತಸ್ಯಾಸ್ತಸ್ಥೌ ಸ ಸದ್ರತ್ನಸೋಪಾನಾಯಾಸ್ತಟೇ ಸದಾ ।
ಪತ್ನೀನಾಂ ಸ್ವಾನುರೂಪಾಣಾಮಭಾವಾದವಧೂಸಖಃ ॥ ೨೪
ಏಕದಾ ತೇನ ಮಾರ್ಗೇಣ ನಭಸಾ ಸುರಸುಂದರೀ ।
ರಂಭಾ ಜಂಭಾರಿಭವನಾದಾಜಗಾಮ ಯದೃಚ್ಛಯಾ ॥ ೨೫
ಸಾ ತಂ ದದರ್ಶ ರಾಜಾನಂ ತತ್ರೋದ್ಯಾನೇ ವಿಹಾರಿಣಮ್ ।
ಸಾಕ್ಷಾನ್ಮಧುಮಿವೋತ್ಫುಲ್ಲಪುಷ್ಪಕಾನನಮಧ್ಯಗಮ್ ॥ ೨೬
ವಾಪಿಕಾಪದ್ಮಪತಿತಾಂ ದಿವೋಽನುಪತಿತಃಶ್ರಿಯಮ್ ।
ಚಂದ್ರಃ ಕಿಮೇಷ ನೈತದ್ವಾ ಶ್ರೀರಸ್ಯ ಹ್ಯನಪಾಯಿನೀ ॥ ೨೭
ನೂನಂ ಪುಷ್ಪೇಷುರುದ್ಯಾನಂ ಪುಷ್ಪೇಚ್ಛುಃ ಸೋಽಯಮಾಗತಃ ।
ಕಿಂತು ಸಾ ರತಿರೇತಸ್ಯ ಕ್ವ ಗತಾ ಸಹಚಾರಿಣೀ ॥ ೨೮
ಇತ್ಯೌತ್ಸುಕ್ಯಕೃತೋಲ್ಲೇಖಾ ಸಾವತೀರ್ಯ ನಭೋಂತರಾತ್ ।
ರಂಭಾ ಮಾನುಷರೂಪೇಣ ರಾಜಾನಂ ತಮುಪಾಗಮತ್ ॥ ೨೯

೬೦. ಹತ್ತಿರಕ್ಕೆ ಬಂದ ಅವಳನ್ನು ನೋಡಿ ಆಶ್ಚರ್ಯಗೊಂಡ ರಾಜನು ಯೋಚಿಸಿದನು. ಅಪೂರ್ವವಾದ ಚೆಲುವಿನ ಶರೀರವುಳ್ಳ ಇವಳು ಯಾರು ಇರಬಹುದು ?

೬೧. ಪಾದಗಳು ಮಣ್ಣನ್ನು (ನೆಲವನ್ನು) ಸ್ಪರ್ಶಿಸಿಲ್ಲವಾದ್ದರಿಂದ ಮನುಷ್ಯಳಲ್ಲ. ಕಣ್ಣನ್ನು ಮಿಟುಕುತ್ತಿಲ್ಲ. ಆದ್ದರಿಂದ ದೇವಲೋಕದವಳಾಗಿರಬೇಕು.

೬೨. ನಾನು ಇವಳನ್ನೇನೂ ಕೇಳಬಾರದು. ಕೇಳಿದರೆ ಓಡಿ ಹೋದಾಳು. ಪ್ರಾಯಶಃ ದೇವಲೋಕದವರು ವಿಶೇಷ ಕಾರಣ ಇದ್ದಾಗ ಮಾತ್ರ ಇಲ್ಲಿಗೆ ಬರುತ್ತಾರೆ, ಹಾಗೆ ಬಂದಾಗ ಅವರು ಅಪೇಕ್ಷಿಸುವ ಸುಖಕ್ಕೆ ಭಂಗ ಬಂದರೆ ಅವರು ಸುಮ್ಮನಿರುವುದಿಲ್ಲ.

೬೩. ಹೀಗೆ ಯೋಚಿಸುತ್ತಿದ್ದ ಆ ರಾಜನು ಮೆಲ್ಲನೆ ಅವಳೊಡನೆ ಮಾತಿಗಿಳಿದು ಕ್ರಮೇಣ ಅವಳ ಆಲಿಂಗನ ಸುಖವನ್ನು ಪಡೆದನು.

೬೪. ಆ ಅಪ್ಸರೆಯೊಡನೆ ಅವನು ಬಹಳ ಹೊತ್ತು ಆಟವಾಡಿದನು. ಅವಳೂ ಕೂಡ ತನ್ನ ಜನ್ಮಭೂಮಿಯಾದ ಸ್ವರ್ಗವನ್ನೂ, ರಮ್ಯವಾದ ಅಲ್ಲಿನ ಪ್ರೇಮವನ್ನೂ ಜ್ಞಾಪಿಸಿಕೊಳ್ಳಲೇ ಇಲ್ಲ.

೬೫. ಮೇರುಶಿಖರಗಳಿಂದ ಆಕಾಶವು ತುಂಬಿಕೊಂಡಂತೆ ಆ ರಾಜನ ದೇಶವು ಅವಳ ಸಖಿಯಾದ ಯಕ್ಷಿಣಿಯು ಸುರಿಸಿದ ಸುವರ್ಣರಾಶಿಯಿಂದ ತುಂಬಿ ಹೋಯಿತು.

---

ಉಪೇತಾಂ ತಾಂ ಚ ಸಹಸಾ ದೃಷ್ಟ್ವಾ ರಾಜಾ ಸವಿಸ್ಮಯಃ ।
ಅಚಿಂತಯದಹೋ ಕೇಯಮಸಂಭಾವ್ಯವಪುರ್ಭವೇತ್ ॥ ೬೦
ನ ತಾವನ್ಮಾನುಷೀ ಯೇನ ಪಾದೌ ನಾಸ್ಯ ರಜಃಸ್ಪೃಶೌ ।
ನ ಚಕ್ಷುಃ ಸನಿಮೇಷಂ ವಾ ತಸ್ಮಾದ್ದಿವ್ಯೈವ ಕಾಪ್ಯಸೌ ॥ ೬೧
ಪ್ರಷ್ಟವ್ಯಾ ತು ಮಯಾ ನೇಯಂ ಪಲಾಯೇತ ಹಿ ಜಾತುಚಿತ್ ।
ರತಿಭೇದಾಸಹಾಃ ಪ್ರಾಯೋ ದಿವ್ಯಾಃ ಕಾರಣಸಂಗತಾಃ ॥ ೬೨
ಇತಿ ಧ್ಯಾಯನ್ ಸ ನೃಪತಿಃ ಕೃತಸಂಭಾಷಣಸ್ತಯಾ ।
ತತ್ಕ್ರಮೇಣೈವ ತತ್ಕಾಲಂ ತತ್ಕಂಠಾಶ್ಲೇಷಮಾಪ್ತವಾನ್ ॥ ೬೩
ಚಿಕ್ರೀಡ ಚ ಚಿರಂ ಸೋಽತ್ರ ಸಾಕಮಪ್ಸರಸಾ ತಯಾ ।
ದಿವಂ ಸಾಪಿ ನ ಸಸ್ಮಾರ ರಮ್ಯಂ ಪ್ರೇಮ ನ ಜನ್ಮಭೂಃ ॥ ೬೪
ತತ್ಸಖೀಯಕ್ಷಿಣೀವೃಷ್ಟೈರಪೂರಿ ಸ್ವರ್ಣರಾಶಿಭಿಃ ।
ಸಾಸ್ಯ ಭೂಮಿರ್ನರೇಂದ್ರಸ್ಯ ದ್ಯೌರ್ಮೇರುಶಿಖರೈರಿವ ॥ ೬೫

೬೬. ಕಾಲಕ್ರಮೇಣ ಗರ್ಭಧರಿಸಿದ ಆ ಅಪ್ಸರೆಯು ರಾಜನಿಗೆ ಅನನ್ಯಸದೃಶವಾದ ಒಂದು ಹೆಣ್ಣು ಮಗುವನ್ನು ಹೆತ್ತುಕೊಟ್ಟಳು.

೬೭. ಹಡೆಯುತ್ತಿದ್ದಂತೆಯೇ ಅವಳು ರಾಜನಿಗೆ ಹೇಳಿದಳು: ""ಎಲೈ ರಾಜನೆ, ನನಗೆ ಪ್ರಾಪ್ತವಾಗಿದ್ದ ಒಂದು ಶಾಪವು ಈಗ ವಿಮೋಚನೆಯಾಗಿದೆ.

೬೮. ನಾನು ರಂಭೆ. ದೇವಲೋಕದ ಸ್ತ್ರೀ. ನಿನ್ನನ್ನು ನೋಡಿ ಅನುರಕ್ತಳಾದೆ. ಮಗು ಹುಟ್ಟಿರುವುದರಿಂದ ನಾನು ಹೋಗುತ್ತೇನೆ.

೬೯. ಇದು ನಮ್ಮ ಪದ್ಧತಿ. ಈ ಮಗುವನ್ನು ನೀನು ಕಾಪಾಡು. ಇದರ ವಿವಾಹವಾದ ಮೇಲೆ ಸ್ವರ್ಗದಲ್ಲಿ ನಮ್ಮಿಬ್ಬರ ಸಮಾಗಮವಾಗುತ್ತದೆ."

೭೦. ಹೀಗೆ ಹೇಳಿ ಪರಾಧೀನಳಾದ ಆ ಅಪ್ಸರೆ ರಂಭೆಯು ಅದೃಶ್ಯಳಾದಳು. ಅವಳ ವಿರಹದಿಂದ ದುಃಖಗೊಂಡ ರಾಜನು ಪ್ರಾಣಕಳೆದುಕೊಳ್ಳಲು ಬಯಸಿದನು.

೭೧-೭೨. ""ಶಕುಂತಲೆಗೆ ಜನ್ಮಕೊಟ್ಟು ಮೇನಕೆಯು ಹೊರಟು ಹೋದಮೇಲೆ ನಿರಾಶನಾದ ವಿಶ್ವಾಮಿತ್ರನು ಪ್ರಾಣ ಬಿಟ್ಟನೇನು?" ಇತ್ಯಾದಿಯಾಗಿ ಮಂತ್ರಿಗಳು ಹೇಳಿದ್ದರಿಂದ ಅದನ್ನೆಲ್ಲ ಅರ್ಥಮಾಡಿಕೊಂಡ ರಾಜನು ತಮ್ಮಿಬ್ಬರ ಸಂಗಮಕ್ಕೆ ಈ ಕನ್ಯೆಯೇ ಕಾರಣವಾಗುವಳು ಎಂದು ನಿಧಾನವಾಗಿ ಧೈರ್ಯ ತಂದುಕೊಂಡನು.

---

ಕಾಲೇನ ಚಾಸ್ಯ ರಾಜ್ಞಃ ಸಾ ಸುಷೇಣಸ್ಯ ವರಾಪ್ಸರಾಃ ।
ಅಸೂತಾನನ್ಯಸದೃಶೀಂ ಧೃತಗರ್ಭಾ ಸತೀ ಸುತಾಮ್ ॥ ೬೬
ಪ್ರಸೂತ ಮಾತ್ರೈವ ಚ ಸಾ ಜಗಾದೈನಂ ಮಹೀಪತಿಮ್ ।
ರಾಜನ್ ಶಾಪೋಽಯಮೀದೃಙ್ಮೇ ಕ್ಷೀಣೋ ಜಾತಃ ಸ ಚಾಧುನಾ ॥ ೬೭
ಅಹಂ ಹಿ ರಂಭಾ ನಾಕಸ್ತ್ರೀ ತ್ವಯಿ ದೃಷ್ಟೇಽನುರಾಗಿಣೀ ।
ಜಾತೇ ಚ ಗರ್ಭೇ ಮುಕ್ತ್ವಾ ತಂ ಗಚ್ಛಾಮಸ್ತತ್ಕ್ಷಣಂ ವಯಮ್ ॥ ೬೮
ಸಮಯೋ ಹೀದೃಶೋಽಸ್ಮಾಕಂ ತದ್ರಕ್ಷೇಃ ಕನ್ಯಕಾಮಿಮಾಮ್ ।
ಏತದ್ವಿವಾಹಾನ್ನಾಕೇ ನೌ ಭೂಯೋ ಭಾವೀ ಸಮಾಗಮಃ ॥ ೬೯
ಏವಮುಕ್ತ್ವಾಪ್ಸರಾ ರಂಭಾ ವಿವಶಾ ಸಾ ತಿರೋದಧೇ ।
ತದ್ದುಃಖಾಚ್ಚ ಸ ರಾಜಾಭೂತ್ತದಾ ಪ್ರಾಣವ್ಯಯೋದ್ಯತಃ ॥ ೭೦
ನಿರಾಸ್ಥೇನಾಪಿ ಕಿಂತ್ಯಕ್ತಂ ವಿಶ್ವಾಮಿತ್ರೇಣ ಜೀವಿತಮ್ ।
ಮೇನಕಾಯಾಂ ಪ್ರಯಾತಾಯಾಂ ಪ್ರಸೂಯೈವ ಶಕುಂತಲಾಮ್ ॥ ೭೧
ಇತ್ಯಾದಿ ಸಚಿವೈರುಕ್ತೋ ಜ್ಞಾತಾರ್ಥಃ ಸ ನೃಪೋ ಧೃತಿಮ್ ।
ಶನೈರಾದತ್ತ ಕನ್ಯಾಂ ಚ ಪುನಃ ಸಂಗಮಕಾರಣಮ್ ॥ ೭೨

೭೩. ಸರ್ವಾಂಗಸುಂದರವಾದ ಆ ಮಗುವಿನಲ್ಲೇ ಏಕಾಗ್ರತೆಯನ್ನು ಹೊಂದಿದ್ದ ತಂದೆಯು (ಅವಳ) ಕಣ್ಣುಗಳು ಸುಂದರವಾಗಿದ್ದರಿಂದ 'ಸುಲೋಚನಾ' ಎಂದು ಹೆಸರಿಟ್ಟನು.

೭೪. ಕಾಲಕ್ರಮೇಣ ಯೌವನಾವಸ್ಥೆಗೆ ಬಂದ ಅವಳು ಒಮ್ಮೆ ಉದ್ಯಾನದಲ್ಲಿದ್ದಾಗ ಅಲ್ಲಿಯೇ ತಿರುಗಾಡುತ್ತಿದ್ದ ಕಶ್ಯಪ ವಂಶದ ವತ್ಸ ಎಂಬ ತರುಣ ಮುನಿಯು ಅವಳನ್ನು ಅಕಸ್ಮಾತ್ತಾಗಿ ನೋಡಿದನು.

೭೫. ತಪೋರಾಶಿಯು ಮೈವೆತ್ತಂತಿದ್ದರೂ ಅವನು ಆ ರಾಜಕನ್ಯೆಯನ್ನು ನೋಡಿದಾಗ ಅನುರಾಗ ರಸವನ್ನು ಒಮ್ಮೆಲೇ ಅರಿತನು ಮತ್ತು ಹೀಗೆ ಚಿಂತಿಸಿದನು:

೭೬. ""ಈ ಕನ್ಯೆಯ ರೂಪವು ಪರಮಾದ್ಭುತವಾದುದು. ಇವಳನ್ನು ಹೆಂಡತಿಯಾಗಿ ಪಡೆಯದಿದ್ದ ಮೇಲೆ ತಪಸ್ಸಿಗೆ ಮತ್ತೇನು ಫಲ ?"

೭೭. ಹೀಗೆ ಯೋಚಿಸುತ್ತಿದ್ದ ಹೊಗೆಯಿಲ್ಲದ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ ಅವನನ್ನು ಸುಲೋಚನೆಯು ನೋಡಿದಳು.

೭೮. ಅಕ್ಷಸೂತ್ರ ಮತ್ತು ಕಮಂಡಲವನ್ನು ಹಿಡಿದಿದ್ದ ಅವನನ್ನು ಪ್ರೀತಿಯಿಂದ ನೋಡಿದ ಅವಳು ಶಾಂತನೂ ಆಕರ್ಷಣೀಯನೂ ಆಗಿರುವ ಇವನು ಯಾರು ಎಂದು ಯೋಚಿಸಿದಳು.

೭೯. ಅವಳು ವರಿಸುವುದಕ್ಕಾಗಿಯೋ ಎಂಬಂತೆ ಅವನ ಹತ್ತಿರಕ್ಕೆ ಬಂದು ತನ್ನ ಕಮಲದಂತಹ ಕಣ್ಣುಗಳ ಮಾಲೆಯನ್ನು ಅವನಿಗೆ ಹಾಕುತ್ತಾ ಅವನಿಗೆ ನಮಸ್ಕಾರ ಮಾಡಿದಳು.

---

ತಾಂ ಚ ಬಾಲಾಂ ತದೇಕಾಗ್ರಃ ಪಿತಾ ಸರ್ವಾಂಗಸುಂದರೀಮ್ ।
ಸೋಽತಿಲೋಚನಸೌಂದರ್ಯಾನ್ನಾಮ್ನಾ ಚಕ್ರೇ ಸುಲೋಚನಾಮ್ ॥ ೭೩
ಕಾಲೇನ ಯೌವನಪ್ರಾಪ್ತಾಮುದ್ಯಾನಸ್ಥಾಂ ದದರ್ಶ ತಾಮ್ ।
ಯುವಾ ಯದೃಚ್ಛಯಾ ಭ್ರಾಮ್ಯನ್ ವತ್ಸಾಖ್ಯಃ ಕಾಶ್ಯಪೋ ಮುನಿಃ ॥ ೭೪
ಸ ತಪೋರಾಶಿರೂಪೋಽಪಿ ದೃಷ್ಟ್ವೈವೈತಾಂ ನೃಪಾತ್ಮಜಾಮ್ ।
ಅನುರಾಗರಸಜ್ಞೋಽಭೂದಿತಿ ಚಾತ್ರ ವ್ಯಚಿಂತಯತ್ ॥ ೭೫
ಅಹೋ ರೂಪಂ ಕಿಮಪ್ಯಸ್ಯಾಃ ಕನ್ಯಾಯಾಃ ಪರಮಾದ್ಭುತಮ್ ।
ನೇಮಾಂ ಪ್ರಾಪ್ನೋಮಿ ಚೇದ್ಭಾರ್ಯಾಂ ಕಿಮನ್ಯತ್ತಪಸಃ ಫಲಮ್ ॥ ೭೬
ಇತಿ ಧ್ಯಾಯನ್ ಮುನಿಯುವಾ ಸ ಸುಲೋಚನಯಾ ತಯಾ ।
ಅದರ್ಶಿ ಪ್ರಜ್ವಲತ್ತೇಜಾ ವಿಧೂಮ ಇವ ಪಾವಕಃ ॥ ೭೭
ತಂ ವೀಕ್ಷ್ಯ ಸಾಪಿ ಸಪ್ರೇಮಾ ಸಾಕ್ಷಸೂತ್ರಕಮಂಡಲುಮ್ ।
ಶಾಂತಶ್ಚ ಕಮನೀಯಶ್ಚ ಕೋಽಯಂ ಸ್ಯಾದಿತ್ಯಚಿಂತಯತ್ ॥ ೭೮
ವರಣಾಯೇವ ಚೋಪೇತ್ಯ ನಯನೋತ್ಪಲಮಾಲಿಕಾಮ್ ।
ಕ್ಷಿಪಂತೀ ತಸ್ಯ ವಪುಷಿ ಪ್ರಣಾಮಮಕರೋನ್ಮುನೇಃ ॥ ೭೯

೮೦. ದೇವಾಸುರರಿಂದಲೂ ಉಲ್ಲಂಘಿಸಲಾಗದ ಮನ್ಮಥನ ಆಜ್ಞೆಗೆ ವಶನಾದ ಅವನು ಅವಳಿಗೆ 'ಪತಿಯನ್ನು ಪಡೆ' ಎಂದು ಆಶೀರ್ವದಿಸಿದನು.

೮೧–೮೨. ಆಗ ಅವನ ಅಸಾಮಾನ್ಯರೂಪಕ್ಕೆ ಮಾರು ಹೋಗಿ ನಾಚಿದ ಅವಳು ಅವನ್ನು ಕುರಿತು "ಇದು ನಿಮ್ಮ ಇಚ್ಛೆಯಾಗಿದ್ದು ಕೇವಲ ಹಾಸ್ಯದ ಮಾತಾಗಿಲ್ಲ ಎನ್ನುವುದಾದರೆ ನನ್ನ ತಂದೆಯಲ್ಲಿ ಬೇಡಿಕೆಯನ್ನು ಸಲ್ಲಿಸಿ" ಎಂದು ಹೇಳಿದಳು.

೮೩. ಅನಂತರ ಆ ಮುನಿಯು ಸೇವಕರಿಂದ ಅವಳ ವಂಶದ ಬಗ್ಗೆ ತಿಳಿದು ಅವಳ ತಂದೆಯ ಹತ್ತಿರ ಹೋಗಿ ಅವಳನ್ನು ವಿವಾಹಮಾಡಿಕೊಡಿ ಎಂದು ಬೇಡಿದನು.

೮೪. ತಪಸ್ಸಿನಿಂದಲೂ ಶರೀರದಿಂದಲೂ ಅಸಾಮಾನ್ಯನಾಗಿದ್ದ ಆ ಋಷಿಕುಮಾರನನ್ನು ನೋಡಿ ರಾಜನು ಆತಿಥ್ಯವನ್ನು ಮಾಡಿ ಹೀಗೆ ಹೇಳಿದನು.

೮೫. ""ಪೂಜ್ಯನೇ, ನನಗೆ ಇವಳು ಅಪ್ಸರೆಯಾದ ರಂಭೆಯಲ್ಲಿ ಹುಟ್ಟಿದವಳು. ಇವಳಿಗೆ ಮದುವೆ ಮಾಡಿದ ಮೇಲೆ ನಾನು ಸ್ವರ್ಗದಲ್ಲಿ ರಂಭೆಯೊಡನೆ ಸೇರುವೆನು.

೮೬. ಇದನ್ನು ಸ್ವರ್ಗಕ್ಕೆ ಹೋಗುವಾಗ ರಂಭೆಯೇ ನನಗೆ ಹೇಳಿದ್ದಳು. ಇದು ಸಾಧ್ಯವಾಗುವ ಬಗೆಯನ್ನು ನೀನು ತಿಳಿಸು" ಎಂದನು.

---

ಪತಿಂ ಸಮಾಪ್ನುಹೀತ್ಯಾಶೀಸ್ತಸ್ಯಾಸ್ತೇನಾಭ್ಯಧೀಯತ ।
ಸುರಾಸುರದುರುಲ್ಲಂಘ್ಯಮನ್ಮಥಾಜ್ಞಾವಶಾತ್ಮನಾ ॥ ೮೦
ತತೋಽಸಾಮಾನ್ಯ ತದ್ರೂಪ ಲೋಭಲುಂಠಿತಲಜ್ಜಯಾ ।
ತಯಾಪ್ಯೂಚೇ ಸ ವಿನಮದ್ವಕ್ತ್ರಯಾ ಮುನಿಪುಂಗವಃ ॥ ೮೧
ಏಷಾ ಯದೀಚ್ಛಾ ಭವತೋ ನರ್ಮಾಲಾಪೋ ನ ಚೇದಯಮ್ ।
ತದ್ದೇವ ದಾತಾ ನೃಪತಿಃ ಪಿತಾ ಮೇ ಯಾಚ್ಯತಾಮಿತಿ ॥ ೮೨
ಅಥಾನ್ವಯಂ ಪರಿಜನಾನ್ಮುನಿಸ್ತಸ್ಯಾ ನಿಶಮ್ಯ ಸಃ ।
ಗತ್ವಾ ನೃಪಂ ತತ್ಪಿತರಂ ಸುಷೇಣಂ ತಾಮಯಾಚತ ॥ ೮೩
ಸೋಽಪಿ ತಂ ವೀಕ್ಷ್ಯ ತಪಸಾ ವಪುಷಾ ಚಾತಿಭೂಮಿಗಮ್ ।
ಉವಾಚ ರಚಿತಾತಿಥ್ಯೋ ರಾಜಾ ಮುನಿಕುಮಾರಕಮ್ ॥ ೮೪
ಜಾತಾಪ್ಸರಸಿ ರಂಭಾಯಾಂ ಕನ್ಯೈಷಾ ಭಗವನ್ಮಮ ।
ಅಸ್ಯಾ ವಿವಾಹಾನ್ನಾಕೇ ಮೇ ತಯಾ ಭಾವೀ ಸಮಾಗಮಃ ॥ ೮೫
ಏವಂ ತಯಾ ವ್ರಜಂತ್ಯಾ ದ್ಯಾಂ ರಂಭಯೈವ ಮಮೋದಿತಮ್ ।
ಏತತ್ಕಥಂ ಮಹಾಭಾಗ ಭವೇದಿತಿ ನಿರೂಪ್ಯತಾಮ್ ॥ ೮೬

೭೭–೭೮. ಅದನ್ನು ಕೇಳಿ ಮುನಿಕುಮಾರನು ಒಂದು ಕ್ಷಣ ಚಿಂತಿಸಿದನು. ""ಹಿಂದೆ ಮೇನಕೆಯಲ್ಲಿ ಹುಟ್ಟಿದ ಪ್ರಮದ್ವರೆಯು ಹಾವು ಕಚ್ಚಿದಾಗ ಅರ್ಧ ಆಯುಷ್ಯವನ್ನು ಕೊಟ್ಟ ರುರು ಎಂಬ ಮುನಿಯನ್ನು ಮದುವೆಯಾಗಲಿಲ್ಲವೆ ? ಲೋಭಿಯಾಗಿದ್ದ ತ್ರಿಶಂಕುವನ್ನು ವಿಶ್ವಾಮಿತ್ರನು ಸ್ವರ್ಗಕ್ಕೆ ಕಳಿಸಿ ಕೊಡಲಿಲ್ಲವೆ ?

೭೯. ಹೀಗಿರುವಾಗ ನನ್ನ ತಪಸ್ಸಿನ ಒಂದು ಭಾಗವನ್ನು ವಿನಿಯೋಗಿಸಿ ನಾನೂ ಹಾಗೆ ಮಾಡಲಾರೆನೆ !" ಎಂದು ಆಲೋಚಿಸಿ ಅವನು ಹೇಳಿದನು.

೮೦. ""ಎಲೈ ದೇವತೆಗಳೆ, ನನ್ನ ತಪಸ್ಸಿನ ಒಂದು ಅಂಶದಿಂದ ಈ ರಾಜನು ಶರೀರಸಹಿತನಾಗಿಯೇ ರಂಭೆಯನ್ನು ಕೂಡಲು ಸ್ವರ್ಗಕ್ಕೆ ಹೋಗಲಿ".

೮೧. ಹೀಗೆ ರಾಜಸಭೆಯಲ್ಲಿ ಅವನು ಹೇಳಿದಾಗ "ಹಾಗೆಯೇ ಆಗಲಿ' ಎಂದು ಒಂದು ಅಶರೀರವಾಣಿಯು ಕೇಳಿಸಿತು.

೮೨. ಆಗ ಸುಲೋಚನೆಯನ್ನು ಋಷಿಗೆ ಕೊಟ್ಟು ಮದುವೆಮಾಡಿ ಸ್ವರ್ಗಕ್ಕೆ ತೆರಳಿ ಅಲ್ಲಿ ದಿವ್ಯತ್ವವನ್ನು ಪಡೆದ ರಾಜನು ಆಗಲೇ ಇಂದ್ರನಿಂದ ಮತ್ತೆ ಕಳಿಸಲ್ಪಟ್ಟ ದಿವ್ಯಳಾಗಿದ್ದ ಆ ರಂಭೆಯೊಡನೆ ಸುಖವಾಗಿದ್ದನು.

---

ತಚ್ಛ್ರುತ್ವಾ ಮುನಿಪುತ್ರೋಽಸೌ ಕ್ಷಣಮೇವಮಚಿಂತಯತ್ ।
ಕಿಂಪುರಾ ಮೇನಕೋದ್ಭೂತಾ ಸರ್ಪದಷ್ಟಾ ಪ್ರಮದ್ವರಾ ॥ ೭೭
ದತ್ವಾಯುಷೋಽರ್ಧಂ ಮುನಿನಾ ನ ಭಾರ್ಯಾ ರುರುಣಾ ಕೃತಾ ।
ತ್ರಿಶಂಕುಃ ಕಿಂ ನ ನೀತೋ ದ್ಯಾಂ ವಿಶ್ವಾಮಿತ್ರೇಣ ಲುಬ್ಧಕಃ ॥ ೭೮
ತದಿದಂ ಸ್ವತಪೋಭಾಗವ್ಯಯಾತ್ ಕಿಂ ನ ಕರೋಮ್ಯಹಮ್ ।
ಇತ್ಯಾಲೋಚ್ಯ ನ ಭಾರೋಽ ಯಮಿತ್ಯುಕ್ತ್ವಾ ಸೋಽಬ್ರವೀನ್ಮುನಿಃ ॥ ೭೯
ಹೇ ದೇವತಾಸ್ತಪೋಂಶೇನ ಮದೀಯೇನೈಷ ಭೂಪತಿಃ ।
ಸಶರೀರೋ ದಿವಂ ಯಾತು ರಂಭಾಸಂಭೋಗಸಿದ್ಧಯೇ ॥ ೮೦
ಇತ್ಯುಕ್ತೇ ತೇನ ಮುನಿನಾ ಶೃಣ್ವಂತ್ಯಾಂ ರಾಜಸಂಸದಿ ।
ಏವಮಸ್ತ್ವಿತಿ ಸುವ್ಯಕ್ತಾ ದಿವ್ಯಾ ವಾಗುದಭೂತ್ತತಃ ॥ ೮೧
ತತಃ ಸುಲೋಚನಾಂ ತಸ್ಮೈ ಮುನಯೇ ಕಾಶ್ಯಪಾಯ ತಾಮ್ ।
ವತ್ಸಾಯ ದತ್ವಾ ತನಯಾಂ ಸ ರಾಜಾ ದಿವಮುದ್ಯಯೌ ॥ ೮೨
ತತ್ರ ದಿವ್ಯತ್ವಮಾಸಾದ್ಯ ತಯಾ ಶಕ್ರನಿಯುಕ್ತಯಾ ।
ಸ ರೇಮೇ ರಂಭಯಾ ಸಾಕಂ ಭೂಯೋ ದಿವ್ಯಾನುಭಾವಯಾ ॥ ೮೩

೯೪. ಹೀಗೆ ಸುಷೇಣನು ಮಗಳಿಂದ ಕೃತಾರ್ಥನಾದನು. ನಿಮ್ಮಂಥವರ ಮನೆಗಳಲ್ಲಿ ಇಂತಹ ಕನ್ಯೆಯರು ಜನಿಸುತ್ತಾರೆ.

೯೫. ಆದ್ದರಿಂದ ಶಾಪಗ್ರಸ್ತಳಾದ ಯಾವಳೋ ದಿವ್ಯಳು ನಿನ್ನ ಮನೆಯಲ್ಲಿ ಕನ್ಯೆಯಾಗಿ ಹುಟ್ಟಿದ್ದಾಳೆ. ರಾಜನೇ, ಅದರಿಂದ ನೀನು ದುಃಖಿಸಬೇಡ'

೯೬. ಹೀಗೆ ಆ ವೃದ್ಧ ಬ್ರಾಹ್ಮಣನು ಹೇಳಿದ್ದನ್ನು ಕೇಳಿ ಕಳಿಂಗದತ್ತ ರಾಜನು ಚಿಂತೆಯನ್ನು ದೂರಮಾಡಿ ಶಾಂತನಾದನು.

೯೭. ಚಂದ್ರಕಲೆಯಂತೆ ಕಣ್ಣುಗಳಿಗೆ ಆನಂದದಾಯಿನಿಯಾದ ಆ ಮಗಳಿಗೆ ಕಳಿಂಗ ಸೇನೆ ಎಂದು ಹೆಸರಿಟ್ಟನು.

೯೮. ಆ ರಾಜಕುಮಾರಿ ಕಳಿಂಗ ಸೇನೆಯು ತಂದೆಯ ಮನೆಯಲ್ಲಿ ಕ್ರಮೇಣ ಬೆಳೆದು ಯೌವನಾವಸ್ಥೆಗೆ ಬಂದಳು.

೯೯. ಕ್ರೀಡಾರಸಮಯವಾದ ಬಾಲ್ಯವೆಂಬ ಸಮುದ್ರದ ಅಲೆಯಂತೆ ಅವಳು ಅರಮನೆಗಳಲ್ಲಿ ಮತ್ತು ಉದ್ಯಾನಗಳಲ್ಲಿ ವಿಹರಿಸಿದಳು.

೧೦೦. ಒಮ್ಮೆ ಅವಳು ಅರಮನೆಯಲ್ಲಿ ಆಟವಾಡುತ್ತಿದ್ದಾಗ ಮಯಾಸುರನ ಮಗಳಾದ ಸೋಮಪ್ರಭಾ ಎಂಬುವಳು ಆಕಾಶದಲ್ಲಿ ಹೋಗುತ್ತಿದ್ದಾಗ ಇವಳನ್ನು ನೋಡಿದಳು.

---

ಇತ್ಥಂ ಕೃತಾರ್ಥತಾಂ ದೇವ ಸುಷೇಣಃ ಪ್ರಾಪ ಕನ್ಯಯಾ ।
ಕನ್ಯಾ ಯುಷ್ಮಾದೃಶಾಂ ಗೇಹೇಷ್ವೀದೃಶ್ಯೋಽವತರಂತಿ ಹಿ ॥ ೯೪
ತದೇಷಾ ಕಾಪಿ ದಿವ್ಯಾ ತೇ ಜಾತಾ ಶಾಪಚ್ಯುತಾ ಗೃಹೇ ।
ಕನ್ಯಾ ನೂನಮತೋ ಮಾ ಗಾಃ ಶುಚಂ ತಜ್ಜನ್ಮನಾ ವಿಭೋ ॥ ೯೫
ಇತಿ ಶ್ರುತ್ವಾ ಕಥಾಂ ರಾಜಾ ಗೃಹವೃದ್ಧಾತ್ ದ್ವಿಜನ್ಮನಃ ।
ಕಲಿಂಗದತ್ತೋ ನೃಪತಿರ್ಜಹೌ ಚಿಂತಾಂ ತುತೋಷ ಚ ॥ ೯೬
ತಾಂ ಚ ಚಕ್ರೇ ನಿಜಸುತಾಂ ನಯನಾನಂದದಾಯಿನೀಮ್ ।
ನಾಮ್ನಾ ಕಲಿಂಗಸೇನೇತಿ ಬಾಲಾಮಿಂದುಕಲೋಪಮಾಮ್ ॥ ೯೭
ಸಾಪಿ ತಸ್ಯ ಪಿತುರ್ಗೇಹೇ ರಾಜಪುತ್ರೀ ತತಃ ಕ್ರಮಾತ್ ।
ಕಲಿಂಗಸೇನಾ ವವೃಧೇ ವಯಸ್ಯಾಮಧ್ಯವರ್ತಿನೀ ॥ ೯೮
ವಿಜಹಾರ ಚ ಹರ್ಮ್ಯೇಷು ಸಾ ಗೃಹೇಷು ವನೇಷು ಚ ।
ಕ್ರೀಡಾರಸಮಯಸ್ಯೇವ ಲಹರೀ ಶೈಶವಾಂಬುಧೇಃ ॥ ೯೯
ಕದಾಚಿದಥ ಹರ್ಮ್ಯಸ್ಥಾಂ ಕೇಲಿಸಕ್ತಾಂ ದದರ್ಶ ತಾಮ್ ।
ಮಯಾಸುರಸುತಾ ಯಾಂತೀ ವ್ಯೋಮ್ನಾ ಸೋಮಪ್ರಭಾಭಿಧಾ ॥ ೧೦೦

೧೧೧. ತನ್ನ ರೂಪದಿಂದ ಮುನಿಗಳ ಮನಸ್ಸನ್ನು ಮೋಹಿಸುವ ಅವಳನ್ನು ನೋಡಿ ಆಕಾಶದಲ್ಲಿದ್ದ ಸೋಮಪ್ರಭೆಯು ಹೀಗೆ ಚಿಂತಿಸಿದಳು.

೧೧೨–೧೧೩. ಚಂದ್ರನ ಕಾಂತಿಯೇ ರೂಪತಾಳಿದಂತಿರುವ ಇವಳು ಯಾರು ? ಹಗಲಿನಲ್ಲಿ ಹೇಗೆ ಇವಳಿಗೆ ಇಷ್ಟು ಕಾಂತಿ? ಇವಳು ರಾಜಕುಲದಲ್ಲಿರುವ ಶಾಪಗ್ರಸ್ತಳಾದ ದಿವ್ಯ ಲೋಕದವಳಾಗಿರಬೇಕು. ನನ್ನ ಜನ್ಮಾಂತರದ ಗೆಳತಿ ಇವಳು ಆಗಿದ್ದಿರಬೇಕು.

೧೧೪. ಇವಳಲ್ಲಿ ಅತಿ ಸ್ನೇಹದಿಂದ ಕೂಡಿದ ಮನಸ್ಸು ಇದನ್ನು ಹೇಳುತ್ತಿದೆ. ಇವಳನ್ನು ನನ್ನ ಸ್ವಯಂವರಸಖಿಯನ್ನಾಗಿ ಮಾಡಿಕೊಳ್ಳುವುದು ಉಚಿತ.

೧೧೫. ಹೀಗೆ ಯೋಚಿಸಿ ಸೋಮಪ್ರಭೆಯು ಆ ಕನ್ಯೆಗೆ ಕಾಣಿಸದಂತೆ ಆಕಾಶದಿಂದ ಕೆಳಗೆ ಇಳಿದಳು.

೧೧೬. ಅವಳನ್ನು ನಂಬಿಸಲು ಮಾನವ ಕನ್ಯೆಯ ರೂಪವನ್ನು ತಾಳಿ ಕಳಿಂಗ ಸೇನೆಯ ಹತ್ತಿರ ಬಂದಳು.

೧೧೭–೧೧೮. "ಸುಂದರಳಾದ ಯಾವಳೋ ರಾಜಕುಮಾರಿಯು ನನ್ನ ಪಕ್ಕಕ್ಕೆ ಬಂದಿದ್ದಾಳೆ". ಎಂದು ಭಾವಿಸಿ ಕಳಿಂಗಸೇನೆಯು ಆದರದಿಂದ ಮೇಲೆದ್ದು ಸೋಮಪ್ರಭೆಯನ್ನು ಅಪ್ಪಿಕೊಂಡಳು.

---

ಸಾ ತಾಮಾಲೋಕ್ಯ ರೂಪೇಣ ಮುನಿಮಾನಸಮೋಹಿನೀಮ್ ।
ಸೋಮಪ್ರಭಾ ನಭಃಸ್ಥೈವ ಜಾತಪ್ರೀತಿರಚಿಂತಯತ್ ॥ ೧೧೧
ಕೇಯಂ ಕಿಮೈಂದವೀ ಮೂರ್ತಿಃ ಕಾಂತಿಸ್ತಸ್ಯಾ ದಿವಾ ಕುತಃ ।
ರತಿರ್ವಾ ಯದಿ ಕಾಮಃ ಕ್ವ ಕನ್ಯಕಾ ತದವೈಮ್ಯಹಮ್ ॥ ೧೧೨
ಅತ್ರ ರಾಜಗೃಹೇ ಕಾಪಿ ದಿವ್ಯಾ ಶಾಪಚ್ಯುತಾ ಭವೇತ್ ।
ಜಾನೇ ಜನ್ಮಾಂತರೇ ಚಾಭೂನ್ನೂನಂ ಸಖ್ಯಂ ಮಮೈತಯಾ ॥ ೧೧೩
ಏತದ್ಧಿ ಮೇ ವದತ್ಯಸ್ಯಾಮತಿಸ್ನೇಹಾಕುಲಂ ಮನಃ ।
ತದ್ಯುಕ್ತಂ ಕರ್ತುಮೇತಾಂ ಮೇ ಸ್ವಯಂವರಸಖೀಂ ಪುನಃ ॥ ೧೧೪
ಇತಿ ಸಂಚಿಂತ್ಯ ಬಾಲಾಯಾಸ್ತಸ್ಯಾಃ ಸಂತ್ರಾಸಶಂಕಯಾ ।
ಸೋಮಪ್ರಭಾ ಸಾ ಗಗನಾದಲಕ್ಷಿತಮವಾತರತ್ ॥ ೧೧೫
ಮನುಷ್ಯಕನ್ಯಕಾಭಾವಮಾಶ್ರಿತ್ಯಾಶ್ವಾಸಕಾರಣಮ್ ।
ಸಾಸ್ಯಾಃ ಕಲಿಂಗಸೇನಾಯಾಃ ಶನೈರುಪಸಸರ್ಪ ಚ ॥ ೧೧೬
ದಿಷ್ಟ್ಯಾ ರಾಜಸುತಾ ಕಾಪಿ ಸ್ವಯಮತ್ಯದ್ಭುತಾಕೃತಿಃ ।
ಅಸೌ ಸಮಾಗತಾ ಪಾರ್ಶ್ವಮುಚಿತೇಯಂ ಸಖೀ ಮಮ ॥ ೧೧೭
ಇತಿ ತದ್ದರ್ಶನಾದೇವ ವಿಚಿಂತ್ಯೋತ್ಥಾಯ ಚಾದರಾತ್ ।
ಕಲಿಂಗಸೇನಾಪ್ಯಾಲಿಂಗತ್ ಸಾ ತಾಂ ಸೋಮಪ್ರಭಾಂ ತದಾ ॥ ೧೧೮

೧೯. ಅವಳನ್ನು ಕುಳ್ಳಿರಿಸಿ ವಂಶ ಮತ್ತು ಹೆಸರನ್ನು ಕೇಳಿದಳು. "ಎಲ್ಲವನ್ನೂ ಹೇಳುತ್ತೇನೆ, ಇರು' ಎಂದು ಸೋಮಪ್ರಭೆಯು ಅವಳಿಗೆ ಹೇಳಿದಳು.

೧೧೦. ಕಥೆಯನ್ನು ಹೇಳುತ್ತಿರುವಾಗಲೇ ಅವರಿಬ್ಬರೂ ಕೈ ಕೈ ಹಿಡಿದು ಗೆಳತಿಯರಾದರು.

೧೧೧. ಆಗ ಸೋಮಪ್ರಭೆಯು ಹೇಳಿದಳು. "ನೀನು ರಾಜಕುಮಾರಿ. ರಾಜಕುಮಾರರೊಡನೆ ಸ್ನೇಹವಿರಿಸಿಕೊಳ್ಳುವುದು ಬಹಳ ಕಷ್ಟ. ನೀನು ಸ್ವಲ್ಪ ತಪ್ಪುಮಾಡಿದರೂ ಅವರು ಬಹಳ ಕೋಪಿಸಿಕೊಳ್ಳುತ್ತಾರೆ.

೧೧೨. ನಿದರ್ಶನವಾಗಿ ಇಲ್ಲಿ ರಾಜಪುತ್ರ ಮತ್ತು ವ್ಯಾಪಾರಿಪುತ್ರರ ಕಥೆಯನ್ನು ಹೇಳುತ್ತೇನೆ ಕೇಳು.

೧೧೩. ಪುಷ್ಕರಾವತಿ ಎಂಬ ನಗರದಲ್ಲಿ ಗೂಢಸೇನ ಎಂಬ ರಾಜನಿದ್ದನು. ಅವನಿಗೆ ಒಬ್ಬನೇ ಮಗನಿದ್ದನು.

೧೧೪. ಅಹಂಕಾರಿಯಾದ ಆ ಮಗನು ಮಾಡುತ್ತಿದ್ದ ಎಲ್ಲ ಶುಭಾಶುಭಕರ್ಮಗಳನ್ನೂ ಒಬ್ಬನೇ ಮಗನಾದುದರಿಂದ ರಾಜನು ಸಹಿಸಿಕೊಳ್ಳುತ್ತಿದ್ದನು.

---

ಉಪವೇಶ್ಯ ಚ ಪಪ್ರಚ್ಛ ಕ್ಷಣಾದನ್ವಯನಾಮನೀ ।
ವಕ್ಷ್ಯಾಮಿ ಸರ್ವಂ ತಿಷ್ಠೇತಿ ತಾಂ ಚ ಸೋಮಪ್ರಭಾಬ್ರವೀತ್ ॥ ೧೯
ತತಃ ಕಥಾಕ್ರಮೇಣೈವ ಏಷಾ ಸಖ್ಯಮಬಧ್ಯತ ।
ತಾಭ್ಯಾಮುಭಾಭ್ಯಾಮನ್ಯೋನ್ಯಹಸ್ತಗ್ರಹಪುರಃಸರಮ್ ॥ ೧೧೦
ಅಥ ಸೋಮಪ್ರಭಾವಾದೀತ್ ಸಖಿ ತ್ವಂ ರಾಜಕನ್ಯಕಾ ।
ರಾಜಪುತ್ರೈಃ ಸಮಂ ಸಖ್ಯಂ ಕೃಚ್ಛ್ರಾದಪ್ಯತಿವಾಹ್ಯತೇ ॥ ೧೧೧
ಅಲ್ಪೇನಾಪ್ಯಪರಾಧೇನ ತೇ ಹಿ ಕುಪ್ಯಂತ್ಯಮಾತ್ರಯಾ ।
ರಾಜಪುತ್ರವಣಿಕ್‌ಪುತ್ರಕಥಾಂ ಶೃಣ್ವತ್ರ ವಚ್ಮಿ ತೇ ॥ ೧೧೨
ನಗರ್ಯಾಂ ಪುಷ್ಕರಾವತ್ಯಾಂ ಗೂಢಸೇನಾಭಿಧೋ ನೃಪಃ ।
ಆಸೀತ್ತಸ್ಯ ಚ ಜಾತೋಽಭೂದೇಕ ಏವ ಕಿಲಾತ್ಮಜಃ ॥ ೧೧೩
ಸ ರಾಜಪುತ್ರೋ ದೃಪ್ತಃ ಸನ್ನೇಕಪುತ್ರತಯಾ ಶುಭಮ್ ।
ಅಶುಭಂ ವಾಪಿ ಯಚ್ಚಕ್ರೇ ಪಿತಾ ತಸ್ಯಾಸಹಿಷ್ಟ ತತ್ ॥ ೧೧೪

೧೧೫. ರಾಜಪುತ್ರನು ಉಪವನದಲ್ಲಿ ನಡೆದಾಡುತ್ತಿದ್ದಾಗ ತನಗೆ ಸಮನಾದ ರೂಪ ಮತ್ತು ಸಂಪತ್ತುಳ್ಳ ಬ್ರಹ್ಮದತ್ತನೆಂಬ ವ್ಯಾಪಾರಿಯ ಒಬ್ಬನೇ ಮಗನನ್ನು ಸಂಧಿಸಿದನು.

೧೧೬. ಅವನನ್ನು ನೋಡಿದ ಕೂಡಲೇ ಅವನನ್ನು ತನ್ನ ಸ್ವಯಂವರಸ್ನೇಹಿತನನ್ನಾಗಿ ಮಾಡಿಕೊಂಡುಬಿಟ್ಟನು. ಆಗಲೇ ಇಬ್ಬರೂ ಒಂದೇ ಎಂಬಂತೆ ಆಗಿಬಿಟ್ಟರು.

೧೧೭. ಇಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ಇನ್ನೊಬ್ಬರು ಇರುವುದು ಒಂದು ಕ್ಷಣವೂ ಸಾಧ್ಯವಾಗುತ್ತಿರಲಿಲ್ಲ. ಜನ್ಮಾಂತರದಲ್ಲಿ ಹುಟ್ಟಿದ ಪ್ರೀತಿಯು ಬೇಗ ಬಂಧಿಸುತ್ತದೆ.

೧೧೮. ವ್ಯಾಪಾರಿಪುತ್ರನಿಗೆ ತಾವು ಮಾಡಿಕೊಡದ ಯಾವ ಭೋಗವನ್ನೂ ರಾಜಪುತ್ರನು ಅನುಭವಿಸುತ್ತಿರಲಿಲ್ಲ.

೧೧೯. ಒಮ್ಮೆ ಗೆಳೆಯನ ಮದುವೆಯನ್ನು ಮೊದಲೇ ನಿಶ್ಚಯಿಸಿ ರಾಜಕುಮಾರನು ಅಹಿಚ್ಛತ್ರವೆಂಬ ಊರಿಗೆ ಗೆಳೆಯರೊಡನೆ ಹೊರಟನು.

೧೨೦. ಗೆಳೆಯನೊಡನೆ ಆನೆಯೇರಿ ಸೈನ್ಯಸಮೇತನಾಗಿ ಹೋಗುತ್ತಾ ಸಾಯಂಕಾಲವಾದಾಗ ಇಕ್ಷುಮತೀ ತೀರಕ್ಕೆ ಬಂದು ಅಲ್ಲಿ ಶಿಬಿರ ಹೂಡಿದನು.

೧೨೧. ಅಲ್ಲಿ ಚಂದ್ರೋದಯದಲ್ಲಿ ಮಧುಪಾನ ಮಾಡಿ ಮಲಗಲು ಹೊರಟನು. ಆಗ ಅವನ ಸಾಕುತಾಯಿಯ ಒತ್ತಾಯದ ಮೇರೆಗೆ ಕಥೆ ಹೇಳಲಾರಂಭಿಸಿದನು.

---

ಭ್ರಾಮ್ಯತೋಪವನೇ ಜಾತು ದೃಷ್ಟಸ್ತೇನೈಕಪುತ್ರಕಃ ।
ವಣಿಜೋ ಬ್ರಹ್ಮದತ್ತಸ್ಯ ಸ್ವತುಲ್ಯವಿಭವಾಕೃತಿಃ ॥ ೧೧೫

ದೃಷ್ಟ್ವಾ ಚ ಸದ್ಯಃ ಸೋಽನೇನ ಸ್ವಯಂವರಸುಹೃತ್ಕೃತಃ ।
ತದೈವ ಚೈಕರೂಪೌ ತೌ ಜಾತೌ ರಾಜವಣಿಕ್ಸುತೌ ॥ ೧೧೬

ಸ್ಥಾತುಂ ನ ಶೇಕತುಃ ಕ್ಷಿಪ್ರಂ ತಾವನ್ಯೋನ್ಯಮದರ್ಶನಮ್ ।
ಆಶು ಬಧ್ನಾತಿ ಹಿ ಪ್ರೇಮ ಪ್ರಾಗ್ಜನ್ಮಾಂತರಸಂಸ್ತವಃ ॥ ೧೧೭

ನೋಪಭುಂಕ್ತೇ ಸ್ಮ ತಂ ಭೋಗಂ ರಾಜಪುತ್ರಃ ಕದಾಚನ ।
ವಣಿಕ್ಪುತ್ರಸ್ಯ ಯಸ್ತಸ್ಯ ನಾದಾವೇವೋಪಕಲ್ಪಿತಃ ॥ ೧೧೮

ಏಕದಾ ಸುಹೃದಸ್ತಸ್ಯ ನಿಶ್ಚಿತ್ಯೋದ್ವಾಹಮಾದಿತಃ ।
ಅಹಿಚ್ಛತ್ರಂ ವಿವಾಹಾಯ ಸ ಪ್ರತಸ್ಥೇ ನೃಪಾತ್ಮಜಃ ॥ ೧೧೯

ಮಿತ್ರೇಣ ತೇನ ಸಾಕಂ ಚ ಗಜಾರೂಢಃ ಸಸೈನಿಕಃ ।
ಗಚ್ಛನ್ನಿಕ್ಷುಮತೀತೀರಂ ಪ್ರಾಪ್ಯ ಸಾಯಂ ಸಮಾವಸತ್ ॥ ೧೨೦

ತತ್ರ ಚಂದ್ರೋದಯೇ ಪಾನಮಾಸೇವ್ಯ ಶಯನಂ ಶ್ರಿತಃ ।
ಅರ್ಥಿತೋ ನಿಜಯಾ ಧಾತ್ರ್ಯಾ ಕಥಾಂ ವಕ್ತುಂ ಪ್ರಚಕ್ರಮೇ ॥ ೧೨೧

೧೨. ಕಥೆ ಹೇಳುತ್ತಿದ್ದಾಗ ಆಯಾಸವಾದ್ದರಿಂದಲೂ ಮಧುಪಾನ ಮಾಡಿದ್ದರಿಂದಲೂ ನಿದ್ರೆ ಬಂದಿತು. ಸಾಕುತಾಯಿಯೂ ನಿದ್ರೆ ಮಾಡಿದಳು. ವ್ಯಾಪಾರಿಯ ಪುತ್ರನು ಮಾತ್ರ ಸ್ನೇಹನಿಷ್ಠೆಯಿಂದ ಎಚ್ಚರನಾಗಿದ್ದನು.

೧೩. ಎಲ್ಲರೂ ನಿದ್ರೆ ಮಾಡುತ್ತಿರಲು ಆಕಾಶದಲ್ಲಿ ಯಾರೋ ಸ್ತ್ರೀಯರು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತಿರುವುದು ಎಚ್ಚರವಾಗಿದ್ದ ವ್ಯಾಪಾರಿಯ ಪುತ್ರನಿಗೆ ಕೇಳಿಸಿತು.

---

ಉಪಕ್ರಾಂತಕಥೋ ಜಜ್ಞೇ ಶ್ರಾಂತೋ ಮತ್ತಶ್ಚ ನಿದ್ರಯಾ ।
ಧಾತ್ರೀ ಚ ತದ್ವತ್ಸೋऽಪ್ಯಾಸೀತ್ ಸ್ನೇಹಾಜ್ಜಾಗ್ರದ್ವಣಿಕ್ಸುತಃ ॥ ೧೨
ತತಃ ಸುಪ್ತೇಷು ಚಾನ್ಯೇಷು ಸ್ತ್ರೀಣಾಮಿವ ಮಿಥಃ ಕಥಾ ।
ಗಗನೇ ಶುಶ್ರುವೇ ತೇನ ವಣಿಕ್ಸುತೇನ ಜಾಗ್ರತಾ ॥ ೧೩

೧೪-೨೧. "ಈ ಪಾಪಿಯು ಕಥೆಯನ್ನು ಪೂರ್ತಿ ಹೇಳದಿದ್ದುದರಿಂದ ನಾನು ಶಾಪ ಹಾಕುತ್ತಿದ್ದೇನೆ. ಬೆಳಿಗ್ಗೆ ಈ ಹಾರವನ್ನು ಕಂಡು ಅವನು ಅದನ್ನು ಕೊರಳಿಗೆ ಹಾಕಿಕೊಂಡರೆ ತಕ್ಷಣವೇ ಸಾಯುತ್ತಾನೆ" ಎಂದು ಒಂದು ಅಶರೀರವಾಣಿಯು ಹೇಳಿ ಮುಗಿಸಿತು. ಮತ್ತೊಂದು ಆಕಾಶವಾಣಿಯು 'ಹಾರದಿಂದ ಸಾಯದಿದ್ದರೆ ಆ ಮಾವಿನ ಮರವನ್ನು ನೋಡುತ್ತಾನೆ ಹಾಗೂ ಅದರ ಹಣ್ಣುಗಳನ್ನು ಕೀಳುತ್ತಾನೆ. ಆಗ ಸಾಯುತ್ತಾನೆ' ಎಂದಿತು. ಮೂರನೆಯದು "ಇನ್ನೂ ಬದುಕಿದ್ದರೆ ಮದುವೆ ಮನೆಯನ್ನು ಪ್ರವೇಶಿಸುತ್ತಿದ್ದಂತೆಯೇ ಆ ಮನೆಯೇ ಅವನನ್ನು ಕೊಲ್ಲಲು ಅವನ ಬೆನ್ನ ಮೇಲೆ ಬೀಳುತ್ತದೆ' ಎಂದಿತು. ಹೀಗೆ ಹೇಳಿ ಅದು ಸುಮ್ಮನಾದಂತೆಯೇ ನಾಲ್ಕನೆಯ ಆಕಾಶವಾಣಿಯು 'ಇನ್ನೂ ಉಳಿದಿದ್ದರೆ ರಾತ್ರಿ ಮಲಗುವ ಮನೆಯಲ್ಲಿ ನೂರು ಬಾರಿ ಶೀನು ಬರುತ್ತದೆ. ಪ್ರತಿಯೊಂದು ಶೀನು ಬಂದಾಗಲೂ ಶತಾಯುಷಿಯಾಗು ಎಂದು ಯಾರೂ ಹೇಳದಿದ್ದರೆ ಆಗ ಸಾಯುತ್ತಾನೆ. ಇದನ್ನು ಕೇಳಿದವನು ಅವನನ್ನು ರಕ್ಷಿಸಲು ಅವನಿಗೆ ಹೇಳಿದರೆ ಅವನೂ ಸಾಯುತ್ತಾನೆ' ಎಂದು ಹೇಳಿ ಅಶರೀರವಾಣಿಯು ವಿರಮಿಸಿತು.

---

ಅನಾಖ್ಯಾಯ ಕಥಾಂ ಸುಪ್ತ ಪಾಪೋಽಯಂ ತಚ್ಛಪಾಮ್ಯಹಮ್ ।
ಪರಿದ್ರಕ್ಷ್ಯತ್ಯಸೌ ಹಾರಂ ಪ್ರಾತಸ್ತಂ ಚೇದ್ ಗ್ರಹೀಷ್ಯತಿ ॥ ೧೪
ಕಂಠಲಗ್ನೇನ ತೇನೈಷ ತತ್ಕ್ಷಣಂ ಮೃತ್ಯುಮಾಪ್ಸ್ಯತಿ ।
ಇತ್ಯುಕ್ತ್ವಾ ವಿರರಾಮೈಕಾ ದ್ವಿತೀಯಾ ಚ ತತೋಽಬ್ರವೀತ್ ॥ ೧೫
ಅತೋ ಯದ್ಯಯಮುತ್ತೀರ್ಣಸ್ತದ್ ದೃಕ್ಷ್ಯತ್ಯಾಮ್ರಪಾದಪಮ್ ।
ವಿಯೋಕ್ಷ್ಯತೇ ಫಲಾನ್ಯಸ್ಯ ತತಃ ಪ್ರಾಣೈರ್ವಿಮೋಕ್ಷ್ಯತೇ ॥ ೧೬
ಇತ್ಯುಕ್ತ್ವಾ ವ್ಯರಮತ್ಸಾಪಿ ತೃತೀಯಾಭಿದಧೇ ತತಃ ।
ಯದ್ಯೇತದಪಿ ತೀರ್ಣೋಽಯಂ ತದ್ವಿವಾಹಕೃತೇ ಗೃಹಮ್ ॥ ೧೭
ಪ್ರವಿಷ್ಟಸ್ಯೈತ್ತದೇವಾಸ್ಯ ಹಂತುಂ ಪೃಷ್ಠೇ ಪತಿಷ್ಯತಿ ।
ಉಕ್ತ್ವೇತಿ ನ್ಯವೃತತ್ಸಾಪಿ ಚತುರ್ಥೀ ವ್ಯಾಹರತ್ತತಃ ॥ ೧೮
ಅತೋಽಪಿ ಯದಿ ನಿಸ್ತೀರ್ಣಸ್ತನ್ನಕ್ತಂ ವಾಸವೇಶ್ಮನಿ ।
ಪ್ರವಿಷ್ಟಃ ಶತಕೃತ್ವೋಽಯಂ ಕ್ಷುತಂ ಸದ್ಯಃ ಕರಿಷ್ಯತಿ ॥ ೧೯
ಶತಕೃತ್ವೋಽಪಿ ಯದ್ಯಸ್ಯ ಜೀವೇತಿ ನ ವದಿಷ್ಯತಿ ।
ಕಶ್ಚಿದತ್ರ ತತಶ್ಚೈಷ ಮೃತ್ಯೋರ್ವಶಮುಪೈಷ್ಯತಿ ॥ ೨೦
ಯೇನ ಚೇದಂ ಶ್ರುತಂ ಸೋಽಸ್ಯ ರಕ್ಷಾರ್ಥಂ ಯದಿ ವಕ್ಷ್ಯತಿ ।
ತಸ್ಯಾಪಿ ಭವಿತಾ ಮೃತ್ಯುರಿತ್ಯುಕ್ತ್ವಾ ಸಾ ನ್ಯವರ್ತತ ॥ ೨೧

೧೩೨. ವ್ಯಾಪಾರಿಯ ಮಗನು ಆ ಕಠೋರವಾದ ವಾಣಿಯನ್ನು ಕೇಳಿ ರಾಜಕುಮಾರನ ಮೇಲೆ ಸ್ನೇಹದಿಂದ ಉದ್ವಿಗ್ನನಾಗಿ ಚಿಂತಿಸಿದನು.

೧೩೩-೧೩೪. ಕಥೆಯು ಪೂರ್ತಿಯಾಗದಿದ್ದರೆ ಹೋಗಲಿ. ಆದರೆ ಅದನ್ನು ಕುತೂಹಲದಿಂದ ಕೇಳಲು ಬಂದ ದೇವತೆಗಳು ಶಾಪಹಾಕಿದರಲ್ಲ! ರಾಜಕುಮಾರನು ಸತ್ತರೆ ನಾನು ಬದುಕಿದ್ದು ಏನು ಪ್ರಯೋಜನ ? ಆದ್ದರಿಂದ ನಾನು ಉಪಾಯದಿಂದ ನನ್ನ ಪ್ರಾಣಕ್ಕೆ ಸಮನಾದ ರಾಜಕುಮಾರನನ್ನು ಉಳಿಸಬೇಕು.

೧೩೫ ಈ ಘಟನೆಯನ್ನು ಅವನಿಗೆ ಹೇಳುವಂತಿಲ್ಲ. ಅದೇ ತರಹ ನನಗೂ ಯಾವ ತೊಂದರೆಯೂ ಆಗಬಾರದು. ಹೀಗೆಂದು ಯೋಚಿಸಿ ಆ ರಾತ್ರಿಯನ್ನು ಬಹಳ ಕಷ್ಟದಿಂದ ಕಳೆದನು.

೧೩೬ ಮಾರನೆಯ ದಿನ ಬೆಳಿಗ್ಗೆ ರಾಜಕುಮಾರನು ಹೊರಟಾಗ ದಾರಿಯಲ್ಲಿ ಒಂದು ಹಾರವು ಕಂಡಿತು. ಅವನು ಆ ಹಾರವನ್ನು ತೆಗೆದುಕೊಳ್ಳಲು ಇಚ್ಛಿಸಿದನು.

೧೩೭ ಆಗ ವ್ಯಾಪಾರಿಪುತ್ರನು "ಗೆಳೆಯ, ಹಾರವನ್ನು ತೆಗೆದುಕೊಳ್ಳಬೇಡ, ಇದು ಮಾಯೆ, ಇಲ್ಲವಾದರೆ ಸೈನಿಕರ ಕಣ್ಣಿಗೆ ಬೀಳದೇ ಇರುತ್ತಿತ್ತೇ."

೧೩೮. ಅದನ್ನು ಕೇಳಿ ಹಾರವನ್ನು ತೆಗೆದುಕೊಳ್ಳದೆ ಮುಂದಕ್ಕೆ ಹೋಗುತ್ತಾ ಮಾವಿನ ಮರವೊಂದನ್ನು ಕಂಡನು. ಅದರ ಹಣ್ಣುಗಳನ್ನು ತಿನ್ನಲು ಇಚ್ಛಿಸಿದನು.

---

ವಣಿಕ್ಸುತಶ್ಚ ತತ್ಸರ್ವಂ ಶ್ರುತ್ವಾ ನಿರ್ಘಾತದಾರುಣಮ್ ।
ಸ ತಸ್ಯ ರಾಜಪುತ್ರಸ್ಯ ಸ್ನೇಹೋದ್ವಿಗ್ನೋ ವ್ಯಚಿಂತಯತ್ ॥ ೧೩೨
ಉಪಕ್ರಾಂತಾಮನಾಖ್ಯಾತಾಂ ಧಿಕ್ಕಥಾಂ ಯದ್ಯಲಕ್ಷಿತಾಃ ।
ದೇವತಾಃ ಶ್ರೋತುಮಾಯಾತಾಃ ಶಪಂತ್ಯಸ್ತು ಕುತೂಹಲಾತ್ ॥ ೧೩೩
ತದೇತಸ್ಮಿನ್ ಮೃತೇ ರಾಜಸುತೇ ಕೋಽರ್ಥೋ ಮಮಾಸುಭಿಃ ।
ಅತೋಽಯಂ ರಕ್ಷಣೀಯೋ ಮೇ ಯುಕ್ತ್ಯಾ ಪ್ರಾಣಸಮಃ ಸುಹೃತ್ ॥
೧೩೪
ವೃತ್ತಾಂತೋಽಪಿ ನ ವಾಚ್ಯೋಽಸ್ಯ ಮಾ ಭೂದ್ದೋಷೋ ಮಮಾಸ್ಯತಃ ।
ಇತ್ಯಾಲೋಚ್ಯ ನಿಶಾಂ ನಿನ್ಯೇ ಸ ಕೃಚ್ಛ್ರೇಣ ವಣಿಕ್ಸುತಃ ॥ ೧೩೫
ರಾಜಪುತ್ರೋಽಪಿ ಸ ಪ್ರಾತಃ ಪ್ರಸ್ಥಿತಸ್ತತ್ಸುಖಿಃ ಪಥಿ ।
ದದರ್ಶ ಪುರತೋ ಹಾರಂ ತಮಾದಾತುಮಿಯೇಷ ಚ ॥ ೧೩೬
ತತೋಽಬ್ರವೀದ್ವಣಿಕ್ಪುತ್ರೋ ಹಾರಂ ಮಾ ಸ್ಮ ಗ್ರಹೀಃ ಸಖೇ ।
ಮಾಯೇಯಮನ್ಯಥಾ ನೈತೇ ಪಶ್ಯೇಯುಃ ಸೈನಿಕಾಃ ಕಥಮ್ ॥ ೧೩೭
ತಚ್ಛ್ರುತ್ವಾ ತಂ ಪರಿತ್ಯಜ್ಯ ಗಚ್ಛನ್ನಗ್ರೇ ದದರ್ಶ ಸಃ ।
ಆಮ್ರವೃಕ್ಷಂ ಫಲಾನ್ಯಸ್ಯ ಭೋಕ್ತುಂ ಚೈಚ್ಛನ್ನೃಪಾತ್ಮಜಃ ॥ ೧೩೮

೧೧೯. ವ್ಯಾಪಾರಿಯ ಪುತ್ರನು ಹಿಂದಿನಂತೆಯೇ ಬೇಡವೆಂದು ತಡೆದನು. ರಾಜಕುಮಾರನು ಬೇಸರಪಟ್ಟುಕೊಂಡು ಮಾವನ ಮನೆಗೆ ಹೋದನು.

೧೨೦. ಆದರೆ ಒಳಗೆ ಪ್ರವೇಶಿಸದಂತೆ ಬಾಗಿಲಿನಲ್ಲೇ ಗೆಳೆಯನು ತಡೆದನು. ಅಷ್ಟುಹೊತ್ತಿಗೆ ಮನೆಯು ಕುಸಿದು ಬಿತ್ತು.

೧೨೧–೧೨೩. ಅಲ್ಲಿಂದ ಹೇಗೋ ಪಾರಾಗಿ ರಾತ್ರಿ ಬೇರೆ ಮನೆಗೆ ರಾಜಪುತ್ರನು ಪತ್ನಿಯೊಡನೆ ವಾಸಕ್ಕೆ ಹೋದಾಗ ವ್ಯಾಪಾರಿಪುತ್ರನು ಅವನಿಗೆ ಕಾಣದಂತೆ ಅವಿತುಕೊಂಡನು. ರಾಜಕುಮಾರನಿಗೆ ಒಂದಾದಮೇಲೆ ಒಂದರಂತೆ ನೂರು ಸೀನು ಬಂದಿತು. ಪ್ರತಿಯೊಂದಕ್ಕೂ ದೀರ್ಘಾಯುವಾಗು ಎಂದು ವ್ಯಾಪಾರಿ ಪುತ್ರನು ಹೇಳಿ ಕೃತಾರ್ಥನಾಗಿ ಸಂತೋಷದಿಂದ ಹೊರಗೆ ಬಂದನು.

೧೨೪–೧೨೫. ತನ್ನ ಗೆಳೆಯನು ಹೊರಗೆ ಬರುತ್ತಿದ್ದುದನ್ನು ಪತ್ನೀಸಮೇತನಾಗಿ ನೋಡಿದ ರಾಜಕುಮಾರನು ಹೊಟ್ಟೆಕಿಚ್ಚಿನಿಂದ ಸ್ನೇಹವನ್ನು ಮರೆತು ಬಾಗಿಲು ಕಾಯುವವರನ್ನು ಕರೆದು "ಈ ದುಷ್ಟನು ರಹಸ್ಯದಲ್ಲಿ ನನ್ನ ಅಂತಃಪುರವನ್ನು ಪ್ರವೇಶಿಸಿದ್ದಾನೆ. ಬೆಳಿಗ್ಗೆ ಶಿಕ್ಷಿಸುವವರೆಗೆ ಇವನನ್ನು ಹಿಡಿದಿಟ್ಟುಕೊಳ್ಳಿ" ಎಂದನು.

---

ವಣಿಕ್ಪುತ್ರೇಣ ಚ ಪ್ರಾಗ್ವತ್ ತತೋಽಪಿ ಸ ನಿವಾರಿತಃ ।
ಸಾಂತಃಖೇದಃ ಶನೈರ್ಗಚ್ಛನ್ ಪ್ರಾಪ ಶ್ವಶುರವೇಶ್ಮ ತತ್ ॥ ೧೧೯
ತತ್ರೋದ್ವಾಹಕೃತೇ ವೇಶ್ಮ ವಿಶನ್ ದ್ವಾರಾನ್ನಿವರ್ತಿತಃ ।
ತೇನೈವ ಸಖ್ಯಾ ಯಾವಚ್ಚ ತಾವತ್ತತ್ಪತಿತಂ ಗೃಹಮ್ ॥ ೧೨೦
ತತಃ ಕಥಂಚಿದುತ್ತೀರ್ಣಃ ಕಿಂಚಿತ್ಸ್ವಸ್ತ್ಯಯೋ ನಿಶಿ ।
ನಿವಾಸಕಂ ವಿವೇಶಾನ್ಯಂ ರಾಜಪುತ್ರೋ ವಧೂಸಖಃ ॥ ೧೨೧
ತತ್ರ ತಸ್ಮಿನ್ ವಣಿಕ್ಪುತ್ರೇ ಪ್ರವಿಶ್ಯಾಲಕ್ಷಿತಸ್ಥಿತೇ ।
ಶತಕೃತ್ವಃ ಕ್ಷುತಂ ಚಕ್ರೇ ಶಯನೀಯಾಶ್ರಿತೋಽಥ ಸಃ ॥ ೧೨೨
ಶತಕೃತ್ವೋಽಪಿ ತಸ್ಯಾತ್ರ ನೀಚೈರ್ಜೀವೇತ್ಯುದೀರ್ಯ ಸಃ ।
ಕೃತಕಾರ್ಯೋ ವಣಿಕ್ಪುತ್ರೋ ಹೃಷ್ಟಃ ಸ್ವೈರಂ ಬಹಿರ್ಯಯೌ ॥ ೧೨೩
ನಿರ್ಯಾಂತಂ ತಮಪಶ್ಯಚ್ಚ ರಾಜಪುತ್ರೋ ವಧೂಸಖಃ ।
ಈರ್ಷ್ಯಾವಿಸ್ಮೃತತತ್ಸ್ನೇಹಃ ಕ್ರುದ್ಧೋ ದ್ವಾಃಸ್ಥಾನುವಾಚ ಚ ॥ ೧೨೪
ಪಾಪಾತ್ಮಾಯಂ ರಹಃಸ್ಥಸ್ಯ ಪ್ರವಿಷ್ಟೋಽಂತಃ ಪುರಂ ಮಮ ।
ತದ್ಬದ್ಧ್ವಾ ಸ್ಥಾಪ್ಯತಾಂ ಯಾವತ್ ಪ್ರಭಾತೇಽಸೌ ನಿಗೃಹ್ಯತೇ ॥ ೧೨೫

೧೪೬. ಭಟರು ಅವನನ್ನು ಬಂಧಿಸಿ ಕರೆದುಕೊಂಡು ಹೋದರು. ಆ ರಾತ್ರಿ ವ್ಯಾಪಾರಿ ಪುತ್ರನು ಬಂಧನದಲ್ಲಿ ಕಳೆದನು. ಬೆಳಿಗ್ಗೆ ಗಲ್ಲಿಗೇರಿಸಲು ಒಯ್ಯುತ್ತಿದ್ದಾಗ ಅವನು ಅವರಿಗೆ ಹೇಳಿದನು.

೧೪೭. 'ಮೊದಲು ನನ್ನನ್ನು ರಾಜಕುಮಾರನ ಬಳಿಗೆ ಕರೆದುಕೊಂಡು ಹೋಗಿ. ಅವನಿಗೆ ವಿಷಯವನ್ನು ತಿಳಿಸುತ್ತೇನೆ. ಆಮೇಲೆ ನನ್ನ ವಧೆ ಮಾಡಿ' ಎಂದನು.

೧೪೮. ಅವನ ಮಾತನ್ನು ಕೇಳಿ ಅವರು ಅದನ್ನು ರಾಜಕುಮಾರನಿಗೆ ಹೇಳಿದರು. ಮಂತ್ರಿಗಳ ಮತ್ತಿತರರ ಮಾತಿನಂತೆ ಅವನು ವ್ಯಾಪಾರಿಪುತ್ರನನ್ನು ಕರೆತರಲು ಆದೇಶಿಸಿದನು.

೧೪೯-೧೫೦. ಅಲ್ಲಿಗೆ ಬಂದ ಅವನು ನಡೆದ ವೃತ್ತಾಂತವನ್ನೆಲ್ಲ ರಾಜಕುಮಾರನಿಗೆ ತಿಳಿಸಿದನು. ಮನೆಯು ಬಿದ್ದುದರಿಂದ ಅವನ ಮಾತಲ್ಲಿ ನಂಬಿಕೆ ಉಂಟಾಗಿ ಸಂತೋಷಗೊಂಡ ರಾಜಕುಮಾರನು ಪತ್ನೀಸಹಿತನಾಗಿ ಗೆಳೆಯನನ್ನು ಕರೆದುಕೊಂಡು ತನ್ನ ಊರಿಗೆ ಬಂದನು.

೧೫೧. ಆ ವ್ಯಾಪಾರಿಯ ಪುತ್ರನೂ ಸಹ ಮದುವೆ ಮಾಡಿಕೊಂಡು ಸುಖವಾಗಿದ್ದನು.

---

ತದ್ಬುದ್ಧ್ವಾ ರಕ್ಷಿಭಿರ್ಬದ್ಧೋ ನಿಶಾಂ ನಿನ್ಯೇ ವಣಿಕ್ಸುತಃ ।
ಪ್ರಾತರ್ವಧ್ಯಭುವಂ ತೈಶ್ಚ ನೀಯಮಾನೋಽಬ್ರವೀತ್ಸ ತಾನ್ ॥ ೧೪೬
ಆದೌ ನಯತ ಮಾಂ ತಾವತ್ ರಾಜಪುತ್ರಾಂತಿಕಂ ಯತಃ ।
ವಕ್ಷ್ಯಾಮಿ ಕಾರಣಂ ಕಿಂಚಿತ್ ತತಃ ಕುರುತ ಮೇ ವಧಮ್ ॥ ೧೪೭
ಇತ್ಯುಕ್ತೈಸ್ತೇನ ತೈರ್ಗತ್ವಾ ವಿಜ್ಞಪ್ತಃ ಸ ನೃಪಾತ್ಮಜಃ ।
ಸಚಿವೈರ್ಬೋಧಿತಶ್ಚಾನ್ಯೈಸ್ತಸ್ಯಾನಯನಮಾದಿಶತ್ ॥ ೧೪೮
ಆನೀತಃ ಸೋಽಬ್ರವೀತ್ತಸ್ಮೈ ವೃತ್ತಾಂತಂ ರಾಜಸೂನವೇ ।
ಪ್ರತ್ಯಯಾತ್ ಗೃಹಪಾತೋತ್ಥಾತ್ ಮೇನೇ ಸತ್ಯಂ ಚ ಸೋಽಪಿ ತತ್ ॥ ೧೪೯
ತತಸ್ತುಷ್ಟಃ ಸಮಂ ಸಖ್ಯಾ ವಧಮುಕ್ತೇನ ತೇನ ಸಃ ।
ಆಯಯೌ ರಾಜತನಯಃ ಕೃತದಾರೋ ನಿಜಾಂ ಪುರೀಮ್ ॥ ೧೫೦
ತತ್ರ ಸೋಽಪಿ ಸುಹೃತ್ತಸ್ಯ ಕೃತದಾರೋ ವಣಿಕ್ಸುತಃ ।
ಸ್ತೂಯಮಾನಗುಣಃ ಸರ್ವೈರ್ಜನೈರಾಸೀದ್ಯಥಾ ಸುಖಮ್ ॥ ೧೫೧

೧೫೨–೧೫೩. ಹೀಗೆ ರಾಜಕುಮಾರರು ನಿಯಂತ್ರಣವೇ ಇಲ್ಲದೆ ತಮ್ಮನ್ನು ನಿಯಂತ್ರಣ ಮಾಡುವವನನ್ನೇ ಧ್ವಂಸಮಾಡಿಬಿಡುವ ಮದದಾನೆಗಳಂತೆ, ಒಳ್ಳೆಯ ಮಾತನ್ನು ಕೇಳುವುದಿಲ್ಲ. ನಗುನಗುತ್ತಲೇ ಪ್ರಾಣವನ್ನೇ ತೆಗೆಯುವ ಬೇತಾಳಗಳಂತಹ ಅವರೊಡನೆ ಎಂತಹ ಸ್ನೇಹ ? ರಾಜಕುಮಾರಿಯೇ, ನನ್ನ ಸ್ನೇಹವನ್ನು ಬಿಡಬೇಡ.

೧೫೪. ಇಂತಹ ಕಥೆಯನ್ನು ಸೋಮಪ್ರಭೆಯಿಂದ ಕೇಳಿದ ಕಳಿಂಗಸೇನೆಯು ಆತ್ಮೀಯತೆಯಿಂದ ಅವಳಿಗೆ ಹೇಳಿದಳು.

೧೫೫. "ಗೆಳತಿ, ಇವರು ಪಿಶಾಚರಲ್ಲ, ರಾಜಕುಮಾರರು. ಒಂದು ಪಿಶಾಚಿಯ ಕಥೆಯನ್ನು ಹೇಳುತ್ತೇನೆ ಕೇಳು:

೧೫೬. ಹಿಂದೆ ಯಜ್ಞಸ್ಥಳ ಎಂಬ ಅಗ್ರಹಾರದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಬಡವನಾಗಿದ್ದ ಅವನು ಸೌದೆ ತರಲು ಕಾಡಿಗೆ ಹೋದನು.

೧೫೭–೧೫೮. ಅಲ್ಲಿ ಕೊಡಲಿಯಿಂದ ಸೌದೆಯನ್ನು ಕಡಿಯುತ್ತಿದ್ದಾಗ ಅದು ಅವನ ತೊಡೆಯನ್ನು ಸೀಳಿ ಒಳಹೊಕ್ಕಿತು. ರಕ್ತಸ್ರಾವವಾಗಿ ಅವನು ಮೂರ್ಛೆಹೋದಾಗ ಯಾವನೋ ಒಬ್ಬ ಪುರುಷನು ಅವನನ್ನು ಗುರುತಿಸಿ ಎತ್ತಿಕೊಂಡು ಮನೆಗೆ ಒಯ್ದನು.

---

ಏವಮುಚ್ಛೃಂಖಲಾ ಭೂತ್ವಾ ಸ್ವನಿಯಂತೃಪ್ರಮಾಥಿನಃ ।
ರಾಜಪುತ್ರಾ ನ ಮನ್ಯಂತೇ ಹಿತಂ ಮತ್ತಾ ಗಜಾ ಇವ ॥ ೧೫೨
ವೇತಾಲೈಸ್ತೈಶ್ಚ ಕಾ ಮೈತ್ರೀ ಯೇ ವಿಹಸ್ಯ ಹರಂತ್ಯಸೂನ್ ।
ತದ್ರಾಜಪುತ್ರಿ ಸಖ್ಯಂ ಮೇ ಮಾ ಸ್ಮ ವ್ಯಭಿಚರಃ ಸದಾ ॥ ೧೫೩
ಇತಿ ಶ್ರುತ್ವಾ ಕಥಾಮೇತಾಂ ಹರ್ಮ್ಯೇ ಸೋಮಪ್ರಭಾಮುಖಾತ್ ।
ಕಲಿಂಗಸೇನಾ ಸಸ್ನೇಹಂ ತಾಂ ಸಖೀಂ ಪ್ರತ್ಯಭಾಷತ ॥ ೧೫೪
ಏತೇ ಪಿಶಾಚಾ ನ ತ್ವೇತೇ ರಾಜಪುತ್ರಾ ಮತಾಃ ಸಖಿ ।
ಪಿಶಾಚದುರ್ಗ್ರಹಕಥಾಮಹಮಾಖ್ಯಾಮಿ ತೇ ಶೃಣು ॥ ೧೫೫
ಯಜ್ಞಸ್ಥಲಾಖ್ಯೇ ಕೋಽಪ್ಯಾಸೀದಗ್ರಹಾರೇ ಪುರಾ ದ್ವಿಜಃ ।
ಸ ಜಾತು ದುರ್ಗತಃ ಕಾಷ್ಠಾನ್ಯಾಹರ್ತುಮಟವೀಂ ಯಯೌ ॥ ೧೫೬
ತತ್ರ ಕಾಷ್ಠಂ ಕುಠಾರೇಣ ಪಾಟ್ಯಮಾನಂ ವಿಧೇರ್ವಶಾತ್ ।
ಆಪತ್ಯ ತಸ್ಯ ಜಂಘಾಯಾಂ ಭಿತ್ತ್ವಾಂತಃ ಪ್ರವಿವೇಶ ತತ್ ॥ ೧೫೭
ತತಃ ಸ ಪ್ರಸ್ರವದ್ರಕ್ತೋ ದೃಷ್ಟ್ವಾ ಕೇನಾಪಿ ಮೂರ್ಛಿತಃ ।
ಉತ್ಕ್ಷಿಪ್ಯಾನೀಯತ ಗೃಹಂ ಪುಂಸಾ ಪ್ರತ್ಯಭಿಜಾನತಾ ॥ ೧೫೮

೧೪೯. ಗಾಬರಿಗೊಂಡ ಅವನ ಪತ್ನಿಯು ಗಾಯವನ್ನು ತೊಳೆದು ತೊಡೆಗೆ ಒಂದು ಪಟ್ಟಿಯನ್ನು ಕಟ್ಟಿದಳು.

೧೫೦. ಔಷಧೋಪಚಾರ ಮಾಡುತ್ತಿದ್ದರೂ ಗಾಯವು ವಾಸಿಯಾಗದೆ ನಾಡಿಹುಣ್ಣಾಗಿ ಬೆಳೆಯಿತು.

೧೫೧. ಅದರಿಂದ ಆ ಬಡವನು ಖಿನ್ನನಾಗಿ ಸಾಯುವ ಸ್ಥಿತಿಗೆ ಬಂದನು. ಆಗ ಅವನ ಗೆಳೆಯನಾದ ಒಬ್ಬ ಬ್ರಾಹ್ಮಣನು ರಹಸ್ಯವಾಗಿ ಅವನಿಗೆ ಹೇಳಿದನು.

೧೫೨. "'ಗೆಳೆಯನೆ, ಯಜ್ಞದತ್ತ ಎಂಬುವನು ಬಹಳ ದರಿದ್ರನಾಗಿದ್ದು ಪಿಶಾಚಿಯನ್ನು ವಶಮಾಡಿಕೊಂಡು ಹಣವನ್ನು ಪಡೆದು ಸುಖಿಯಾದನು.

೧೫೩. ಅದನ್ನು ಸಾಧಿಸುವ ರೀತಿಯನ್ನು ಅವನು ನನಗೂ ಹೇಳಿದ್ದಾನೆ. ನೀನೂ ಕೂಡ ಪಿಶಾಚಿಯನ್ನು ವಶಪಡಿಸಿಕೊ. ಅದರಿಂದ ನಿನ್ನ ಗಾಯ ವಾಸಿಯಾಗುವುದು.'

೧೫೪-೧೫೬ ಹೀಗೆ ಹೇಳಿ ಮಂತ್ರವನ್ನು ಬೋಧಿಸಿ ಅದರ ಕ್ರಿಯೆಯನ್ನೂ ಹೇಳಿಕೊಟ್ಟನು. "ಬೆಳಗಿನ ಜಾವ ಎದ್ದು ಆಚಮನ ಮಾಡದೆ ಜುಟ್ಟನ್ನು ಬಿಚ್ಚಿ ದಿಗಂಬರನಾಗಿ ಎರಡು ಮುಷ್ಟಿ ಅಕ್ಕಿಯನ್ನು ಎರಡು ಕೈಗಳಲ್ಲಿ ಹಿಡಿದುಕೊಂಡು ಮೌನವಾಗಿ ಹೋಗಿ ಚೌಕದಲ್ಲಿ ಅದನ್ನು ಹಾಕಿ ಹಿಂತಿರುಗಿ ನೋಡದೆ ಬಾ.

---

ತತ್ರ ವಿಹ್ವಲಯಾ ಪತ್ನ್ಯಾ ತಸ್ಯ ಪ್ರಕ್ಷಾಲ್ಯ ಶೋಣಿತಮ್ ।
ಆಶ್ವಾಸ್ಯ ತಸ್ಯ ಜಂಘಾಯಾಂ ನಿಬದ್ಧೋ ವ್ರಣಪಟ್ಟಕಃ ॥ ೧೪೯
ತತಶ್ಚಿಕಿತ್ಸ್ಯಮಾನಃ ಸನ್ ವ್ರಣಸ್ತಸ್ಯ ದಿನೇ ದಿನೇ ।
ನ ಪರಂ ನ ರುರೋಹೈವ ಯಾವನ್ನಾಡೀತ್ವಮಾಯಯೌ॥ ೧೫೦
ತತೋ ನಾಡೀವ್ರಣಾತ್ಖಿನ್ನೋ ದರಿದ್ರೋ ಮರಣೋದ್ಯತಃ ।
ಅಭ್ಯೇತ್ಯ ಸಖ್ಯಾ ವಿಪ್ರೇಣ ಕೇನಾಪಿ ಜಗದೇ ರಹಃ ॥ ೧೫೧
ಸಖಾ ಮೇ ಯಜ್ಞದತ್ತಾಖ್ಯಶ್ಚಿರಂ ಭೂತ್ವಾತಿದುರ್ಗತಃ ।
ಪಿಶಾಚಸಾಧನಂ ಕೃತ್ವಾ ಧನಂ ಪ್ರಾಪ್ಯ ಸುಖೀ ಸ್ಥಿತಃ ॥ ೧೫೨
ತಚ್ಚ ತತ್ಸಾಧನಂ ತೇನ ಮಮಾಪ್ಯುಕ್ತಂ ತ್ವಮಪ್ಯತಃ ।
ಪಿಶಾಚಂ ಸಾಧಯ ಸಖೇ ಸ ತೇ ರೋಪಯಿತಾ ವ್ರಣಮ್ ॥ ೧೫೩
ಇತ್ಯುಕ್ತ್ವಾಖ್ಯಾತಮಂತ್ರೋಽಸಾವುವಾಚಾಸ್ಯ ಕ್ರಿಯಾಮಿಮಾಮ್ ।
ಉತ್ಥಾಯ ಪಶ್ಚಿಮೇ ಯಾಮೇ ಮುಕ್ತಕೇಶೋ ದಿಗಂಬರಃ ॥ ೧೫೪
ಅನಾಚಾಂತಶ್ಚ ಮುಷ್ಟೀ ದ್ವೌ ತಂಡುಲಾನಾಂ ಯಥಾಕ್ಷಮಮ್ ।
ದ್ವಾಭ್ಯಾಮಾದಾಯ ಹಸ್ತಾಭ್ಯಾಂ ಜಪನ್ ಗಚ್ಛೇಶ್ಚತುಷ್ಪಥಮ್ ॥ ೧೫೫
ತತ್ರ ತಂಡುಲಮುಷ್ಟೀ ದ್ವೌ ಸ್ಥಾಪಯಿತ್ವಾ ತತಃ ಸಖೇ ।
ಮೌನೇನೈವ ತ್ವಮಾಗಚ್ಛೇಃ ಮಾ ವೀಕ್ಷಿಷ್ಠಾಶ್ಚ ಪೃಷ್ಠತಃ ॥ ೧೫೬

೧೬೭. ಪಿಶಾಚಿಯು ಪ್ರತ್ಯಕ್ಷವಾಗಿ ತಾನು ಆ ಗಾಯವನ್ನು ವಾಸಿ ಮಾಡುತ್ತೇನೆ ಎಂದು ಹೇಳುವವರೆಗೆ ಹೀಗೆ ಮಾಡುತ್ತಿರು.

೧೬೮. ಆಮೇಲೆ ಅದನ್ನು ನೀನು ಅಭಿನಂದಿಸು. ಅದು ನಿನ್ನ ರೋಗವನ್ನು ವಾಸಿಮಾಡುವುದು.' ಗೆಳೆಯನು ಹೇಳಿದಂತೆಯೇ ಆ ಬ್ರಾಹ್ಮಣನು ಮಾಡಿದನು.

೧೬೯. ಅನಂತರ ಪಿಶಾಚವು ಆ ನಾಡೀಹುಣ್ಣಿಗೆ ಮಹೌಷಧವನ್ನು ಹಿಮಾಲಯದಿಂದ ತಂದು ಹುಣ್ಣನ್ನು ವಾಸಿಮಾಡಿತು.

೧೭೦. ಆದರೆ ಸಂತೋಷಗೊಂಡ ಆ ಬ್ರಾಹ್ಮಣನನ್ನು ಅದು ಬಿಡಲಿಲ್ಲ. "ನನಗೆ ಎರಡನೇ ಹುಣ್ಣನ್ನು ಕೊಡು ಅದನ್ನೂ ವಾಸಿಮಾಡುತ್ತೇನೆ.

೧೭೧-೧೭೨. ಇಲ್ಲದೇ ಹೋದರೆ ನಿನಗೆ ತೊಂದರೆ ಕೊಟ್ಟು ಸಂಹರಿಸುತ್ತೇನೆ" ಎಂದಿತು. ಅದನ್ನು ಕೇಳಿ ಭಯಗೊಂಡ ಬ್ರಾಹ್ಮಣನು ಅದರಿಂದ ಬಿಡಿಸಿಕೊಂಡರೆ ಸಾಕು ಎನ್ನುತ್ತಾ ಎರಡನೇ ವ್ರಣವನ್ನು ಕೊಡಲು ಏಳು ದಿನಗಳ ವಾಯಿದೆಯನ್ನು ಬೇಡಿದನು. ಆ ಪಿಶಾಚದಿಂದ ಬಿಡುಗಡೆ ಹೊಂದಿದ ಬ್ರಾಹ್ಮಣನು ಬದುಕಿನಲ್ಲಿ ಹತಾಶನಾದನು.

೧೭೩. ಇಷ್ಟು ಹೇಳಿ ಮುಂದಿನ ಕಥೆಯು ಅಶ್ಲೀಲವೆಂದು ನಾಚಿಕೆಪಟ್ಟುಕೊಂಡ ಕಳಿಂಗ ಸೇನೆಯು ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಸೋಮಪ್ರಭೆಗೆ ಹೇಳಿದಳು.

---

ಏವಂ ಕುರು ಸದಾ ಯಾವತ್ ಪಿಶಾಚೋ ವ್ಯಕ್ತತಾಂ ಗತಃ ।
ಅಹಂ ಹಿ ಹನ್ಮಿ ತೇ ವ್ಯಾಧಿಮಿತಿ ತ್ವಾಂ ವಕ್ಷ್ಯತಿ ಸ್ವಯಮ್ ॥ ೧೬೭
ತತೋಽಭಿನಂದೇಸ್ತಂ ಸೋಽಥ ತವ ರೋಗಂ ಹರಿಷ್ಯತಿ ।
ಇತ್ಯುಕ್ತಸ್ತೇನ ಮಿತ್ರೇಣ ಸ ದ್ವಿಜಸ್ತತ್ತಥಾಕರೋತ್ ॥ ೧೬೮
ತತಃ ಸಿದ್ಧಃ ಪಿಶಾಚಃ ಸಃ ತಸ್ಯಾರ್ತಸ್ಯ ಮಹೌಷಧೀಃ ।
ಹಿಮಾಚಲೇಂದ್ರಾದಾನೀಯ ರೋಪಯಾಮಾಸ ತಂ ವ್ರಣಮ್ ॥ ೧೬೯
ಜಗಾದ ಚ ಪ್ರಹೃಷ್ಟಂ ತಂ ಸೋಽಥ ಲಗ್ನಗ್ರಹೋ ದ್ವಿಜಮ್ ।
ದೇಹಿ ವ್ರಣಂ ದ್ವಿತೀಯಂ ಮೇ ಯಾವತ್ತಂ ರೋಪಯಾಮ್ಯಹಮ್ ॥ ೧೭೦
ನ ಚೇತ್ ಸೃಜಾಮ್ಯನರ್ಥಂ ತೇ ಶರೀರಂ ಸಂಹರಾಮಿ ವಾ ।
ತತ್ ಶ್ರುತ್ವಾ ಸ ದ್ವಿಜೋ ಭೀತಃ ಸದ್ಯೋಮುಕ್ತ್ಯೈ ತಮಭ್ಯಧಾತ್ ॥ ೧೭೧
ವ್ರಣಂ ದ್ವಿತೀಯಂ ದಾಸ್ಯಾಮಿ ಸಪ್ತಭಿಸ್ತೇ ದಿನೈರಿತಿ ।
ತತಸ್ತೇನೋಜ್ಝಿತಃ ಸೋಽಭೂನ್ನಿರಾಶೋ ಜೀವಿತೇ ದ್ವಿಜಃ ॥ ೧೭೨
ಇತ್ಯುಕ್ತ್ವಾ ವಿರತಾ ಮಧ್ಯಾದಶ್ಲೀಲಾಖ್ಯಾನಲಜ್ಜಯಾ ।
ಕಲಿಂಗಸೇನಾ ಭೂಯಃ ಸಾವಾದೀತ್ ಸೋಮಪ್ರಭಾಮಿದಮ್ ॥ ೧೭೩

೧೭೪-೧೭೫. ಆ ಮೇಲೆ ಬೇರೆ ವ್ರಣ (ಹುಣ್ಣು) ಸಿಗದೆ ಆತಂಕಗೊಂಡಿದ್ದ ಬ್ರಾಹ್ಮಣನನ್ನು ನೋಡಿ ಪ್ರಶ್ನಿಸಿದ ಅವನ ವಿಧವೆಯಾದ ಮಗಳು ""ನಾನು ಆ ಪಿಶಾಚವನ್ನು ವಂಚಿಸುತ್ತೇನೆ. ನೀನು ಅದರ ಹತ್ತಿರಹೋಗಿ ನನ್ನ ಮಗಳಿಗೆ ವ್ರಣ ಉಂಟಾಗಿದೆ, ವಾಸಿಮಾಡು" ಎಂದು ಅದಕ್ಕೆ ಹೇಳು ಎಂದಳು.

೧೭೬. ಅದನ್ನು ಕೇಳಿ ಹರ್ಷಗೊಂಡ ಆ ಬ್ರಾಹ್ಮಣನು ಪಿಶಾಚದ ಹತ್ತಿರ ಹೋಗಿ ಹಾಗೇ ಹೇಳಿ ಅದನ್ನು ತನ್ನ ಮಗಳ ಹತ್ತಿರ ಕರೆದುಕೊಂಡು ಹೋದನು.

೧೮೩. ಅವಳು ಹೇಳಿದಂತೆ ಮಾಡಲಾಗದೆ ಪಿಶಾಚವು ಓಡಿಹೋಯಿತು.[1]

---

ತತೋ ವ್ರಣಾಂತರಾಲಾಭಾದಾರ್ತಂ ವಿಪ್ರಮುವಾಚ ತಮ್ ।
ದೃಷ್ಟ್ವಾ ಪೃಷ್ಟ್ವಾ ಚ ದುಹಿತಾ ವಿದಗ್ಧಾ ಮೃತಭರ್ತೃಕಾ ॥ ೧೭೪
ವಂಚಯೇಽಹಂ ಪಿಶಾಚಂ ತಂ ಗಚ್ಛ ತ್ವಂ ಬ್ರೂಹಿ ತಂ ಪುನಃ ।
ನಾಡೀವ್ರಣೋ ಮದ್ದುಹಿತುರ್ಭವತಾ ರೋಪ್ಯತಾಮಿತಿ ॥ ೧೭೫
ತಚ್ಛ್ರುತ್ವಾ ಮುದಿತೋ ಗತ್ವಾ ತಥೈವೋಕ್ತ್ವಾ ಚ ಸ ದ್ವಿಜಃ ।
ಅನೈಷೀದ್ದುಹಿತುಸ್ತಸ್ಯಾಃ ಪಿಶಾಚಂ ತಂ ತತೋಽಂತಿಕಮ್ ॥ ೧೭೬
ಸಾ ಚ ತಸ್ಯ ಪಿಶಾಚಸ್ಯ ವರಾಂಗಂ ಸ್ವಮದರ್ಶಯತ್ ।
ರೋಪಯೇಮಂ ವ್ರಣಂ ಭದ್ರ ಮಮೇತಿ ಬ್ರುವತೀ ರಹಃ ॥ ೧೭೭
ಸ ಚ ಮೂಢಃ ಪಿಶಾಚೋಽಸ್ಯಾಃ ವರಾಂಗೇ ಸತತಂ ದದೌ ।
ಪಿಂಡೀಲೇಪಾದಿ ನ ತ್ವಾಸೀತ್ಸ ತಂ ರೋಪಯಿತುಂ ಕ್ಷಮಃ ॥ ೧೭೮
ದಿನೈಶ್ಚ ಖಿನ್ನಸ್ತಸ್ಯಾಃ ಸ ಕೃತ್ವಾ ಜಂಘೇ ನಿಜಾಂಸಯೋಃ ।
ಕಿಂಸ್ವಿನ್ನ ರೋಹತೀತ್ಯೇವಂ ತದ್ವರಾಂಗಂ ವ್ಯಲೋಕಯತ್ ॥ ೧೭೯
ಯಾವದ್ ದ್ವಿತೀಯಂ ತಸ್ಯಾಧಃ ಸ ಪಾಯುವ್ರಣಮೈಕ್ಷತ ।
ತಂ ದೃಷ್ಟ್ವೈವ ಚ ಸಂಭ್ರಾಂತಃ ಸ ಪಿಶಾಚೋ ವ್ಯಚಿಂತಯತ್ ॥ ೧೮೦
ಏಕೋ ನ ರೋಪಿತೋ ಯಾವದುತ್ಪನ್ನೋಽಯಂ ವ್ರಣೋಽಪರಃ ।
ಸತ್ಯಃ ಪ್ರವಾದೋ ಯತ್ ಛಿದ್ರೇಷ್ವನರ್ಥಾ ಯಾಂತಿ ಭೂರಿತಾಮ್ ॥ ೧೮೧
ಪ್ರಭವಂತಿ ಯತೋ ಲೋಕಾಃ ಪ್ರಲಯಂ ಯಾಂತಿ ಯೇನ ಚ ।
ಸಂಸಾರವರ್ತ್ಮ ವಿವೃತಂ ಕಃ ಪಿಧಾತುಂ ತದೀಶ್ವರಃ ॥ ೧೮೨
ಇತ್ಯಾಲೋಚ್ಯ ವಿರುದ್ಧಾರ್ಥಸಿದ್ಧ್ಯಾ ಬಂಧನಶಂಕಯಾ ।
ಸ ಪಿಶಾಚಸ್ತತೋ ಮೂರ್ಖಃ ಪಲಾಯ್ಯಾದರ್ಶನಂ ಯಯೌ ॥ ೧೮೩

---

1 ೧೭೭ರಿಂದ ೧೮೩ರವರೆಗಿನ ಶ್ಲೋಕಗಳ ಕಥೆಯು ಉಚಿತವಲ್ಲ. ಆದ್ದರಿಂದ ಆ ಭಾಗವನ್ನು ಅನುವಾದ ಮಾಡದೆ ಕೈ ಬಿಡಲಾಗಿದೆ.

೧೮೪. ಹೀಗೆ ಅವಳು ಪಿಶಾಚವನ್ನು ವಂಚಿಸಿ ತಂದೆಯನ್ನು ಬಿಡಿಸಿದಳು. ತಂದೆಯು ರೋಗಮುಕ್ತನಾಗಿ ಸುಖವಾಗಿದ್ದನು.

೧೮೫. ಹೀಗೆ ರಾಜಪುತ್ರರು ಪಿಶಾಚಗಳಂತೆ ಅನರ್ಥ ಮಾಡುವವರಾದರೂ ಸಹ ಅವರನ್ನು ಬುದ್ಧಿಹೇಳಿ ಸರಿಪಡಿಸಬಹುದು.

೧೮೬. ಕುಲೀನರಾದ ರಾಜಕುಮಾರಿಯರಾದರೋ ಹೀಗೆ ಇರುವುದಿಲ್ಲ. ಆದ್ದರಿಂದ ಗೆಳತಿ, ನನ್ನ ಬಗ್ಗೆ ತಪ್ಪಾಗಿ ತಿಳಿಯಬೇಡ"

೧೮೭-೧೮೮. ಎಂದಳು. ಈ ರೀತಿಯಾಗಿ ಕಳಿಂಗಸೇನೆಯಿಂದ ಹಾಸ್ಯಮಯವಾಗಿ ವಿಚಿತ್ರವಾಗಿ ಮಧುರವಾಗಿದ್ದ ಕಥೆಯನ್ನು ಕೇಳಿದ ಸೋಮಪ್ರಭೆಯು ಸಂತೋಷಗೊಂಡಳು. 'ನನ್ನ ಮನೆ ಇಲ್ಲಿಂದ ಅರವತ್ತು ಯೋಜನಗಳ ದೂರದಲ್ಲಿ ಇದೆ. ಹಗಲು ಸರಿಯುತ್ತಿದೆ. ನಾನು ಬಹಳ ಹೊತ್ತಿನಿಂದ ಇಲ್ಲಿ ಇದ್ದೇನೆ. ಇನ್ನು ಹೊರಡುತ್ತೇನೆ' ಎಂದಳು.

೧೮೯. ಅನಂತರ ಸೂರ್ಯನು ಅಸ್ತಾಚಲದ ಶಿಖರದ ಕಡೆಗೆ ಸಾಗುತ್ತಿರಲು, ಸೋಮಪ್ರಭೆಯು ತಾನು ಪುನಃ ಬರಬೇಕೆಂದು ಬಯಸಿದ ಸಖಿಯಿಂದ ಬೀಳ್ಕೊಂಡು ವಿಸ್ಮಯವುಂಟುಮಾಡುತ್ತಾ ಆಕಾಶಮಾರ್ಗದಲ್ಲಿ ಹಾರಿ ತನ್ನ ಸ್ಥಾನಕ್ಕೆ ಹೋದಳು.

---

ಏವಂ ಚ ವಂಚಯಿತ್ವಾ ತಂ ಪಿಶಾಚಂ ಮೋಚಿತಸ್ತಯಾ ।
ದುಹಿತ್ರಾ ಚ ದ್ವಿಜಸ್ತಸ್ಥೌ ರೋಗೋತ್ತೀರ್ಣೋ ಯಥಾ ಸುಖಮ್ ॥ ೧೮೪

ಇತ್ಥಂ ಪಿಶಾಚಾಸ್ತತ್ತುಲ್ಯಾ ಬಾಲಾ ರಾಜಸುತಾಶ್ಚಯೇ ।
ತೇ ಸಿದ್ಧಾ ಅಪ್ಯನರ್ಥಾಯ ಸಖಿ ರಕ್ಷ್ಯಾಸ್ತು ಬುದ್ಧಿಭಿಃ ॥ ೧೮೫

ರಾಜಪುತ್ರ್ಯಃ ಕುಲೀನಾಸ್ತು ನೈತಾದೃಶ್ಯಃ ಶ್ರುತಾಃ ಕ್ವಚಿತ್ ।
ಅತೋಽನ್ಯಥಾ ನ ಭಾವ್ಯಂ ತೇ ಸಖಿ ಮತ್ಸಂಗತಂ ಪ್ರತಿ ॥ ೧೮೬

ಏವಂ ಕಲಿಂಗಸೇನಾಯಾ ಮುಖಾತ್ ಶ್ರುತ್ವಾ ಕಥಾಕ್ರಮಮ್ ।
ಸಹಾಸಚಿತ್ರಮಧುರಂ ತೋಷಂ ಸೋಮಪ್ರಭಾ ಯಯೌ ॥ ೧೮೭

ಇತೋ ಮೇ ಷಷ್ಟಿಯೋಜನ್ಯಾಂ ಗೃಹಂ ಯಾತಿ ಚ ವಾಸರಃ ।
ಚಿರಂ ಸ್ಥಿತಾಸ್ಮಿ ತತ್ತ್ವಿ ಯಾಮೀತ್ಯೇತಾಮುವಾಚ ಚ ॥ ೧೮೮

ತತೋಽಸ್ತಗಿರಿಶೇಖರಂ ವ್ರಜತಿ ವಾಸರೇಶೇ ಶನೈಃ
ಸಖೀಂ ಪುನರುಪಾಗಮಪ್ರಣಯಿನೀಂ ಸಮಾಪೃಚ್ಛ್ಯ ತಾಮ್ ।
ಕ್ಷಣಂ ಜನಿತವಿಸ್ಮಯಾ ಗಗನಮಾರ್ಗಮುತ್ಪತ್ಯ ಸಾ ।
ಜಗಾಮ ವಸತಿಂ ನಿಜಾಂ ಪ್ರಸಭಮೇವ ಸೋಮಪ್ರಭಾ ॥ ೧೮೯

೧೯೦. ಅಂತಹ ಅದ್ಭುತವಾದದ್ದನ್ನು ಕಂಡು ಗೊಂದಲಕ್ಕೀಡಾಗಿ ಕಳಿಂಗ ಸೇನೆಯು ಯೋಚಿಸಿದಳು. ಇವಳು ನನ್ನ ಸಖಿ ಹೇಗೆ ಎಂದೇ ನನಗೆ ತಿಳಿಯುತ್ತಿಲ್ಲ. ಇವಳು ಸಿದ್ಧಾಂಗನೆಯೋ, ಅಪ್ಸರೆಯೋ ಅಥವಾ ವಿದ್ಯಾಧರಿಯೋ ಇರಬೇಕು.

೧೯೧. ಇವಳು ನಿಶ್ಚಿತವಾಗಿಯೂ ಆಕಾಶದಲ್ಲಿ ಸಂಚರಿಸುವ ದಿವ್ಯಸ್ತ್ರೀಯೇ ಹೌದು. ದಿವ್ಯಲೋಕದವರು ಮನುಷ್ಯಸ್ತ್ರೀಯರೊಡನೆ ಅನುಪಮ ಸ್ನೇಹವನ್ನು ಹೊಂದಿ ಸಂಬಂಧವನ್ನು ಹೊಂದಿರುತ್ತಾರೆ. ರಾಜನಾದ ಪೃಥುವಿನ ಮಗಳೊಡನೆ ಅರುಂಧತಿಯು ಗೆಳೆತನವನ್ನು ಹೊಂದಿರಲಿಲ್ಲವೇನು ? ಅವಳ ಮೇಲಿನ ಪ್ರೀತಿಯಿಂದ ಪೃಥುವು ಸ್ವರ್ಗದಿಂದ ಕಾಮಧೇನುವನ್ನು ಭೂಮಿಗೆ ತರಲಿಲ್ಲ ವೇನು ?

೧೯೨. ಅವನು ಭ್ರಷ್ಟನಾದರೂ ಅದರ ಹಾಲನ್ನು ಸೇವಿಸಿದ್ದರಿಂದ ಸ್ವರ್ಗಕ್ಕೆ ಹೋಗಲಿಲ್ಲ ವೇನು ? ಅಂದಿನಿಂದ ಭೂಲೋಕದಲ್ಲಿ ಹಸುಗಳು ಫಲಭರಿತವಾಗಲಿಲ್ಲ ವೇನು ? ಸ್ವರ್ಗಲೋಕದ ಈ ಗೆಳತಿಯು ನನ್ನ ಪುಣ್ಯದಿಂದಲೇ ಬಂದವಳು. ಅದರಿಂದ ನಾನು ಧನ್ಯಳು. ಬೆಳಿಗ್ಗೆ ಬಂದಾಗ ಅವಳ ಕುಲ ಮತ್ತು ಹೆಸರನ್ನು ಕೇಳುವೆನು.

---

ವಿಲೋಕ್ಯ ಚ ತದದ್ಭುತಂ ಬಹುವಿತರ್ಕಮತ್ಯದ್ಭುತಂ
ಪ್ರವಿಶ್ಯ ಸಮಚಿಂತಯತ್ ಕಿಲ ಕಲಿಂಗಸೇನಾ ಚ ಸಾ ।
ನ ವೇದ್ಮಿ ಕಿಮಸಾವಹೋ ಮಮ ಸಖೀ ಹಿ ಸಿದ್ಧಾಂಗನಾ
ಭವೇತ್ಕಿಮಥವಾಪ್ಸರಾಃ ಕಿಮಥವಾಪಿ ವಿದ್ಯಾಧರೀ ॥ ೧೯೦

ದಿವ್ಯಾ ತಾವದಿಯಂ ಭವತ್ಯವಿತಥಂ ವ್ಯೋಮಾಗ್ರಸಂಚಾರಿಣೀ
ದಿವ್ಯಾ ಯಾಂತಿ ಚ ಮಾನುಷೀಭಿರಸಮಸ್ನೇಹಾಹೃತಾಃ ಸಂಗತಿಮ್ ।
ಭೇಜೇ ಕಿಂ ನೃಪತೇಃ ಪೃಥೋಸ್ತನಯಯಾ ಸಖ್ಯಂ ನ ಸಾರುಂಧತೀ
ತತ್ಪ್ರೀತ್ಯಾ ಪೃಥುರಾನಿನಾಯ ಸುರಭಿಂ ಸ್ವರ್ಗಾನ್ನ ಕಿಂ ಭೂತಲೇ ॥ ೧೯೧

ತತ್ ಕ್ಷೀರಾಶನತೋ ನ ಕಿಂ ಪುನರಸೌ ಭ್ರಷ್ಟೋಽಪಿ ಯಾತೋ ದಿವಂ
ಸಂಭೂತಾಶ್ಚ ತತಃ ಪ್ರಭೃತ್ಯವಿಕಲಾ ಗಾವೋ ನ ಕಿಂ ಭೂತಲೇ ।
ತದ್ಧನ್ಯಾಸ್ಮಿ ಶುಭೋದಯಾದುಪನತಾ ದಿವ್ಯಾ ಸಖೀಯಂ ಮಮ
ಪ್ರಾತಶ್ಚಾನ್ವಯನಾಮನೀ ಸುನಿಪುಣಂ ಪ್ರಕ್ಷ್ಯಾಮಿ ತಾಮಾಗತಾಮ್ ॥ ೧೯೨

೧೯೩. ಈ ರೀತಿ ಇಲ್ಲಿ ರಾಜಕುಮಾರಿಯಾದ ಕಳಿಂಗಸೇನೆಯು ಮನಸ್ಸಿನಲ್ಲಿ ಚಿಂತಿಸುತ್ತಾ ಆ ರಾತ್ರಿಯನ್ನು ಕಳೆದಳು. ಸೋಮಪ್ರಭೆಯೂ ಕೂಡ ಅವಳನ್ನು ಮತ್ತೆ ನೋಡಬೇಕೆಂಬ ಕುತೂಹಲದಿಂದಲೇ ತನ್ನ ಮನೆಯಲ್ಲಿ ಆ ರಾತ್ರಿಯನ್ನು ಕಳೆದಳು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ ಮದನಮಂಚುಕಾಲಂಬಕದ**

**ಎರಡನೆಯ ತರಂಗ ಮುಗಿಯಿತು.**

---

ಇತ್ಯಾದಿ ರಾಜತನಯಾ ಹೃದಿ ಚಿಂತಯಂತೀ
ತಾಂ ಯಾಮಿನೀಮನಯದತ್ರ ಕಲಿಂಗಸೇನಾ ।
ಸೋಮಪ್ರಭಾ ಚ ನಿಜವೇಶ್ಮನಿ ಭೂಯ ಏವ
ತದ್ದರ್ಶನೋತ್ಸುಕಮನಾ ರಜನೀಂ ನಿನಾಯ ॥ ೧೯೩

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ ಮದನಮಂಚುಕಾಲಂಬಕೇ ದ್ವಿತೀಯಸ್ತರಂಗಃ ।**

# ಮೂರನೆಯ ತರಂಗ

೧–೨. ಮಾರನೆಯ ದಿನ ಬೆಳಿಗ್ಗೆ ಆಕಾಶಗಾಮಿನಿಯಾದ ಸೋಮಪ್ರಭೆಯು ವಿನೋದವುಂಟು ಮಾಡುವ, ಮರದಿಂದ ಮಾಡಿದ ಕೀಲುಬೊಂಬೆಗಳನ್ನು ಒಂದು ಪೆಟ್ಟಿಗೆಯಲ್ಲಿಟ್ಟುಕೊಂಡು ಕಳಿಂಗ ಸೇನೆಯ ಹತ್ತಿರ ಪುನಃ ಬಂದಳು.

೩ ಕಳಿಂಗ ಸೇನೆಯು ಅವಳನ್ನು ನೋಡಿ ಆನಂದ ಬಾಷ್ಪ ಸುರಿಸುತ್ತಾ ಮೇಲೆ ಎದ್ದು ಅವಳನ್ನು ಪಕ್ಕದಲ್ಲಿ ಕೂರಿಸಿ ಅಪ್ಪಿಕೊಂಡು ಹೇಳಿದಳು.

೪. ಗೆಳತಿ, ನಿನ್ನ ಪೂರ್ಣಚಂದ್ರನಂತಹ ಮುಖವನ್ನು ನೋಡದೆ ನನಗೆ ರಾತ್ರಿಯ ಮೂರು ಯಾಮಗಳು ನೂರು ಯಾಮಗಳಂತೆ ಆದವು.

೫ ನಿನ್ನೊಡನೆ ನನಗೆ ಉಂಟಾದ ಜನ್ಮಾಂತರದ ಸಂಬಂಧವು ಎಂತಹುದು ಇರಬಹುದು? ಅದರ ಪರಿಣಾಮ ಈಗ ಆಗುತ್ತಿದೆ. ಇದರ ಬಗ್ಗೆ ನಿನಗೆ ತಿಳಿದಿದ್ದರೆ ಹೇಳು.

---

# ತೃತೀಯಸ್ತರಂಗಃ

ತತಃ ಸೋಮಪ್ರಭಾ ಪ್ರಾತಸ್ತದ್ವಿನೋದೋಪಪಾದಿನೀಮ್ ।
ನ್ಯಸ್ತದಾರುಮಯಾನೇಕಮಾಯಾಸದ್ಯಂತ್ರಪುತ್ರಿಕಾಮ್ ॥ ೧
ಕರಂಡಿಕಾಂ ಸಮಾದಾಯ ಸಾ ನಭಸ್ತಲಚಾರಿಣೀ ।
ತಸ್ಯಾಃ ಕಲಿಂಗಸೇನಾಯಾ ನಿಕಟಂ ಪುನರಾಯಯೌ ॥ ೨
ಕಲಿಂಗಸೇನಾಪ್ಯಾಲೋಕ್ಯ ತಾಮಾನಂದಾಶ್ರುನಿರ್ಭರಾ ।
ಉತ್ಥಾಯ ಕಂಠೇ ಜಗ್ರಾಹ ಪಾರ್ಶ್ವಾಸೀನಾಮುವಾಚ ಚ ॥ ೩
ತ್ವದೀಯಮುಖಪೂರ್ಣೇಂದುದರ್ಶನೇನ ವಿನಾ ಸಖಿ ।
ತಪೋಮಯೀ ತ್ರಿಯಾಮಾದ್ಯ ಶತಯಾಮೇವ ಮೇ ಗತಾ ॥ ೪
ತಜ್ಜನ್ಮಾಂತರಸಂಬಂಧಃ ಕೀದೃಶಃ ಸ್ಯಾತ್ತ್ವಯಾ ಮಮ ।
ಯಸ್ಯಾಯಂ ಪರಿಣಾಮೋಽದ್ಯ ತ್ವಂ ದೇವೀ ವೇತ್ಸಿ ಚೇದ್ವದ ॥ ೫

೬ ಅದನ್ನು ಕೇಳಿ ಸೋಮಪ್ರಭೆಯು ರಾಜಕುಮಾರಿಗೆ ಹೇಳಿದಳು. '"ನನಗೆ ಅಂತಹ ವಿಶೇಷ ಜ್ಞಾನವೇನೂ ಇಲ್ಲ. ಜನ್ಮಾಂತರದ ನೆನಪೂ ಇಲ್ಲ.

೭ ಮುನಿಗಳಿಗೂ ಈ ವಿಷಯ ತಿಳಿದಿಲ್ಲ. ಕೆಲವರು ತಿಳಿದಿದ್ದರೆ ಅವರು ಅಂತಹ ಪೂರ್ವ (ಪುಣ್ಯ)ವನ್ನು ಮಾಡಿರಬೇಕು. ಅವರು ಪರತತ್ತ್ವವನ್ನು ಬಲ್ಲವರು."

೮ ಈ ರೀತಿಯಾಗಿ ಹೇಳಿದ್ದನ್ನು ಕೇಳಿ ಕಳಿಂಗ ಸೇನೆಯು ಕುತೂಹಲದಿಂದ ಮತ್ತೆ ಯಾರೂ ಇಲ್ಲದಿದ್ದಾಗ ಕೇಳಿದಳು.

೯–೧೦. "ಗೆಳತಿಯೇ, ಹೇಳು, ಯಾವ ದೇವಜಾತಿಯ ತಂದೆಯ ವಂಶವು, ಮುಕ್ತಾದವಳೆಂಬಂತೆ ಒಳ್ಳೆಯ ನಡತೆಯುಳ್ಳ ನಿನ್ನ ಜನನದಿಂದ ಅಲಂಕೃತವಾಯಿತು. ಜಗತ್ತಿಗೆ ಕರ್ಣಾಮೃತವಾಗಿರುವ ನಿನ್ನ ಹೆಸರೇನು ? ಈ ಪೆಟ್ಟಿಗೆ ಏಕೆ? ಇದರಲ್ಲೇನಿದೆ?'

೧೧ ಹೀಗೆ ಕಳಿಂಗಸೇನೆಯ ಪ್ರೀತಿಯುಕ್ತ ಮಾತನ್ನು ಕೇಳಿ ಸೋಮಪ್ರಭೆಯು ಎಲ್ಲವನ್ನೂ ಕ್ರಮವಾಗಿ ಹೇಳಲು ತೊಡಗಿದಳು:

೧೨. ಮೂರು ಲೋಕಗಳಲ್ಲೂ ಪ್ರಸಿದ್ಧನಾದ ಮಯ ಎಂಬ ಮಹಾರಾಕ್ಷಸನು ಇದ್ದಾನೆ. ಅವನು ರಾಕ್ಷಸ ಸ್ವಭಾವವನ್ನು ತ್ಯಜಿಸಿ ವಿಷ್ಣುವಿನಲ್ಲಿ ಆಶ್ರಯವನ್ನು ಪಡೆದನು.

೧೩. ವಿಷ್ಣುವಿನ ಅಭಯದಿಂದ ಇವನು ಇಂದ್ರನ ಸಭೆಯನ್ನು ನಿರ್ಮಿಸಿದನು. ಇವನು ದೇವತೆಗಳ ಕಡೆಯವನು ಎಂದು ಭಾವಿಸಿ ದೈತ್ಯರು ಇವನ ಮೇಲೆ ಕೋಪಗೊಂಡರು.

---

ತತ್ ಶ್ರುತ್ವಾ ರಾಜಪುತ್ರೀಂ ತಾಮೇವಂ ಸೋಮಪ್ರಭಾಬ್ರವೀತ್ ।
ಈದೃಜ್ಮೇ ನಾಸ್ತಿ ವಿಜ್ಞಾನಂ ನ ಹಿ ಜಾತಿಂ ಸ್ಮರಾಮ್ಯಹಮ್ ॥ ೬
ನ ಚಾತ್ರ ಮುನಯೋಽಭಿಜ್ಞಾಃ ಕೇಚಿತ್ತು ಯದಿ ಜಾನತೇ ।
ತೈಃ ಕೃತಂ ತಾದೃಶಂ ಪೂರ್ವಂ ಪರತತ್ತ್ವವಿದಶ್ಚ ತೇ ॥ ೭
ಏವಮುಕ್ತವತೀಂ ಭೂಯಃ ಪ್ರೇಮವಿಶ್ರಂಭಪೇಶಲಮ್ ।
ಕಲಿಂಗಸೇನಾ ಪಪ್ರಚ್ಛ ವಿಜನೇ ತಾಂ ಸಕೌತುಕಾ ॥ ೮
ಬ್ರೂಹಿ ಮೇ ಸಖಿ ಕಸ್ಯೇಹ ದೇವಜಾತೇಃ ಪಿತುಸ್ತ್ವಯಾ ।
ಜನ್ಮನಾಲಂಕೃತೋ ವಂಶೋ ಮುಕ್ತಯೇವ ಸುವೃತ್ತಯಾ ॥ ೯
ಜಗತ್ಕರ್ಣಾಮೃತಂ ಕಿಂ ಚ ತವ ನಾಮ ಸುಲಕ್ಷಣೇ ।
ಕರಂಡಿಕಾ ಕಿಮರ್ಥೇಯಮಸ್ಯಾಮಸ್ತಿ ಚ ವಸ್ತು ಕಿಮ್ ॥ ೧೦
ಏವಂ ಕಲಿಂಗಸೇನಾಯಾಃ ಶ್ರುತ್ವಾ ಸಪ್ರಣಯಂ ವಚಃ ।
ಸೋಮಪ್ರಭಾ ಸಾ ಸರ್ವಂ ತತ್ ಕ್ರಮಾದ್ವಕ್ತುಂ ಪ್ರಚಕ್ರಮೇ ॥ ೧೧
ಅಸ್ತಿ ತ್ರಿಜಗತಿ ಖ್ಯಾತೋ ಮಯೋ ನಾಮ ಮಹಾಸುರಃ ।
ಆಸುರಂ ಭಾವಮುತ್ಸೃಜ್ಯ ಶೌರಿಂ ಸ ಶರಣಂ ಶ್ರಿತಃ ॥ ೧೨
ತೇನ ದತ್ತಾಭಯಶ್ಚಕ್ರೇ ಸ ಚ ವಜ್ರಭೃತಃ ಸಭಾಮ್ ।
ದೈತ್ಯಾಶ್ಚ ದೇವಪಕ್ಷೋಽಯಮಿತಿ ತಂ ಪ್ರತಿ ಚುಕ್ರುಧುಃ ॥ ೧೩

೧೪. ಅವರಿಗೆ ಹೆದರಿ ಮಯನು ವಿಂಧ್ಯಪರ್ವತದಲ್ಲಿ ದೈತ್ಯರು ಪ್ರವೇಶಿಸಲು ಸಾಧ್ಯವಾಗದಂತಹ ಆಶ್ಚರ್ಯಕರವಾದ ಮಾಯಾ ಮಂದಿರವನ್ನು ನಿರ್ಮಿಸಿದನು.

೧೫-೧೬. ಆ ಮಯಾಸುರನಿಗೆ ಇಬ್ಬರು ಹೆಣ್ಣುಮಕ್ಕಳು. ಹಿರಿಯಳಾದ ಸ್ವಯಂಪ್ರಭೆಯು ವಿವಾಹವಾಗದೇ ಅವನ ಮನೆಯಲ್ಲೇ ಇದ್ದಾಳೆ. ಚಿಕ್ಕವಳಾದ ನನ್ನನ್ನು ನಳಕೂಬರ ಎಂಬ ಕುಬೇರ ಪುತ್ರನಿಗೆ ವಿವಾಹ ಮಾಡಿಕೊಟ್ಟನು.

೧೭. ಕೀಲುಗೊಂಬೆಗಳ ಬಗ್ಗೆ ನನ್ನ ತಂದೆ ಹೇಳಿಕೊಟ್ಟಿದ್ದಾನೆ. ನಿನ್ನ ಮೇಲಿನ ಪ್ರೀತಿಯಿಂದ ಒಂದು ಪೆಟ್ಟಿಗೆ ತುಂಬ ಗೊಂಬೆಗಳನ್ನು ತಂದಿದ್ದೇನೆ.

೧೮. ಹೀಗೆಂದು ಹೇಳಿ ಸೋಮಪ್ರಭೆಯು ಮರದಿಂದ ಮಾಡಿದ ಕೀಲುಗೊಂಬೆಗಳನ್ನು ಅವಳಿಗೆ ತೆರೆದು ತೋರಿಸಿದಳು.

೧೯. ಒಂದು ಗೊಂಬೆಗೆ ಕೀಲು ಕೊಡುತ್ತಿದ್ದಂತೆಯೇ ಅದು ಆಕಾಶಕ್ಕೆ ಹಾರಿ ಅವಳ ಆಜ್ಞೆಯಂತೆ ಹೂಮಾಲೆಯೊಂದನ್ನು ಬೇಗ ತಂದುಕೊಟ್ಟಿತು.

೨೦. ಮತ್ತೊಂದು ತನ್ನಷ್ಟಕ್ಕೆ ತಾನೇ ಪಾನೀಯವನ್ನು ತಂದಿತು. ಇನ್ನೊಂದು ಕುಣಿದರೆ ಮತ್ತೂ ಒಂದು ಮಾತನಾಡತೊಡಗಿತು.

---

ತದ್ಭಯಾತ್ತೇನ ವಿಂಧ್ಯಾದ್ರೌ ಮಾಯಾವಿವರಮಂದಿರಮ್ ।
ಅಗಮ್ಯಮಸುರೇಂದ್ರಾಣಾಂ ಬಹ್ವಾಶ್ಚರ್ಯಮಯಂ ಕೃತಮ್ ॥ ೧೪
ತಸ್ಯಾವಾಂ ದ್ವೇ ದುಹಿತರೌ ಮಯಸ್ಯ ಬ್ರಹ್ಮಚಾರಿಣೀ ।
ಜ್ಯೇಷ್ಠಾ ಸ್ವಯಂಪ್ರಭಾ ನಾಮ ಕುಮಾರೀ ತದ್ಗೃಹಸ್ಥಿತಾ ॥ ೧೫
ಅಹಂ ಸೋಮಪ್ರಭಾ ನಾಮ ಕನಿಷ್ಠಾ ಸಾ ತ್ವಹಂ ಸಖಿ ।
ನಲಕೂಬರಸಂಜ್ಞಾಯ ದತ್ತಾ ಧನದಸೂನವೇ ॥ ೧೬
ಪಿತ್ರಾ ಚ ಶಿಕ್ಷಿತಾಸ್ಮೀಹ ಮಾಯಾಯಂತ್ರಾಣ್ಯನೇಕಧಾ ।
ತ್ವತ್ಪ್ರೀತ್ಯಾ ಚೇಯಮಾನೀತಾ ಪೂರ್ಣಾ ತವ ಕರಂಡಿಕಾ ॥ ೧೭
ಇತ್ಯುಕ್ತ್ವಾ ದರ್ಶಯತ್ತಸ್ಯಾಃ ಪ್ರೋದ್ಘಾಟ್ಯ ಬಹುಕೌತುಕಾಃ ।
ಸೋಮಪ್ರಭಾ ಕಾಷ್ಠಮಯೀಃ ಸ್ವಮಾಯಾಯಂತ್ರಪುತ್ರಿಕಾಃ ॥ ೧೮
ಕೀಲಿಕಾಹತಿಮಾತ್ರೇಣ ಕಾಚಿದ್ಗತ್ವಾ ವಿಹಾಯಸಾ ।
ತದಾಜ್ಞಯಾ ಪುಷ್ಪಮಾಲಾಮಾದಾಯ ದ್ರುತಮಾಯಯೌ ॥ ೧೯
ಕಾಚಿತ್ತಥೈವ ಪಾನೀಯಮಾನಿನಾಯ ಯದೃಚ್ಛಯಾ ।
ಕಾಚಿನ್ನನರ್ತ ಕಾಚಿಚ್ಚ ಕಥಾಲಾಪಮಥಾಕರೋತ್ ॥ ೨೦

೨೧-೨೨. ಹೀಗೆ ಆಶ್ಚರ್ಯಕರವಾದ ರೀತಿಯಲ್ಲಿ ಅವಳಿಗೆ ಸ್ವಲ್ಪ ಹೊತ್ತು ಸಂತೋಷವನ್ನುಂಟು ಮಾಡಿ ಬೊಂಬೆಗಳ ಪೆಟ್ಟಿಗೆಯನ್ನು ಭದ್ರವಾಗಿ ಇಟ್ಟು ಸೋಮಪ್ರಭೆಯು ಕಳಿಂಗಸೇನೆಯ ಅನುಮತಿ ಪಡೆದು ತಾನು ಪತಿಗೆ ಅಧೀನಳಾದುದರಿಂದ ಆಕಾಶಮಾರ್ಗದಲ್ಲಿ ತನ್ನ ಮನೆಗೆ ಹೋದಳು.

೨೩. ಕಳಿಂಗಸೇನೆಯ ಅವುಗಳನ್ನು ನೋಡಿದ ಆಶ್ಚರ್ಯದಲ್ಲಿ ಹಸಿವನ್ನೇ ಮರೆತಳು. ಆ ದಿನ ಊಟವನ್ನೇ ಮಾಡದೆ ಅದೇ ಸಂತೋಷದಲ್ಲೇ ಇದ್ದಳು.

೨೪-೨೬. ಅದನ್ನು ನೋಡಿ ಅವಳ ತಾಯಿಯು ಏನೋ ರೋಗ ಬಂದಿರಬೇಕೆಂದು ಭಾವಿಸಿ ಆನಂದ ಎಂಬ ಹೆಸರಿನ ವೈದ್ಯವನ್ನು ಕರೆಸಿದಳು. ಅವನು ಪರೀಕ್ಷಿಸಿ ಬೇರೆ ಯಾವ ರೋಗವೂ ಇಲ್ಲದಿರುವುದನ್ನು ನೋಡಿ ಯಾವುದೋ ಕಾರಣದಿಂದ ಇವಳಿಗೆ ಅತಿಯಾದ ಸಂತೋಷವಾಗಿ ಅದರಿಂದ ಹಸಿವು ನೀಗಿದೆ, ಕಣ್ಣುಗಳು ಅರಳಿವೆ. ನಗುತ್ತಿರುವ ಇವಳ ಮುಖವೇ ಇದನ್ನು ಹೇಳುತ್ತಿದೆ ಎಂದನು. ಇದನ್ನು ಕೇಳಿ ತಾಯಿಯು ಕಾರಣವನ್ನು ಕೇಳಿದಾಗ ಕಳಿಂಗಸೇನೆಯ ತನ್ನ ಸಖಿಯ ವೃತ್ತಾಂತವನ್ನು ಹೇಳಿದಳು.

೨೭. ಒಳ್ಳೆಯ ಸಖಿಯ ಸಂಪರ್ಕದಿಂದ ಅವಳು ಸಂತೋಷಗೊಂಡಿರುವುದನ್ನು ತಿಳಿದು ಅವಳ ತಾಯಿಯು ಅವಳನ್ನು ಅಭಿನಂದಿಸಿ ಅವಳಿಗೆ ಉಚಿತವಾದ ಆಹಾರವನ್ನು ಸಿದ್ಧಗೊಳಿಸಿದಳು.

---

ಇತ್ಯಾದಿಭಿರ್ಮಹಾಶ್ಚರ್ಯೈಃ ಕಂಚಿತ್ಕಾಲಂ ವಿನೋದ್ಯ ತಾಮ್ ।
ಸುರಕ್ಷಿತಾಂ ಸ್ಥಾಪಯಿತ್ವಾ ತಾಂ ಚ ಯಂತ್ರ ಕರಂಡಿಕಾಮ್ ॥ ೨೧
ಕಲಿಂಗಸೇನಾಮಾಮಂತ್ರ್ಯ ಸೋತ್ಕಾಂ ಸೋಮಪ್ರಭಾ ತತಃ ।
ಯಯೌ ಭರ್ತೃಪರಾಯತ್ತಾ ನಭಸಾ ನಿಜಮಂದಿರಮ್ ॥ ೨೨
ಕಲಿಂಗಸೇನಾಪ್ಯಾಶ್ಚರ್ಯದರ್ಶನದ್ಧ್ವಸ್ತಯಾ ಕ್ಷುಧಾ ।
ಪ್ರಹೃಷ್ಟಾ ತದಹಸ್ತಸ್ಥೌ ಸರ್ವಾಹಾರಪರಾಙ್ಮುಖೀ ॥ ೨೩
ತದ್‌ದೃಷ್ಟ್ವಾ ಚ ತತಸ್ತಸ್ಯಾ ಜನನೀ ರೋಗಶಂಕಿನೀ ।
ಆನಂದಾಖ್ಯೇನ ಭಿಷಜಾ ನಿರೂಪ್ಯಾವಿಕಲೋದಿತಾ ॥ ೨೪
ಕುತೋಽಪಿ ಹೇತೋರ್ಹರ್ಷೇಣ ನಷ್ಟಾಸ್ಯಾಃ ಕ್ಷುನ್ನ ರೋಗತಃ ।
ಉತ್ಫುಲ್ಲನೇತ್ರಂ ವಕ್ತ್ಯೇತದಸ್ಯಾ ಹಸದಿವಾನನಮ್ ॥ ೨೫
ಇತ್ಯುಕ್ತಾ ಭಿಷಜಾ ಹರ್ಷಹೇತುಂ ತಜ್ಜನನೀ ಚ ಸಾ ।
ಪಪ್ರಚ್ಛ ತಾಂ ಯಥಾವೃತ್ತಂ ಸಾಪಿ ತಸ್ಯೈ ತದಬ್ರವೀತ್ ॥ ೨೬
ತತಃ ಶ್ಲಾಘ್ಯಸಖೀಸಂಗಹೃಷ್ಟಾಂ ಮತ್ವಾಭಿನಂದ್ಯ ಚ ।
ಆಹಾರಂ ಕಾರಯಾಮಾಸ ಜನನೀ ತಾಂ ಯಥೋಚಿತಮ್ ॥ ೨೭

೨೮. ಮಾರನೆಯ ದಿನ ಸೋಮಪ್ರಭೆಯು ವಿಷಯವನ್ನು ತಿಳಿದು ರಹಸ್ಯದಲ್ಲಿ ಬಂದು ಕಳಿಂಗಸೇನೆಗೆ ಹೀಗೆಂದಳು:

೨೯–೩೦. "ನಿನ್ನ ಸ್ನೇಹದ ಬಗ್ಗೆ ನನ್ನ ಗಂಡನಿಗೆ ತಿಳಿಸಿ ಪ್ರತಿದಿನವೂ ನಿನ್ನ ಬಳಿ ಬರಲು ಅವನ ಅನುಮತಿಯನ್ನು ಪಡೆದಿದ್ದೇನೆ. ಆದ್ದರಿಂದ ನೀನೂ ಕೂಡ ನಿನ್ನ ತಂದೆತಾಯಿಯರ ಅನುಮತಿಯನ್ನು ಪಡೆದು ಬಾ. ಆಗ ನೀನು ನನ್ನೊಡನೆ ಸ್ವೇಚ್ಛೆಯಾಗಿ ಓಡಾಡುತ್ತಿರಬಹುದು' ಎಂದಳು.

೩೧–೩೩. ಕಳಿಂಗಸೇನೆಯು ಸೋಮಪ್ರಭೆಯ ಕೈಹಿಡಿದುಕೊಂಡು ತನ್ನ ತಂದೆತಾಯಿಯರ ಬಳಿಗೆ ಕರೆದೊಯ್ದಳು. ಅವಳ ವಂಶ ಮತ್ತು ಹೆಸರನ್ನು ಹೇಳಿ ತನ್ನ ತಂದೆಯಾದ ಕಳಿಂಗದತ್ತನಿಗೆ ಪರಿಚಯ ಮಾಡಿಸಿದಳು. ಹಾಗೆಯೇ ತಾಯಿಯಾದ ತಾರಾದತ್ತೆಗೂ ತೋರಿಸಿದಳು. ಅವರಿಬ್ಬರೂ ಇವಳನ್ನು ನೋಡಿ, ವಿಷಯ ತಿಳಿದು ಇವಳನ್ನು ಅಭಿನಂದಿಸಿದರು.

೩೪–೩೫. ಅವರು ಅವಳನ್ನು ನೋಡಿ ಸಂತೋಷಗೊಂಡು ಮಗಳ ಮೇಲಣ ಪ್ರೀತಿಯಿಂದ ಆ ಅಸುರ ಸುಂದರಿಯನ್ನು ಸತ್ಕರಿಸಿ ನಂತರ ಹೇಳಿದರು. 'ಮಗಳೇ! ಈ ಕಳಿಂಗಸೇನೆಯನ್ನು ನಿನ್ನ ವಶಕ್ಕೆ ಒಪ್ಪಿಸಿದ್ದೇನೆ. ನೀವಿಬ್ಬರೂ ಸುಖವಾಗಿ ನಿಮ್ಮ ಇಷ್ಟದಂತೆ ಓಡಾಡಿಕೊಂಡಿರಿ' ಎಂದರು.

---

ಮಯಾ ತ್ವತ್ಸಖ್ಯಮಾವೇದ್ಯ ತ್ವತ್ಪಾರ್ಶ್ವಾಗಮನೇಽನ್ವಹಮ್ ।
ಅನುಜ್ಞಾ ಜ್ಞಾನಿನೋ ಭರ್ತುರ್ಗೃಹೀತಾ ವಿದಿತಾರ್ಥತಃ ॥ ೨೯
ತಸ್ಮಾತ್ ತ್ವಮಪ್ಯನುಜ್ಞಾತಾ ಪಿತೃಭ್ಯಾಂ ಭವ ಸಾಂಪ್ರತಮ್ ।
ಯೇನ ಸ್ವೈರಂ ಮಯಾ ಸಾಕಂ ನಿಃಶಂಕಾ ವಿಹರಿಷ್ಯಸಿ ॥ ೩೦
ಏವಮುಕ್ತವತೀಂ ಹಸ್ತೇ ತಾಂ ಗೃಹೀತ್ವೈವ ತತ್ಕ್ಷಣಮ್ ।
ಕಲಿಂಗಸೇನಾ ಸ್ವಪಿತುರ್ಮಾತುಶ್ಚ ನಿಕಟಂ ಯಯೌ ॥ ೩೧
ತತ್ರ ನಾಮಾನ್ವಯಾಖ್ಯಾನಪೂರ್ವಂ ಚೈತಾಮದರ್ಶಯತ್ ।
ಪಿತ್ರೇ ಕಲಿಂಗದತ್ತಾಯ ರಾಜ್ಞೇ ಸೋಮಪ್ರಭಾಂ ಸಖೀಮ್ ॥ ೩೨
ಮಾತ್ರೇ ಚ ತಾರಾದತ್ತಾಯೈ ತಥೈವೈತಾಮದರ್ಶಯತ್ ।
ತೌ ಚ ದೃಷ್ಟ್ವಾ ಯಥಾಖ್ಯಾನಮೇನಾಮಭಿನನಂದತುಃ ॥ ೩೩
ಊಚತುಶ್ಚಾಕೃತಿಪ್ರೀತೌ ದಂಪತೀ ತಾವುಭೌ ತತಃ ।
ಸತ್ಕೃತ್ಯ ದುಹಿತೃಸ್ನೇಹಾತ್ತಾಂ ಮಹಾಸುರಸುಂದರೀಮ್ ॥ ೩೪
ವತ್ಸೇ ಕಲಿಂಗಸೇನೇಯಂ ಹಸ್ತೇ ತವ ಸಮರ್ಪಿತಾ ।
ತದಿದಾನೀಂ ಯಥಾಕಾಮಮುಭೇ ವಿಹರತಾಂ ಯುವಾಮ್ ॥ ೩೫
ಅಥಾನ್ಯೇದ್ಯುರುಪಾಗತ್ಯ ವಿದಿತಾರ್ಥಾ ಕ್ರಮೇಣ ಸಾ ।
ಕಲಿಂಗಸೇನಾಂ ತಾಮೇವಂ ರಹಃ ಸೋಮಪ್ರಭಾಭ್ಯಧಾತ್ ॥ ೨೮

೩೬–೩೭ ಅವರ ಮಾತನ್ನು ಕೇಳಿ ಸಂತೋಷಗೊಂಡ ಕಳಿಂಗಸೇನೆ ಮತ್ತು ಸೋಮಪ್ರಭೆ ವಿಹಾರಾರ್ಥವಾಗಿ ರಾಜನು ನಿರ್ಮಿಸಿದ್ದ ವಿಹಾರಕ್ಕೆ ಹೋದರು. ಆ ಗೊಂಬೆಗಳ ಪೆಟ್ಟಿಗೆಯನ್ನೂ ಒಯ್ದರು.

೩೮. ಅಲ್ಲಿ ಸೋಮಪ್ರಭೆಯು ಒಂದು ಯಂತ್ರದ ಯಕ್ಷ ಬೊಂಬೆಯನ್ನು ತೆಗೆದುಕೊಂಡು ಪ್ರಯೋಗಿಸಿ ಬುದ್ಧನನ್ನು ಪೂಜಿಸಿಕೊಂಡು ಬರುವಂತೆ ಹೇಳಿದಳು.

೩೯–೪೦. ಆ ಗೊಂಬೆಯು ಆಕಾಶದಲ್ಲಿ ಬಹುದೂರ ಹೋಗಿ ಮುತ್ತು ರತ್ನ ಕೆಂದಾವರೆಗಳಿಂದ ಬುದ್ಧನನ್ನು ಪೂಜಿಸಿ ಹಿಂತಿರುಗಿ ಬಂದಿತು. ಅದರಿಂದ ಮನೆಯವರೆಲ್ಲ ಆಶ್ಚರ್ಯಗೊಂಡರು.

೪೧. ಈ ವಿಷಯವನ್ನು ತಿಳಿದು ಬಂದು ನೋಡಿ ಆಶ್ಚರ್ಯಗೊಂಡ ರಾಜ ಕಳಿಂಗದತ್ತನು ಗೊಂಬೆಗಳ ಚಮತ್ಕಾರದ ಬಗ್ಗೆ ಸೋಮಪ್ರಭೆಯನ್ನು ಕೇಳಿದನು.

೪೨–೪೩. ಆಗ ಸೋಮಪ್ರಭೆ ಹೇಳಿದಳು. 'ರಾಜನೇ, ಇವು ಹಿಂದೆ ನಮ್ಮ ತಂದೆ ಸೃಷ್ಟಿಸಿದ ಮಾಯಾಯಂತ್ರ ಮುಂತಾದ ಗೊಂಬೆಗಳು. ಇವು ಅನೇಕ ವಿಧವಾಗಿವೆ. ಈ ಜಗತ್ತು ಎಂಬ ಯಂತ್ರವು ಹೇಗೆ ಪಂಚಭೂತಗಳಿಂದ ನಿರ್ಮಿತವಾಗಿದೆಯೋ ಹಾಗೆಯೇ ಈ ಯಂತ್ರಗಳು. ಅವುಗಳನ್ನು ಬಿಡಿಸಿ ಬಿಡಿಸಿ ಹೇಳುತ್ತೇನೆ. ಕೇಳು.'

---

ಏತತ್ತಯೋರ್ವಚೋ ದ್ವೇ ಚಾಪ್ಯಭಿನಂದ್ಯ ನಿರೀಯತುಃ ।
ಸಮಂ ಕಲಿಂಗಸೇನಾ ಚ ಸಾ ಚ ಸೋಮಪ್ರಭಾ ತತಃ ॥ ೩೬
ಜಗ್ಮತುಶ್ಚ ವಿಹಾರಾಯ ವಿಹಾರಂ ರಾಜನಿರ್ಮಿತಮ್ ।
ಆನಿನ್ಯತುಶ್ಚ ತಾಂ ತತ್ರ ಮಾಯಾಯಂತ್ರಕರಂಡಿಕಾಮ್ ॥ ೩೭
ತತೋ ಯಂತ್ರಮಯಂ ಯಕ್ಷಂ ಗೃಹೀತ್ವಾ ಪ್ರಾಹಿಣೋತ್ತದಾ ।
ಸೋಮಪ್ರಭಾ ಸ್ವಪ್ರಯೋಗಾತ್ ಬುದ್ಧಾರ್ಚಾನಯನಾಯ ಸಾ ॥ ೩೮
ಸ ಯಕ್ಷೋ ನಭಸಾ ಗತ್ವಾ ದೂರಮಧ್ವಾನಮಾಯಯೌ ।
ಆದಾಯ ಮುಕ್ತಾ ಸದ್ರತ್ನಹೇಮಾಂಬುರುಹಸಂಚಯಮ್ ॥ ೩೯
ತೇನಾಭಿಪೂಜ್ಯ ಸುಗತಾನ್ ಭಾಸಯಾಮಾಸ ತತ್ರ ಸಾ ।
ಸೋಮಪ್ರಭಾ ಸನಿಲಯಾನ್ ಸರ್ವಾಶ್ಚರ್ಯಪ್ರದಾಯಿನಾ ॥ ೪೦
ತದ್‌ಬುಧ್ವಾಗತ್ಯ ದೃಷ್ಟ್ವಾ ಚ ವಿಸ್ಮಿತೋ ಮಹಿಷೀಸಖಃ ।
ರಾಜಾ ಕಲಿಂಗದತ್ತಸ್ತಾಮಪೃಚ್ಛದ್ಯಂತ್ರಚೇಷ್ಟಿತಮ್ ॥ ೪೧
ತತಃ ಸೋಮಪ್ರಭಾವಾದೀತ್ ರಾಜನ್ನೇತಾನ್ಯನೇಕಧಾ ।
ಮಾಯಾಯಂತ್ರಾದಿಶಿಲ್ಪಾನಿ ಪಿತ್ರಾ ಸೃಷ್ಟಾನಿ ಮೇ ಪುರಾ ॥ ೪೨
ಯಥಾ ಚೇದಂ ಜಗದ್ಯಂತ್ರಂ ಪಂಚಭೂತಾತ್ಮಕಂ ತಥಾ ।
ಯಂತ್ರಾಣ್ಯೇತಾನಿ ಸರ್ವಾಣಿ ಶೃಣು ತಾನಿ ಪೃಥಕ್ ಪೃಥಕ್ ॥ ೪೩

೪೪–೪೫. ಪೃಥ್ವೀ ಪ್ರಧಾನವಾಗಿರುವ ಯಂತ್ರವು ಬಾಗಿಲು ಮೊದಲಾದವುಗಳನ್ನು ಮುಚ್ಚುತ್ತದೆ. ಅದು ಮುಚ್ಚಿದ್ದನ್ನು ಬೇರೆಯವರು ತೆಗೆಯಲಾಗುವುದಿಲ್ಲ. ಜಲಪ್ರಧಾನವಾದುದು ಜೀವವಿರುವಂತೆ ಕಾಣುತ್ತದೆ. ಅಗ್ನಿಮಯವಾದುದು ಜ್ವಾಲೆಗಳನ್ನು ಉಗುಳುತ್ತದೆ.

೪೬. ವಾತಯಂತ್ರವು ಹೋಗಿಬರುವ ಚಲನಗಳನ್ನು ಮಾಡುತ್ತದೆ. ಆಕಾಶದಿಂದ ಜನಿಸಿದ ಯಂತ್ರವು ಮಾತನಾಡುತ್ತದೆ.

೪೭. ಈ ಯಂತ್ರಗಳನ್ನೆಲ್ಲ ನಾನು ಪಡೆದುಕೊಂಡೆ. ಆದರೆ ಅಮೃತವನ್ನು ರಕ್ಷಿಸುವ ಚಕ್ರಯಂತ್ರವನ್ನು ನನ್ನ ತಂದೆ ಮಾತ್ರ ಬಲ್ಲ.

೪೮. ಎಂದು ಅವಳು ಹೇಳುತ್ತಿರುವಂತೆಯೇ ಅದನ್ನು ಆಮೋದಿಸುವಂತೆ ಮಧ್ಯಾಹ್ನದಲ್ಲಿ ಮೊಳಗುವ ಶಂಖನಾದವಾಯಿತು.

೪೯–೫೦. ಅನಂತರ ತನಗೆ ಇಷ್ಟವಾದ ಆಹಾರವನ್ನು ಪಡೆದು ಕಳಿಂಗಸೇನೆಯನ್ನು ತನ್ನೊಡನೆ ಕರೆದೊಯ್ಯಲು ರಾಜನ ಅನುಮತಿಯನ್ನು ಪಡೆದ ಸೋಮಪ್ರಭೆಯು ಯಂತ್ರನಿರ್ಮಿತವಾದ ವಿಮಾನದಲ್ಲಿ ಅವಳನ್ನು ಕೂರಿಸಿಕೊಂಡು ಆಕಾಶ ಮಾರ್ಗದಲ್ಲಿ ಹೊರಟು ತನ್ನ ಸೋದರಿಯ ಬಳಿ ಹೋಗಲು ತಂದೆಯ ಮನೆಗೆ ಹೋದಳು.

---

ಪೃಥ್ವೀಪ್ರಧಾನಂ ಯಂತ್ರಂ ಯದ್ ದ್ವಾರಾದಿ ಪಿದಧಾತಿ ತತ್ ।
ಪಿಹಿತಂ ತೇನ ಶಕ್ನೋತಿ ನ ಚೋದ್ಘಾಟಯಿತುಂ ಪರಃ ॥ ೪೪
ಆಕಾರಸ್ತೋಯಯಂತ್ರೋತ್ಥಃ ಸಜೀವ ಇವ ದೃಶ್ಯತೇ ।
ತೇಜೋಮಯಂ ತು ಯದ್ಯಂತ್ರಂ ತತ್ಜ್ವಾಲಾಃ ಪರಿಮುಂಚತಿ ॥ ೪೫
ವಾತಯಂತ್ರಂ ಚ ಕುರುತೇ ಚೇಷ್ಟಾ ಗತ್ಯಾಗಮಾದಿಕಾಃ ।
ವ್ಯಕ್ತೀಕರೋತಿ ಚಾಲಾಪಂ ಯಂತ್ರಮಾಕಾಶಸಂಭವಮ್ ॥ ೪೬
ಮಯಾ ಚೈತಾನ್ಯವಾಪ್ತಾನಿ ತಾತಾತ್ಕಿಂ ತ್ವಮೃತಸ್ಯಯತ್ ।
ರಕ್ಷಕಂ ಚಕ್ರಯಂತ್ರಂ ತತ್ ತಾತೋ ಜಾನಾತಿ ನಾಪರಃ ॥ ೪೭
ಇತಿ ತಸ್ಯಾ ವದಂತ್ಯಾಸ್ತತ್ ವಚಃ ಶ್ರದ್ದಧತಾಮಿವ ।
ಮಧ್ಯಾಹ್ನೇ ಪೂರ್ಯಮಾಣಾನಾಂ ಶಂಖಾನಾಮುದಭೂತ್ ಧ್ವನಿಃ ॥ ೪೮
ತತಃ ಸ್ವೋಚಿತಮಾಹಾರಂ ದಾತುಂ ವಿಜ್ಞಾಪ್ಯ ತಂ ನೃಪಮ್ ।
ಪ್ರಾಪ್ಯಾನುಜ್ಞಾಂ ವಿಮಾನೇ ತಾಂ ಸಾನುಗಾಂ ಯಂತ್ರನಿರ್ಮಿತೇ ॥ ೪೯
ಕಲಿಂಗಸೇನಾಮಾದಾಯ ಪ್ರತಸ್ಥೇ ಗಗನೇನ ಸಾ ।
ಸೋಮಪ್ರಭಾ ಪಿತೃಗೃಹಂ ಜ್ಯೇಷ್ಠಾಯಾಃ ಸ್ವಸುರಂತಿಕಮ್ ॥ ೫೦

೫೧. ಒಂದು ಕ್ಷಣದಲ್ಲೇ ವಿಂಧ್ಯಪರ್ವತದಲ್ಲಿರುವ ತನ್ನ ತಂದೆಯ ಮನೆಯನ್ನು ಸೇರಿ ಕಳಿಂಗಸೇನೆಯನ್ನು ಸೋದರಿಯಾದ ಸ್ವಯಂಪ್ರಭೆಯ ಹತ್ತಿರ ಕರೆದುಕೊಂಡು ಹೋದಳು.

೫೨–೫೩. ಅಲ್ಲಿ ಜಟಾಧಾರಿಣಿಯೂ, ನೀಳವಾದ ಅಕ್ಷಮಾಲೆಯನ್ನು ಹಿಡಿದಿರುವವಳೂ, ಶ್ವೇತವಸ್ತ್ರಧಾರಿಣಿಯೂ, ಬ್ರಹ್ಮಚಾರಿಣಿಯೂ ಆಗಿ ಇಷ್ಟಾರ್ಥದ ಸಿದ್ಧಿಗಾಗಿ ಉಗ್ರತಪಸ್ಸನ್ನು ಆಚರಿಸುತ್ತಿದ್ದ ಪಾರ್ವತಿಯಂತೆ ಕಾಣಿಸುತ್ತಿದ್ದ ಮಂದಸ್ಮಿತೆಯಾದ ಸ್ವಯಂಪ್ರಭೆಯನ್ನು ಕಳಿಂಗಸೇನೆ ನೋಡಿದಳು.

೫೪. ತನಗೆ ನಮಸ್ಕಾರಮಾಡಿದ ಕಳಿಂಗ ಸೇನೆಗೆ ಸ್ವಯಂಪ್ರಭೆಯು ಹಣ್ಣು ಹಂಪಲುಗಳಿಂದ ಆತಿಥ್ಯವನ್ನು ಮಾಡಿದಳು.

೫೫–೫೬. ಆಗ ಸೋಮಪ್ರಭೆಯು ಕಳಿಂಗಸೇನೆಯನ್ನು ಕುರಿತು–"ಗೆಳತಿ, ಈ ಹಣ್ಣುಗಳನ್ನು ತಿನ್ನುವುದರಿಂದ ನಿನಗೆ ಮುಪ್ಪು ಬರುವುದಿಲ್ಲ. ಮಂಜಿನಿಂದ ಕಮಲವು ಹಾಳಾಗುವಂತೆ ಮುಪ್ಪಿನಿಂದ ಈ ರೂಪವೂ ಹಾಳಾಗುತ್ತದೆ. ನಿನ್ನ ರೂಪವು ಹಾಳಾಗಬಾರದು ಎಂದೇ ನಾನು ಸ್ನೇಹದಿಂದ ನಿನ್ನನ್ನು ಇಲ್ಲಿಗೆ ಕರೆತಂದೆನು" ಎಂದು ಹೇಳಿದಳು.

---

ಕ್ಷಣಾಚ್ಚ ಪ್ರಾಪ್ಯ ವಿಂಧ್ಯಾದ್ರಿವರ್ತಿ ತತ್ಪಿತೃಮಂದಿರಮ್ ।
ತಸ್ಯಾಃ ಸ್ವಯಂಪ್ರಭಾಯಾಶ್ಚ ಪಾರ್ಶ್ವಂ ತಾಮನಯತ್ ಸ್ವಸುಃ ॥ ೫೧
ತತ್ರಾಪಶ್ಯಜ್ಜಟಾಜೂಟಮಾಲಿನೀಂ ತಾಂ ಸ್ವಯಂಪ್ರಭಾಮ್ ।
ಕಲಿಂಗಸೇನಾ ಲಂಬಾಕ್ಷಮಾಲಾಂ ಸಾ ಬ್ರಹ್ಮಚಾರಿಣೀಮ್ ॥ ೫೨
ಸುಸಿತಾಂಬರಸಂವೀತಾಂ ಹಸಂತೀಮಿವ ಪಾರ್ವತೀಮ್ ।
ಕಾಮಭೋಗಮಹಾಭೋಗಗೃಹೀತೋಗ್ರತಪಃಕ್ರಿಯಾಮ್ ॥ ೫೩
ಸಾಪಿ ಸೋಮಪ್ರಭಾಖ್ಯಾತಾಂ ಪ್ರಣತಾಂ ತಾಂ ನೃಪಾತ್ಮಜಾಮ್ ।
ಸ್ವಯಂಪ್ರಭಾ ಕೃತಾತಿಥ್ಯಾ ಸಂವಿಭೇಜೇ ಫಲಾಶನೈಃ ॥ ೫೪
ಸಖಿ ಭುಕ್ತೈಃ ಫಲೈರೇತೈಃ ಜರಾ ತೇ ನ ಭವಿಷ್ಯತಿ ।
ವಿನಾಶಿನ್ಯಸ್ಯ ರೂಪಸ್ಯ ಪದ್ಮಸ್ಯೇವ ಹಿಮಾಹತಿಃ ॥ ೫೫
ಏತದರ್ಥಮಿಹ ಸ್ನೇಹಾದಾನೀತಾ ಭವತೀ ಮಯಾ ।
ಇತಿ ಸೋಮಪ್ರಭಾ ಚೈತಾಂ ರಾಜಪುತ್ರೀಮಭಾಷತ ॥ ೫೬

೫೭-೬೦. ಕಳಿಂಗಸೇನೆಯು ಆ ಹಣ್ಣುಗಳನ್ನು ತಿಂದಳು. ಅಮೃತ ರಸವು ಅವಳ ಅಂಗಗಳನ್ನೆಲ್ಲ ಸವರಿದಂತೆ ಭಾಸವಾಯಿತು. ಹಾಗೆಯೇ ಕುತೂಹಲದಿಂದ ತಿರುಗಾಡುತ್ತಾ ಮಯನಿಂದ ನಿರ್ಮಿತವಾದ ಉದ್ಯಾನವನ್ನು ನೋಡಿದಳು. ಅಲ್ಲಿ ಬಂಗಾರದ ಕಮಲಗಳ ಸರೋವರ, ಅಮೃತದಂತಹ ಹಣ್ಣು ಬಿಡುವ ಮರಗಳು, ಚಿತ್ರ ವಿಚಿತ್ರವಾದ ಬಂಗಾರದ ಹಕ್ಕಿಗಳು, ರತ್ನಖಚಿತ ಕಂಬಗಳು, ಗೋಡೆಯಂತಹ ಬಯಲು, ಬಯಲಿನಂತೆ ಕಾಣುವ ಗೋಡೆ, ನೆಲದಂತೆ ಕಾಣುವ ನೀರು, ನೀರಿನಂತೆ ಕಾಣುವ ನೆಲ ಇವು ಇದ್ದು ಅದು ಬೇರೆ ಲೋಕದಂತಿತ್ತು.

೬೧. ಹಿಂದೆ ಸೀತೆಯನ್ನು ಹುಡುಕುತ್ತಾ ಪ್ರವೇಶಿಸಿದ ಕಪಿಗಳು ಇದೇ ಸ್ವಯಂಪ್ರಭೆಯ ಅನುಗ್ರಹದಿಂದ ಇಲ್ಲಿಂದ ಹೊರ ಬಂದಿದ್ದರು.

೬೨-೬೩. ಅನಂತರ ಸ್ವಯಂಪ್ರಭೆಯಿಂದ ಬೀಳ್ಕೊಂಡು, ಆ ಅದ್ಭುತವಾದ ನಗರವನ್ನು ನೋಡಿ ಅತಿ ವಿಸ್ಮಯಗೊಂಡಿದ್ದ ಹಾಗೂ ಮುಪ್ಪಿಲ್ಲದ ಸ್ಥಿತಿಗೆ ಪಾತ್ರಳಾಗಿದ್ದ ಕಳಿಂಗಸೇನೆಯನ್ನು ಯಂತ್ರದ ಮೇಲೆ ಹತ್ತಿಸಿಕೊಂಡು ಆಕಾಶಮಾರ್ಗದಲ್ಲಿ ತಕ್ಷಶಿಲೆಯಲ್ಲಿದ್ದ ತನ್ನ ಮನೆಗೆ ಕರೆತಂದಳು.

---

ತತಃ ಕಲಿಂಗಸೇನಾತ್ರ ತಾನ್ಯಭುಂಕ್ತ ಫಲಾನಿ ಸಾ ।
ಸದ್ಯೋಽಮೃತರಸಾಸಾರಸಿಕ್ತಾಂಗೀವ ಬಭೂವ ಚ ॥ ೫೭
ದದರ್ಶ ಚ ಪುರೋದ್ಯಾನಂ ಭ್ರಮಂತೀ ತತ್ರ ಕೌತುಕಾತ್ ।
ಸಸುವರ್ಣಾಬ್ಜವಾಪೀಕಂ ಸುಧಾಸ್ವಾದುಫಲದ್ರುಮಮ್ ॥ ೫೮
ಹೈಮಚಿತ್ರಖಗಾಕೀರ್ಣಂ ಸನ್ಮಣಿಸ್ತಂಭವಿಭ್ರಮಮ್ ।
ಭಿತ್ತಿಬುದ್ಧಿಕರಂ ಶೂನ್ಯೇ ಭಿತ್ತೌ ಶೂನ್ಯಪ್ರತೀತಿದಮ್ ॥ ೫೯
ಜಲೇ ಸ್ಥಲಧಿಯಂ ಕುರ್ವತ್ ಸ್ಥಲೇ ಚ ಜಲಬುದ್ಧಿಕೃತ್ ।
ಲೋಕಾಂತರಮಿವಾಪೂರ್ವಂ ಮಯಮಾಯಾವಿನಿರ್ಮಿತಮ್ ॥ ೬೦
ಪ್ರವಿಷ್ಟಪೂರ್ವಂ ಪ್ಲವಗೈಃ ಪುರಾ ಸೀತಾಗವೇಷಿಭಿಃ ।
ಸ್ವಯಂಪ್ರಭಾ ಪ್ರಸಾದೇನ ಚಿರಾತ್ ಸಂಪ್ರಾಪ್ತನಿರ್ಗಮೈಃ ॥ ೬೧
ತತಸ್ತದದ್ಭುತಪುರಪ್ರಕಾಮಾಲೋಕವಿಸ್ಮಿತಾಮ್ ।
ಅಜರಾಭಾಜನೀಭೂತಾಂ ತಾಮಾಪೃಚ್ಛ್ಯ ಸ್ವಯಂಪ್ರಭಾಮ್ ॥ ೬೨
ಕಲಿಂಗಸೇನಾಮಾರೋಪ್ಯ ಯಂತ್ರೇ ಭೂಯೋ ವಿಹಾಯಸಾ ।
ಸೋಮಪ್ರಭಾ ತಕ್ಷಶಿಲಾಮಾನಿನಾಯ ಸ್ವಮಂದಿರಮ್ ॥ ೬೩

೬೪. ಅಲ್ಲಿ ತನ್ನ ಮಾತಾಪಿತೃಗಳಿಗೆ ಕಳಿಂಗಸೇನೆಯು ಎಲ್ಲವನ್ನೂ ವರ್ಣಿಸಿದಳು. ಮಾತಾಪಿತೃಗಳೂ ಬಹಳ ಸಂತೋಷಪಟ್ಟರು.

೬೫. ಹೀಗೆ ಕೆಲವು ದಿವಸಗಳು ಕಳೆದಿರಲು ಒಮ್ಮೆ ಸೋಮಪ್ರಭೆಯು ಕಳಿಂಗ ಸೇನೆಗೆ ಹೇಳಿದಳು.

೬೬-೬೮. "ನಿನ್ನ ಮದುವೆ ಆಗುವವರೆಗೆ ನಮ್ಮಿಬ್ಬರ ಸ್ನೇಹ ಇರುತ್ತದೆ. ಆಮೇಲೆ ನಿನ್ನ ಗಂಡನ ಮನೆಗೆ ನಾನು ಹೇಗೆ ಬರುವುದು ? ಗೆಳತಿಯ ಗಂಡನನ್ನು ನೋಡಬಾರದು. ಅವನು ಆತ್ಮೀಯನೂ ಆಗಲಾರ. ಇನ್ನು ಅತ್ತೆಯಾದರೋ ಹೆಣ್ಣುತೋಳವು ಕುರಿಯನ್ನು ತಿನ್ನುವಂತೆ ಸೊಸೆಯನ್ನು ಕಿತ್ತು ತಿನ್ನುತ್ತಾಳೆ. ಅಂದಹಾಗೆ ಕೀರ್ತಿಸೇನೆಯ ಕಥೆಯನ್ನು ಹೇಳುತ್ತೇನೆ ಕೇಳು' ಎಂದಳು.

೬೯. ಹಿಂದೆ ಪಾಟಲೀ ಪುತ್ರ ಎಂಬ ಊರಿನಲ್ಲಿ ಧನಪಾಲಿತ ಎಂಬ ಯಥಾರ್ಥವಾದ ಹೆಸರಿನ ಶ್ರೀಮಂತರಲ್ಲಿ ಅಗ್ರಗಣ್ಯನಾದ ವ್ಯಾಪಾರಿಯು ಇದ್ದನು.

೭೦. ಅವನಿಗೆ ಕೀರ್ತಿಸೇನಾ ಎಂಬ ಮಗಳಿದ್ದಳು. ರೂಪದಲ್ಲಿ ಅಸಮಾನಳಾದ ಅವಳು ಅವನಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯಳಾಗಿದ್ದಳು.

---

ತತ್ರ ಸಾ ತದ್ಯಥಾವಸ್ತು ಪಿತ್ರೋಃ ಸರ್ವಮವರ್ಣಯತ್ ।
ಕಲಿಂಗಸೇನಾ ತೌ ಚಾಪಿ ಪರಂ ಸಂತೋಷಮೀಯತುಃ ॥ ೬೪

ಇತ್ಥಂ ತಯೋರ್ದ್ವಯೋಃ ಸಖ್ಯೋರ್ಗಚ್ಛತ್ಸು ದಿವಸೇಷ್ವಥ ।
ಊಚೇ ಕಲಿಂಗಸೇನಾಂ ತಾಮೇವಂ ಸೋಮಪ್ರಭೈಕದಾ ॥ ೬೫

ಯಾವನ್ನ ಪರಿಣೀತಾ ತ್ವಂ ತಾವತ್ಸಖ್ಯಂ ಮಮ ತ್ವಯಾ ।
ತ್ವದ್ಭರ್ತೃಭವನೇ ಪಶ್ಚಾನ್ಮಮ ಸ್ಯಾದಾಗಮಃ ಕುತಃ ॥ ೬೬

ನ ದೃಶ್ಯೋ ಹಿ ಸಖೀಭರ್ತಾ ನಾಂಗೀಕಾರ್ಯಃ ಕಥಂಚನ ।
ಅವೇರ್ವೃಕೀವ ಸ್ನುಷಾಯಾಃ ಶ್ವಶ್ರೂರ್ಮಾಂಸಾನಿ ಖಾದತಿ ॥ ೬೭

ತಥಾ ಚ ಶೃಣು ವಚ್ಮ್ಯೇತಾಂ ಕೀರ್ತಿಸೇನಾ ಕಥಾಂ ತವ ।
————————————————————॥ ೬೮

ಪುರೇ ಪಾಟಲಿಪುತ್ರಾಖ್ಯೇ ಧುರ್ಯೋ ಧನವತಾಂ ವಣಿಕ್ ।
ನಾಮ್ನಾ ಯಥಾರ್ಥೇನ ಪುರಾ ಧನಪಾಲಿತ ಇತ್ಯಭೂತ್ ॥ ೬೯

ಕೀರ್ತಿಸೇನಾಭಿಧಾನಾ ಚ ತಸ್ಯಾಜಾಯತ ಕನ್ಯಕಾ ।
ರೂಪೇಣಾನನ್ಯಸದೃಶೀ ಪ್ರಾಣೇಭ್ಯೋಽಪ್ಯಧಿಕಪ್ರಿಯಾ ॥ ೭೦

೭೧. ಧನಪಾಲಿತನು ಅವಳನ್ನು ಮಗಧದೇಶದ ಧನಿಕನಾದ ದೇವಸೇನ ಎಂಬ, ತನಗೆ ಸಮನಾದ ವ್ಯಾಪಾರಿಗೆ ಕೊಟ್ಟು ಮದುವೆ ಮಾಡಿದನು.

೭೨. ಒಳ್ಳೆಯ ನಡವಳಿಕೆಯಿದ್ದ ದೇವಸೇನನಿಗೆ ತಂದೆ ಇರಲಿಲ್ಲ. ಆದರೆ ದುಷ್ಟಬುದ್ಧಿಯಿರುವ ತಾಯಿ ಇದ್ದಳು.

೭೩. ಮಗನು ಹೆಂಡತಿಯನ್ನು ಬಹಳ ಪ್ರೀತಿಸುತ್ತಿದ್ದುದನ್ನು ಕಂಡು ಅವಳು ಕೋಪದಿಂದ ಉರಿಯುತ್ತಾ ಮಗನನ್ನು ಪರೋಕ್ಷವಾಗಿ ಹೀಯಾಳಿಸುತ್ತಿದ್ದಳು.

೭೪. ಆದರೆ ಕೀರ್ತಿಸೇನೆಗೆ ಇದನ್ನು ಗಂಡನಿಗೆ ಹೇಳಲಾಗುತ್ತಿರಲಿಲ್ಲ. ವಕ್ರಬುದ್ಧಿಯಿರುವ ಅತ್ತೆಯ ಅಧೀನರಾದ ಸೊಸೆಯರ ಸ್ಥಿತಿ ಕಷ್ಟಕರವಾದುದು.

೭೫. ಒಮ್ಮೆ ಅವಳ ಗಂಡ ದೇವಸೇನನು ಬಂಧುಗಳಿಂದ ಪ್ರೇರಿತನಾಗಿ ವ್ಯಾಪಾರ ಮಾಡಲು ವಲಭೀ ಎಂಬ ನಗರಕ್ಕೆ ಹೊರಟನು.

೭೬. ಆಗ ಕೀರ್ತಿಸೇನೆಯು ತನ್ನ ಪತಿಗೆ ಹೀಗೆಂದಳು. "ಇದುವರೆಗೆ ನಾನು ನಿಮಗೆ ಈ ವಿಷಯವನ್ನು ಹೇಳಿರಲಿಲ್ಲ.

೭೭. ನಿಮ್ಮ ತಾಯಿಯು ನಿಮ್ಮ ಎದುರಿನಲ್ಲೇ ನನ್ನನ್ನು ಹೀಯಾಳಿಸುತ್ತಾರೆ. ಇನ್ನು ನೀವು ಹೊರಟುಹೋದಮೇಲೆ ನನಗೆ ಏನು ಮಾಡುತ್ತಾರೋ ನನಗೆ ಗೊತ್ತಿಲ್ಲ.'

---

ಸಾ ಚ ತೇನ ಸಮಾನಾಯ ಮಗಧೇಷು ಮಹರ್ದ್ಧಯೇ ।
ದೇವಸೇನಾಭಿಧಾನಾಯ ದತ್ತಾಭೂತ್ ವಣಿಜೇ ಸುತಾ ॥ ೭೧

ತಸ್ಯ ಚಾತಿಸುವೃತ್ತಸ್ಯ ದೇವಸೇನಸ್ಯ ದುರ್ಜನೀ ।
ವಿಪನ್ನಜನಕಸ್ಯಾಸೀಜ್ಜನನೀ ಸ್ವಾಮಿನೀ ಗೃಹೇ ॥ ೭೨

ಸಾ ಸ್ನುಷಾಂ ಕೀರ್ತಿಸೇನಾಂ ತಾಂ ಪಶ್ಯಂತೀ ಪತಿಸಂಮತಾಮ್ ।
ಕ್ರುಧಾ ಜ್ವಲಂತೀ ಪುತ್ರಸ್ಯ ಪರೋಕ್ಷಮಕದರ್ಥಯತ್ ॥ ೭೩

ಕೀರ್ತಿಸೇನಾ ಚ ಸಾ ಪತ್ಯುರ್ವಕ್ತುಂ ನೈವ ಶಶಾಕ ತತ್ ।
ಕಷ್ಟಾ ಹಿ ಕುಟಿಲಶ್ವಶ್ರೂಪರತಂತ್ರಾ ವಧೂಸ್ಥಿತಿಃ ॥ ೭೪

ಏಕದಾ ಸಾ ಪತಿಸ್ತಸ್ಯಾ ದೇವಸೇನೋ ವಣಿಜ್ಯಯಾ ।
ಗಂತುಂ ಪ್ರವವೃತೇ ಬಂಧುಪ್ರೇರಿತೋ ವಲಭೀಂ ಪುರೀಮ್ ॥ ೭೫

ತತಃ ಸಾ ಕೀರ್ತಿಸೇನಾ ತಂ ಪತಿಮೇವಮಭಾಷತ ।
ಇಯಚ್ಚಿರಂ ಮಯಾ ನೈತದಾರ್ಯಪುತ್ರ ತವೋದಿತಮ್ ॥ ೭೬

ಕದರ್ಥಯತಿ ಮಾಮೇಷಾ ತವಾಂಬಾ ತ್ವಯ್ಯಪಿ ಸ್ಥಿತೇ ।
ತ್ವಯಿ ತು ಪ್ರೋಷಿತೇ ಕಿಂ ಮೇ ಕುರ್ಯಾದಿತಿ ನ ವೇದ್ಮ್ಯಹಮ್ ॥ ೭೭

೭೮. ಅದನ್ನು ಕೇಳಿ ಗಾಬರಿಗೊಂಡ ದೇವಸೇನನು ಪತ್ನಿಯ ಮೇಲಿನ ಪ್ರೀತಿಯಿಂದ ಭಯದಿಂದ ಮೆಲ್ಲನೆ ತಾಯಿಯ ಬಳಿ ಹೋಗಿ ನಮಸ್ಕರಿಸಿ ಹೇಳಿದನು.

೭೯. "ಅಮ್ಮ, ನಾನು ಹೊರಟುಹೋಗುತ್ತಿರುವುದರಿಂದ ಕೀರ್ತಿಸೇನೆಯನ್ನು ನೀನು ನೋಡಿಕೊಳ್ಳಬೇಕು. ಅವಳು ಒಳ್ಳೆಯ ಕುಲದವಳು. ಅವಳ ಬಗ್ಗೆ ಅಸಡ್ಡೆಯನ್ನು ಹೊಂದಬೇಡ' ಎಂದನು.

೮೦–೮೧. ಅದನ್ನು ಕೇಳಿ ಅವಳು ಕೀರ್ತಿಸೇನೆಯನ್ನು ಕರೆದು ದುರುಗಟ್ಟಿಕೊಂಡು ನೋಡಿ ದೇವಸೇನನಿಗೆ ಹೇಳಿದಳು. "ಇವಳಿಗೆ ನಾನೇನು ಮಾಡಿದ್ದೇನೆ ಕೇಳು. ಇವಳು ನಿನ್ನನ್ನು ಹೀಗೆ ಪ್ರೇರೇಪಿಸಿ ಮನೆಯನ್ನು ಒಡೆಯುವವಳು. ನನಗೆ ನೀನೂ ಒಂದೇ ಅವಳು ಒಂದೇ' ಎಂದಳು.

೮೨. ಈ ಮಾತನ್ನು ಕೇಳಿ ದೇವಸೇನನು ನಿಶ್ಚಿಂತೆಯಿಂದ ಇದ್ದನು. ತಾಯಿಯ ಪ್ರೀತಿಯ ತೋರಿಕೆಯ ಮಾತುಗಳಿಗೆ ಯಾರು ತಾನೆ ಮರುಳಾಗುವುದಿಲ್ಲ?

೮೩. ಕೀರ್ತಿಸೇನೆಯು ಉದ್ವೇಗದಿಂದ ಮುಗುಳ್ನಕ್ಕು ಸುಮ್ಮನಿದ್ದಳು. ಮಾರನೆಯ ದಿನ ದೇವಸೇನನು ವಲಭಿಗೆ ಹೊರಟು ಹೋದನು.

೮೪. ಆಮೇಲೆ ಅವನ ತಾಯಿಯು ಕ್ರಮೇಣ ವಿರಹತಾಪವನ್ನು ಅನುಭವಿಸುತ್ತಿದ್ದ ಕೀರ್ತಿಸೇನೆಯ ದಾಸಿಯರನ್ನೆಲ್ಲ ಕೆಲಸದಿಂದ ಬಿಡಿಸಿದಳು.

---

ತಚ್ಛ್ರುತ್ವಾ ಸ ಸಮುದ್ಭ್ರಾಂತಃ ತತ್ಸ್ನೇಹಾತ್ ಸಭಯಃ ಶನೈಃ ।
ದೇವಸೇನಸ್ತದಾ ಗತ್ವಾ ಮಾತರಂ ಪ್ರಣತೋಽಬ್ರವೀತ್ ॥ ೭೮
ಕೀರ್ತಿಸೇನಾಧುನಾ ಹಸ್ತೇ ತವಾಂಬ ಪ್ರಸ್ಥಿತಸ್ಯ ಮೇ ।
ನಾಸ್ಯಾ ನಿಃಸ್ನೇಹತಾ ಕಾರ್ಯಾ ಕುಲೀನತನಯಾ ಹ್ಯಸೌ ॥ ೭೯
ತಚ್ಛ್ರುತ್ವಾ ಕೀರ್ತಿಸೇನಾಂ ತಾಮಾಹೂಯೋದ್ವರ್ತಿತೇಕ್ಷಣಾ ।
ತಂ ದೇವಸೇನಂ ಮಾತಾ ಸಾ ತತ್ಕಾಲಂ ಸಮಭಾಷತ ॥ ೮೦
ಕೃತಂ ಮಯಾ ಕಿಂ ಪೃಚ್ಛೈತಾಮೇವಂ ತ್ವಾಂ ಪ್ರೇರಯತ್ಯಸೌ ।
ಗೃಹಭೇದಕರೀ ಪುತ್ರ ಮಮ ತು ದ್ವೌ ಯುವಾಂ ಸಮೌ ॥ ೮೧
ಶ್ರುತ್ವೈತಚ್ಛಾಂತಚಿತ್ತೋಽಭೂತ್ತತ್ಕೃತೇ ಸ ವಣಿಗ್ವರಃ ।
ವ್ಯಾಜಸಪ್ರಣಯೈರ್ವಾಕ್ಯೈರ್ಜನನ್ಯಾ ಯೋ ನ ವಂಚ್ಯತೇ ॥ ೮೨
ಕೀರ್ತಿಸೇನಾ ತು ಸಾ ತೂಷ್ಣೀಮಾಸೀದುದ್ವೇಗಸಸ್ಮಿತಾ ।
ದೇವಸೇನಸ್ತು ಸೋಽನ್ಯೇದ್ಯುಃ ಪ್ರತಸ್ಥೇ ವಲಭೀಂ ವಣಿಕ್ ॥ ೮೩
ತತಸ್ತದ್ವಿರಹಕ್ಲೇಶಜುಷಸ್ತಸ್ಯಾಃ ಕ್ರಮೇಣ ಸಾ ।
ತನ್ಮಾತಾ ಕೀರ್ತಿಸೇನಾಯಾ ದಾಸೀಃ ಪಾರ್ಶ್ವಾತ್ ನ್ಯವಾರಯತ್ ॥ ೮೪

೮೫. ತನ್ನ ಸ್ವಂತ ಸೇವಕಿಯೊಡನೆ ಸಂಕೇತ ಮಾಡಿಕೊಂಡು ಅವಳ ಮೂಲಕ ಅವಳನ್ನು ಒಳಗಿನ ಮನೆಗೆ ರಹಸ್ಯವಾಗಿ ಕರೆಸಿ ಬಟ್ಟೆ ಬಿಚ್ಚಿಸಿದಳು.

೮೬. 'ಪಾಪಿ, ನನ್ನನ್ನು ಮಗನಿಂದ ದೂರಮಾಡುತ್ತೀಯಾ ?' ಎಂದು ಹೇಳಿ ಜಡೆ ಹಿಡಿದು ಎಳೆದು ಕಾಲು ಹಲ್ಲು ಮತ್ತು ಉಗುರುಗಳಿಂದ ಅವಳ ಮೈಯಲ್ಲಾ ಗಾಯವಾಗುವಂತೆ ದಾಸಿಯೊಡನೆ ಸೇರಿಕೊಂಡು ಮಾಡಿದಳು.

೮೭–೮೮. ಬಲವಾದ ಚಿಲಕವೂ ಬಾಗಿಲೂ ಇದ್ದ ನೆಲಮಾಳಿಗೆಯಲ್ಲಿ ಸೇರಿಸಿಟ್ಟಿದ್ದ ಸಾಮಾನುಗಳನ್ನೆಲ್ಲ ತೆಗೆದು ಅಲ್ಲಿ ಸೊಸೆಯನ್ನು ಕೂಡಿಹಾಕಿ ಪ್ರತಿದಿನವೂ ಸಂಜೆಹೊತ್ತಿಗೆ ಮಣ್ಣಿನ ಪಾತ್ರೆಯಲ್ಲಿ ಅರ್ಧದಷ್ಟು ಅನ್ನವನ್ನು ಕೊಡುತ್ತಿದ್ದಳು.

೮೯. ಇವಳ ಗಂಡನು ದೂರದ ಊರಿನಲ್ಲಿರುವಾಗಲೇ ಇವಳು ತಾನೇ ಸತ್ತು ಹೋಗಬಹುದು. ಆಗ ಇವಳನ್ನು ತೆಗೆದು ಹಾಕಿ ಎಷ್ಟೋ ದಿವಸಗಳ ಹಿಂದೆಯೇ ಓಡಿಹೋದಳು ಎಂದು ಅವನಿಗೆ ಹೇಳಿದರಾಯಿತು ಎಂದುಕೊಂಡಳು.

೯೦. ದುಷ್ಟೆಯಾದ ಅತ್ತೆಯು ನೆಲಮಾಳಿಗೆಗೆ ಹಾಕಿದ್ದರಿಂದ ಸುಖವಾಗಿ ಜೀವಿಸಬೇಕಾಗಿದ್ದ ಕೀರ್ತಿಸೇನೆಯು ಅಳುತ್ತಾ ಚಿಂತಿಸಿದಳು.

೯೧. ಶ್ರೀಮಂತ ಗಂಡ, ಒಳ್ಳೆ ಕುಲ, ನನ್ನ ಒಳ್ಳೆಯ ನಡತೆ–ಇಷ್ಟಿದ್ದರೂ ಅತ್ತೆಯ ದೆಸೆಯಿಂದ ಈ ವಿಪತ್ತು ಬಂದಿದೆ.

---

ಕೃತ್ವಾ ಚ ಗೃಹಚಾರಿಣ್ಯಾ ಸ್ವಚೇಟ್ಯಾ ಸಹ ಸಂವಿದಮ್ ।
ಆನಾಯ್ಯಾಭ್ಯಂತರಂ ಗುಪ್ತಂ ತಾಂ ವಿವಸ್ತ್ರಾಂ ಚಕಾರ ಸಾ ॥ ೮೫
ಪಾಪೇ ಹರಸಿ ಮೇ ಪುತ್ರಮಿತ್ಯುಕ್ತ್ವಾ ಸಕಚಗ್ರಹಮ್ ।
ಪಾದೈರ್ದಂತೈರ್ನಖೈಶ್ಚೈತಾಂ ಚೇಟ್ಯಾ ಸಮಮಪಾಟಯತ್ ॥ ೮೬
ಚಿಕ್ಷೇಪ ಚೈನಾಂ ಭೂಗೇಹೇ ಸಪಿಧಾನೇ ದೃಢಾರ್ಗಲೇ ।
ತತ್ರತ್ಯೇಽಭ್ಯುದ್ಧೃತಾಶೇಷಪೂರ್ವಜಾತಾರ್ಥಸಂಚಯೇ ॥ ೮೭
ನ್ಯಧಾಚ್ಚ ತಸ್ಯಾಸ್ತತ್ರಾಂತಃ ಪ್ರತ್ಯಹಂ ಸಾ ದಿನಾತ್ಯಯೇ ।
ಪಾಪಾ ತಾದೃಗವಸ್ಥಾಯಾ ಭಕ್ತ್ಯಾರ್ಧಶರಾವಕಮ್ ॥ ೮೮
ಅಚಿಂತಯಚ್ಚ ದೂರಸ್ಥೇ ಪತ್ಯಾವೇವಂ ಮೃತಾ ಸ್ವಯಮ್ ।
ಇಮಾಂ ವ್ಯುತ್ಥಾಪ್ಯ ಯಾತೇತಿ ವಕ್ಷ್ಯಾಮಿ ದಿವಸೈರಿತಿ ॥ ೮೯
ಇತ್ಥಂ ಭೂಮಿಗೃಹೇ ಕ್ಷಿಪ್ತಾ ಶ್ವಶ್ರ್ವಾ ಪಾಪಕೃತಾ ತಯಾ ।
ಸುಖಾರ್ಹಾ ರುದತೀ ತತ್ರ ಕೀರ್ತಿಸೇನಾ ವ್ಯಚಿಂತಯತ್ ॥ ೯೦
ಆಢ್ಯಃ ಪತಿಃ ಕುಲೇ ಜನ್ಮ ಸೌಭಾಗ್ಯಂ ಸಾಧುವೃತ್ತತಾ ।
ತದಪ್ಯಹೋ ಮಮ ಶ್ವಶ್ರೂಪ್ರಸಾದಾದೀದೃಶೀ ವಿಪತ್ ॥ ೯೧

೬೨. ಅತ್ತೆ, ನಾದಿನಿಯರ ಕಾಟ, ಅಸೌಭಾಗ್ಯ ಮುಂತಾದುವುಗಳಿಂದ ಹೆಣ್ಣಿನ ಜನ್ಮ ದೂಷಿತವಾಗಿರುವುದರಿಂದ ಹೆಣ್ಣು ಹುಟ್ಟುವುದೇ ಬೇಡ ಎನ್ನುತ್ತಾರೆ ಬಂಧುಗಳು.

೬೩. ಹೀಗೆ ನೆಲಮಾಳಿಗೆಯಲ್ಲಿದ್ದು ಶೋಕಿಸುತ್ತಿದ್ದ ಕೀರ್ತಿಸೇನೆ ಆ ಕೋಣೆಯ ಮೂಲೆಯಲ್ಲಿ ಒಂದು ಕಬ್ಬಿಣದ ಸರಳು ಅಕಸ್ಮಾತ್ತಾಗಿ ಕಣ್ಣಿಗೆ ಬಿದ್ದಿತು. ಅದು ಅವಳ ದುಃಖ ಪರಿಹಾರಕ್ಕಾಗಿ ಬ್ರಹ್ಮನು ಕಿತ್ತು ಮೇಲೆತ್ತಿದ ಮನಸ್ಸಿನ ಶಲ್ಯದಂತಿತ್ತು.

೬೪–೬೬. ಅವಳು ಆ ಕಬ್ಬಿಣದ ಸರಳಿನಿಂದ ಸುರಂಗ ತೋಡಿದಳು. ಹಾಗೆ ತೋಡಿದಾಗ ಅದೃಷ್ಟವಶಾತ್ ಅವಳ ಮಲಗುವ ಕೋಣೆಯನ್ನೇ ಕೀರ್ತಿಸೇನೆ ತಲುಪುವಂತಾಯಿತು. ಅಲ್ಲಿದ್ದ ತನ್ನ ಬಟ್ಟೆಗಳನ್ನೂ ಹಾಗೂ ಚಿನ್ನವನ್ನೂ ತೆಗೆದುಕೊಂಡು, ತನ್ನ ಮಹಾಪುಣ್ಯದ ಪ್ರತಿರೂಪದಂತಿರುವ ದೀಪವನ್ನು ಹಿಡಿದು, ರಹಸ್ಯವಾಗಿ ಬೆಳಗಾಗುವ ಮುನ್ನವೇ ಊರನ್ನು ಬಿಟ್ಟಳು.

೬೭–೬೮. ಈ ಸ್ಥಿತಿಯಲ್ಲಿ ತವರು ಮನೆಗೆ ಹೋಗುವುದು ತರವಲ್ಲ. ಅಲ್ಲಿ ಇರುವವರು ಕೇಳಿದರೆ ಏನು ಹೇಳಲಿ ? ಅವರಾದರೂ ನನ್ನನ್ನು ನಂಬುತ್ತಾರೆಯೇ ? ಆದ್ದರಿಂದ ಉಪಾಯದಿಂದ ನನ್ನ ಗಂಡನ ಹತ್ತಿರವೇ ಹೋಗಬೇಕು. ಪತಿವ್ರತೆಯರಿಗೆ ಇಹಕ್ಕೂ ಪರಕ್ಕೂ ಗಂಡನೇ ಗತಿ”

---

ಏತದರ್ಥಂ ಚ ನಿಂದಂತಿ ಕನ್ಯಾನಾಂ ಜನ್ಮ ಬಾಂಧವಾಃ ।
ಶ್ವಶ್ರೂನನಂದೃಸಂತ್ರಾಸಮಸೌಭಾಗ್ಯಾದಿದೂಷಿತಮ್ ॥ ೬೨
ಇತಿ ಶೋಚಂತ್ಯಕಸ್ಮಾತ್ಸಾ ಕೀರ್ತಿಸೇನಾ ಖನಿತ್ರಕಮ್ ।
ಲೇಭೇಽಸ್ಮಾತ್ ಭೂಗೃಹಾದ್ಧಾತ್ರಾ ಮನಃಶಲ್ಯಮಿವೋದ್ಧೃತಮ್ ॥ ೬೩
ಅಯೋಮಯೇನ ತೇನಾತ್ರ ಸುರಂಗಾಂ ನಿಚಖಾನ ಸಾ ।
ತಾವದ್ಯಾವತ್ತಯೋತ್ತಸ್ಥೇ ದೈವಾತ್ ಸ್ವಾದ್ವಾಸವೇಶ್ಮನಃ ॥ ೬೪
ದದರ್ಶ ಚ ಪ್ರದೀಪೇನ ಪ್ರಾಕ್ತನೇನಾಥ ತತ್ ಗೃಹಮ್ ।
ಅಕ್ಷೀಣೇನ ಕೃತಾಲೋಕಾ ಧರ್ಮೇಣೇವ ನಿಜೇನ ಸಾ ॥ ೬೫
ಆದಾಯಾತಶ್ಚ ವಸ್ತ್ರಾಣಿ ಸ್ವಂ ಸ್ವರ್ಣಂ ಚ ನಿಶಾಕ್ಷಯೇ ।
ನಿರ್ಗತ್ಯೈವ ತತೋ ಗುಪ್ತಂ ಜಗಾಮ ನಗರಾದ್ಬಹಿಃ ॥ ೬೬
ಏವಂವಿಧಾಯಾ ಗಂತುಂ ಮೇ ನ ಯುಕ್ತಂ ಪಿತೃವೇಶ್ಮನಿ ।
ಕಿಂ ವಕ್ಷ್ಯೇ ತತ್ರ ಲೋಕಶ್ಚ ಪ್ರತ್ಯೇಷ್ಯತಿ ಕಥಂ ಮಮ ॥ ೬೭
ಅತಃ ಸ್ವಯುಕ್ತ್ಯಾ ಗಂತವ್ಯಂ ಪತ್ಯುರೇವಾಂತಿಕಂ ಮಯಾ ।
ಇಹಾಮುತ್ರ ಚ ಸಾಧ್ವೀನಾಂ ಪತಿರೇಕಾ ಗತಿರ್ಯತಃ ॥ ೬೮

೯೯–೧೦೦. ಈ ರೀತಿಯಾಗಿ ಯೋಚಿಸಿ ಕೆರೆಯಲ್ಲಿ ಸ್ನಾನಮಾಡಿ ಕೀರ್ತಿಸೇನೆಯು ದೊಡ್ಡದಾಗಿ ಕಾಣಿಸುವ ರಾಜಕುಮಾರನ ವೇಷವನ್ನು ಧರಿಸಿ ಒಂದು ಅಂಗಡಿಗೆ ಹೋಗಿ ಸ್ವಲ್ಪ ಬಂಗಾರವನ್ನು ಮಾರಿ ಆ ದಿನ ಒಬ್ಬ ವ್ಯಾಪಾರಿಯ ಮನೆಯಲ್ಲಿ ವಾಸವಾಗಿದ್ದಳು.

೧೦೧–೧೦೨. ಮಾರನೆಯ ದಿನ ವಲಭಿಯ ಕಡೆಗೆ ಹೊರಟಿದ್ದ ಸಮುದ್ರಸೇನ ಎಂಬ ವ್ಯಾಪಾರಿಯ ಜೊತೆಯಲ್ಲಿ ಅವನ ಸೇವಕರೊಡನೆ ರಾಜಪುತ್ರನ ವೇಷಹಾಕಿಕೊಂಡೆ ಮೊದಲೇ ಹೊರಟು ಹೋಗಿದ್ದ ಪತಿಯನ್ನು ಸೇರಲು ವಲಭಿಯ ಕಡೆಗೆ ಹೊರಟಳು.

೧೦೩–೧೦೪. ವ್ಯಾಪಾರಿಯೊಡನೆ ತನ್ನ ಸಂಬಂಧಿಕರು ಪೀಡಿಸುತ್ತಿರುವುದರಿಂದ ಸ್ವಜನರು ಇರುವ ವಲಭಿಗೆ ಅವನೊಡನೆ ಬರುತ್ತೇನೆ ಎಂದಳು. ಅದನ್ನು ಕೇಳಿ ವ್ಯಾಪಾರಿಯು ಈ ರಾಜಕುಮಾರನು ಒಬ್ಬ ಶ್ರೀಮಂತನೇ ಆಗಿರಬೇಕು ಎಂದು ಭಾವಿಸಿ ಪ್ರಯಾಣದಲ್ಲಿ ಅವಳನ್ನು ಉಪಚರಿಸಿ ನೋಡಿಕೊಂಡನು.

---

ಇತ್ಯಾಲೋಚ್ಯ ಚಕಾರಾತ್ರ ತಡಾಗಾಂಬುಕೃತಾಪ್ಲವಾ ।
ರಾಜಪುತ್ರಸ್ಯ ವೇಷಂ ಸಾ ಕೀರ್ತಿಸೇನಾ ಸುಬೃಂಹಿತಮ್ ॥ ೯೯
ತತೋ ಗತ್ವಾಪಣೇ ದತ್ವಾ ಕಿಂಚಿನ್ಮೂಲ್ಯೇನ ಕಾಂಚನಮ್ ।
ಕಸ್ಯಾಪಿ ವಣಿಜೋ ಗೇಹೇ ದಿನೇ ತಸ್ಮಿನ್ನುವಾಸ ಸಾ ॥ ೧೦೦
ಅನ್ಯೇದ್ಯುಸ್ತತ್ರ ಚಕ್ರೇ ಚ ವಲಭೀಂ ಗಂತುಮಿಚ್ಛತಾ ।
ಸಮುದ್ರಸೇನಾನಾಮ್ನಾ ಸಾ ವಣಿಜಾ ಸಹ ಸಂಸ್ತವಮ್ ॥ ೧೦೧
ತೇನ ಸಾಕಂ ಸಭೃತ್ಯೇನ ಪ್ರಾಪ್ತುಂ ಪ್ರಾಕ್‌ಪ್ರಸ್ಥಿತಂ ಪತಿಮ್ ।
ಸದ್ರಾಜಪುತ್ರವೇಷಾ ಸಾ ಪ್ರತಸ್ಥೇ ವಲಭೀಂ ಪ್ರತಿ ॥ ೧೦೨
ಜಗಾದ ಚ ತಂ ವಣಿಜಂ ಗೋತ್ರಜೈರಸ್ಮಿ ಬಾಧಿತಃ ।
ತತ್ ತ್ವಯಾ ಸಹ ಗಚ್ಛಾಮಿ ವಲಭೀಂ ಸ್ವಜನಾಂತಿಕಮ್ ॥ ೧೦೩
ತತ್‌ಶ್ರುತ್ವಾ ಸ ವಣಿಕ್ಪುತ್ರೋ ಮಾರ್ಗೇ ಪರ್ಯಚರಚ್ಚ ತಾಮ್ ।
ರಾಜಪುತ್ರೋ ಧ್ರುವಂ ಭವ್ಯಃ ಕೋಽಪ್ಯಸಾವಿತಿ ಗೌರವಾತ್ ॥ ೧೦೪

೧೦೫–೧೦೬. ಆ ವ್ಯಾಪಾರಿಯು ಹೆಚ್ಚು ಶುಲ್ಕವನ್ನು ಕೊಡುವುದನ್ನು ತಪ್ಪಿಸಿಕೊಳ್ಳಲು ಜನರು ಸಂಚರಿಸುವ ಮಾರ್ಗವನ್ನು ಬಿಟ್ಟು ಬೇರೆ ದಾರಿಯನ್ನು ಹಿಡಿದು ಕಾಡಿನ ಮಾರ್ಗದಲ್ಲಿ ಹೋಗುತ್ತಾ ದಿನವೆಲ್ಲಾ ಅಲೆದಾಡಿ ಸಾಯಂಕಾಲದ ಹೊತ್ತಿಗೆ ಜೊತೆಗಾರರೊಡನೆ ಒಂದು ಕಡೆ ನೆಲೆ ಊರಿದನು. ಆಗ ಒಂದು ಹೆಣ್ಣು ನರಿಯು ಯಮನ ದೂತಿಯಂತೆ ಭಯಂಕರವಾಗಿ ಶಬ್ದ ಮಾಡಿತು.

೧೦೭–೧೦೮. ಅದರಿಂದ ಕಳ್ಳರ ಮತ್ತು ಇತರ ರೀತಿಯ ಅಪಾಯವನ್ನು ಊಹಿಸಿ ಆ ದನಿಯ ಅರ್ಥ ತಿಳಿದ ವ್ಯಾಪಾರಿಗಳ ಗುಂಪು ಆತಂಕಗೊಂಡಿರಲು ಕೈಯಲ್ಲಿ ಆಯುಧಗಳನ್ನು ಹಿಡಿದ ಕಳ್ಳರ ಗುಂಪೊಂದು ಆ ರಾತ್ರಿಯಲ್ಲಿ ಇವರು ಇದ್ದ ಕಡೆಗೆ ಬಂದಿತು. ಅದನ್ನು ನೋಡಿ ಕೀರ್ತಿಸೇನೆಯು ಚಿಂತಿಸಿದಳು.

೧೦೯–೧೧೧. ಪಾಪಿಗಳು ಮಾಡುವ ಕೆಟ್ಟಕೆಲಸಗಳು ಸಾಲು ಸಾಲಾಗಿ ಬೆಳೆಯುತ್ತಾ ಹೋಗುತ್ತವೆ. ನನ್ನ ಅತ್ತೆಯ ಹಿಂಸೆ ಇಲ್ಲಿಯೂ ಫಲ ನೀಡುತ್ತಿದೆ. ಮೊದಲು ಮೃತ್ಯುವಿನಂತೆ ಅತ್ತೆಯ ಕೋಪಕ್ಕೆ ಬಲಿಯಾಗದೆ. ಮತ್ತೊಂದು ಗರ್ಭವನ್ನು ಪ್ರವೇಶಿಸಿದಂತೆ ನೆಲಮಾಳಿಗೆಯನ್ನು ಪ್ರವೇಶಿಸಿದೆ. ಅದೃಷ್ಟವಶಾತ್ ಅಲ್ಲಿಂದ ಪುನರ್ಜನ್ಮವೋ ಎಂಬಂತೆ ಹೊರಬಂದೆ. ಈಗ ಇಲ್ಲಿಗೆ ಬಂದು ಮತ್ತೆ ಸಾವಿನ ದವಡೆಗೆ ಸಿಕ್ಕಿದ್ದೇನೆ.

---

ಯಯೌ ಚ ಸ ವಣಿಕ್ಸಾರ್ಥಃ ಪುರಸ್ಕೃತ್ಯಾಟವೀಪಥಮ್ ।
ಬಹುಶುಲ್ಕಭಯತ್ಯಕ್ತಮಾರ್ಗಾಂತರಜನಾಶ್ರಿತಮ್ ॥ ೧೦೫
ದಿನೈಃ ಪ್ರಾಪ್ಯಾಟವೀದ್ವಾರಂ ಸಾಯಂ ಸಾರ್ಥೇ ಕೃತಸ್ಥಿತೌ ।
ಚಕ್ರೇ ಕೃತಾಂತದೂತೀವ ಶಬ್ದಂ ಭಯಕರಂ ಶಿವಾ ॥ ೧೦೬
ತದ್ಬುದ್ಧ್ವಾ ವಣಿಗ್ಲೋಕೇ ಚೌರಾದ್ಯಾಪಾತಶಂಕಿನಿ ।
ಹಸ್ತೇ ಗೃಹೀತಶಸ್ತ್ರೇಷು ಸರ್ವತೋ ರಿಪುರಕ್ಷಿಷು ॥ ೧೦೭
ಧ್ವಾಂತೇ ಧಾವತಿ ದಸ್ಯೂನಾಮಗ್ರಯಾಯಿಬಲೋಪಮೇ ।
ಕೀರ್ತಿಸೇನಾ ತದಾಲೋಕ್ಯ ಪುಂವೇಷಾ ಸಾ ವ್ಯಚಿಂತಯತ್ ॥ ೧೦೮
ಅಹೋ ದುಷ್ಕೃತಿನಾಂ ಕರ್ಮ ಸಂತಾನೇನೈವ ವರ್ಧತೇ ।
ಪಶ್ಯ ಶ್ವಶ್ರೂಕೃತಾ ವ್ಯಾಪದಿಹಾಪಿ ಫಲಿತಾ ಮಮ ॥ ೧೦೯
ಪ್ರಥಮಂ ಮೃತ್ಯುನೇವಾಹಂ ಶ್ವಶ್ರೂಕೋಪೇನ ಭಕ್ಷಿತಾ ।
ಪ್ರವಿಷ್ಟಾ ಭೂಗೃಹಂ ಪಶ್ಚಾತ್ ಗರ್ಭವಾಸಮಿವಾಪರಮ್ ॥ ೧೧೦
ದೈವಾತ್ತತೋಽಪಿ ನಿಷ್ಕ್ರಾಂತಾ ಜಾತೇವ ಪುನರಪ್ಯಹಮ್ ।
ಇಹಾದ್ಯಾಗತ್ಯ ಸಂಪ್ರಾಪ್ತಾ ಭೂಯೋ ಜೀವಿತಸಂಶಯಮ್ ॥ ೧೧೧

೧೧೨. ಇಲ್ಲಿ ಕಳ್ಳರು ನನ್ನನ್ನು ಸಾಯಿಸಿದರೆ ನನ್ನ ಶತ್ರುವಾದ ಅತ್ತೆಯು ನಾನು ಯಾರನ್ನೋ ಕಟ್ಟಿಕೊಂಡು ಹೋದೆ ಎಂದು ನನ್ನ ಗಂಡನಿಗೆ ಹೇಳುತ್ತಾಳೆ.

೧೧೩. ನನ್ನ ಬಟ್ಟೆಯನ್ನು ಯಾರಾದರೂ ಕಿತ್ತುಕೊಂಡರೆ ಹೆಣ್ಣು ಎಂದು ಗೊತ್ತಾಗಿ ಶೀಲಭಂಗವಾದೀತು. ಅದಕ್ಕಿಂತಲೂ ಮರಣವೇ ಲೇಸು.

೧೧೪. ಆದ್ದರಿಂದ ಈ ವ್ಯಾಪಾರಿಯ ಚಿಂತೆ ಬಿಟ್ಟು ನನ್ನನ್ನು ಕಾಪಾಡಿಕೊಳ್ಳುತ್ತೇನೆ. ಹೆಣ್ಣಿಗೆ ಪಾತಿವ್ರತ್ಯಕ್ಕಿಂತ ಸ್ನೇಹವು ಮುಖ್ಯವಲ್ಲ.

೧೧೫-೧೧೬ ಎಂದು ತೀರ್ಮಾನಿಸಿ ಭೂಮಿಯು ದಯೆಯಿಂದ ಕೊಟ್ಟ ಅಡಗುದಾಣದಂತಿದ್ದ ಮರದ ನಡುವಣ ಪೊಟರೆಯೊಂದರೊಳಗೆ ಅಡಗಿಕೊಂಡು ಹುಲ್ಲು ಎಲೆ ಮೊದಲಾದವುಗಳಿಂದ ಮುಚ್ಚಿಕೊಂಡು ಗಂಡನನ್ನು ಸೇರುವ ಇಚ್ಛೆಯಿಂದ ಅವಿತು ಕುಳಿತಳು.

೧೧೭ ಆ ರಾತ್ರಿ ಕಳ್ಳರ ದೊಡ್ಡ ಗುಂಪು ಆಯುಧಗಳಿಂದ ವ್ಯಾಪಾರಿಗಳ ಮೇಲೆ ಇದ್ದಕ್ಕಿದ್ದಂತೆ ಸುತ್ತುವರಿದು ಆಕ್ರಮಣ ಮಾಡಿತು.

೧೧೮. ಗರ್ಜಿಸುತ್ತಿದ್ದ ಆ ಕಳ್ಳರೆಂಬ ಮೋಡಗಳ ಮಧ್ಯೆ, ಶಸ್ತ್ರಗಳೆಂಬ ಮಿಂಚು ಮೂಡಿ ರಕ್ತವೆಂಬ ಧಾರಾಕಾರ ಮಳೆಯು ಅಲ್ಲಿ ಸಂಭವಿಸಿತು. ಅದು ಕಾಳಗದ ದುರ್ದಿನವಾಗಿ ಹೋಯಿತು.

---

ಚೋರೈರ್ಯದಿ ಹತಾಸ್ಮೀಹ ತತ್ಶ್ವಶ್ರೂರ್ಮಮ ವೈರಿಣೀ ।
ಅನ್ಯಾಸಕ್ತಾ ಗತಾ ಕ್ವಾಪೀತ್ಯಭಿಧಾಸ್ಯತಿ ಮೇ ಪತಿಮ್ ॥ ೧೧೨
ಸ್ತ್ರೀತಿ ಜ್ಞಾತಾಸ್ಮಿ ಕೇನಾಪಿ ಹೃತವಸ್ತ್ರಾಂತರಾ ಯದಿ ।
ತತೋ ಮೃತ್ಯುರ್ಮಮ ಶ್ರೇಯಾನ್ನ ಪುನಃ ಶೀಲವಿಪ್ಲವಃ ॥ ೧೧೩
ತೇನ ಚಾತ್ಮೈವ ಮೇ ರಕ್ಷ್ಯೋ ನಾಪೇಕ್ಷ್ಯೋಽಯಂ ಸುಹೃದ್ವಣಿಕ್ ।
ಸತೀಧರ್ಮೋ ಹಿ ಸುಸ್ತ್ರೀಣಾಂ ಚಿಂತ್ಯೋ ನ ಸುಹೃದಾದಯಃ ॥ ೧೧೪
ಇತಿ ನಿಶ್ಚಿತ್ಯ ಸಾ ಪ್ರಾಪ ಚಿನ್ವತೀ ತರುಮಧ್ಯಗಮ್ ।
ಗರ್ತಂ ಗೃಹಾಕೃತಿಂ ದತ್ತಂ ಕೃಪಯೇವಾಂತರಂ ಭುವಾ ॥ ೧೧೫
ತತ್ರ ಪ್ರವಿಶ್ಯ ಚಾಚ್ಛಾದ್ಯ ತೃಣಪರ್ಣಾದಿಭಿಸ್ತನುಮ್ ।
ತಸ್ಥೌ ಸಂಧಾರ್ಯಮಾಣಾ ಸಾ ಪತಿಸಂಗಮವಾಂಛಯಾ ॥ ೧೧೬
ತತೋ ನಿಶೀಥೇ ಸಹಸಾ ನಿಪತ್ಯೈವೋದ್ಯತಾಯುಧಾ ।
ಚೌರಸೇನಾ ಸುಮಹತೀ ಸಾರ್ಥಂ ವ್ಯೆಷ್ಟಯತಿ ಸ್ಮ ತಮ್ ॥ ೧೧೭
ನಿನದದ್ದಸ್ಯುಕಾಲಾಭ್ರಂ ಶಸ್ತ್ರಜ್ವಾಲಾಚಿರಪ್ರಭಮ್ ।
ತತಃ ಸರುಧಿರಾಸಾರಂ ತತ್ರಾಭೂದ್ಯುದ್ಧದುರ್ದಿನಮ್ ॥ ೧೧೮

೧೯. ಬಲಿಷ್ಠರಾದ ಕಳ್ಳರು ಸಮುದ್ರಸೇನ ಮತ್ತು ಅವನ ಸಂಗಡಿಗರನ್ನು ಕೊಂದು ಧನಕನಕವನ್ನು ದೋಚಿಕೊಂಡು ಹೋದರು.

೨೦. ಕೀರ್ತಿಸೇನೆಯು ಆ ಕೋಲಾಹಲವನ್ನು ಕೇಳಿಯೂ ಬದುಕಿದಳೆಂದರೆ ಇದಕ್ಕೆ ವಿಧಿಯೇ ಕಾರಣ.

೨೧. ರಾತ್ರಿ ಕಳೆದು ಸೂರ್ಯೋದಯವಾದ ಮೇಲೆ ಅವಳು ಆ ಮರದ ಮಧ್ಯದ ಪೊಟರೆಯಿಂದ ಹೊರಗೆ ಬಂದಳು.

೨೨-೨೪. ಕುಂದದ ತೇಜಸ್ಸುಳ್ಳ ಪತಿವ್ರತೆಯರನ್ನು ದೇವತೆಗಳೇ ಕಷ್ಟಕಾಲದಲ್ಲಿ ಕಾಪಾಡುತ್ತಾರೆ. ಅದಕ್ಕೋಸ್ಕರವೇ ಆ ನಿರ್ಜನವಾದ ಕಾಡಿನಲ್ಲಿ ಒಂದು ಸಿಂಹವು ಅವಳನ್ನು ನೋಡಿಯೂ ಏನೂ ಮಾಡದೆ ಹೊರಟುಹೋಯಿತು. ಅಷ್ಟುಹೊತ್ತಿಗೆ ಒಬ್ಬ ತಾಪಸನು ಅಲ್ಲಿಗೆ ಬಂದು ಅವಳ ಕಥೆಯನ್ನು ಕೇಳಿ ಸಂತೈಸಿ ಕಮಂಡಲುವಿನಿಂದ ನೀರು ಕೊಟ್ಟು ಮುಂದಿನ ದಾರಿಯನ್ನು ತೋರಿಸಿ ಅದೃಶ್ಯನಾದನು.

೨೫. ಆಗ ಅಮೃತಪಾನದಿಂದಲೋ ಎಂಬಂತೆ ಹಸಿವು ಬಾಯಾರಿಕೆಗಳು ಇಂಗಿದ ಆ ಪತಿವ್ರತೆಯು ತಾಪಸನು ತೋರಿಸಿದ ಮಾರ್ಗದಲ್ಲಿ ಹೊರಟಳು.

---

ಹತ್ವಾ ಸಮುದ್ರಸೇನಂ ಚ ಸಾನುಗಂ ತಂ ವಣಿಕ್ಪತಿಮ್ ।
ಬಲಿನೋಽಥ ಯಯುಶ್ಚೌರಾ ಗೃಹೀತಧನಸಂಚಯಾಃ ॥ ೧೯
ತದಾ ಚ ಕೀರ್ತಿಸೇನಾ ಸಾ ಶ್ರುತಕೋಲಾಹಲಾ ಬಲಾತ್ ।
ಯನ್ನ ಮುಕ್ತಾಸುಭಿಸ್ತತ್ರ ಕಾರಣಂ ಕೇವಲೋ ವಿಧಿಃ ॥ ೨೦
ತತೋ ನಿಶಾಯಾಂ ಯಾತಾಯಾಮುದಿತೇ ತಿಗ್ಮತೇಜಸಿ ।
ನಿರ್ಜಗಾಮ ಚ ಸಾ ತಸ್ಮಾತ್ ಗರ್ತಾದ್ವಿಟಪಮಧ್ಯತಃ ॥ ೨೧
ಕಾಮಂ ಭರ್ತ್ರೇಕಭಕ್ತಾನಾಮವಿಸ್ಖಲಿತತೇಜಸಾಮ್ ।
ದೇವತಾ ಏವ ಸಾಧ್ವೀನಾಂ ತ್ರಾಣಮಾಪದಿ ಕುರ್ವತೇ ॥ ೨೨
ಯತ್ತತ್ರ ನಿರ್ಜನೇಽರಣ್ಯೇ ಸಿಂಹೋ ದೃಷ್ಟ್ವಾಪಿ ತಾಂ ಜಹೌ ।
ನ ಪರಂ ಯಾವದಭ್ಯೇತ್ಯ ಕುತಶ್ಚಿತ್ಕೋಽಪಿ ತಾಪಸಃ ॥ ೨೩
ಪೃಷ್ಟೋದಂತಾಂ ಸಮಾಶ್ವಾಸ್ಯ ಜಲಪಾನಂ ಕಮಂಡಲೋಃ ।
ದತ್ತ್ವೋಪದಿಶ್ಯ ಪಂಥಾನಂ ತಸ್ಯಾಃ ಕ್ವಾಪಿ ತಿರೋದಧೇ ॥ ೨೪
ತತಸ್ತೃಪ್ತಾಮೃತೇನೇವ ಕ್ಷುತ್ಪಿಪಾಸಾವಿನಾಕೃತಾ ।
ತಾಪಸೋಕ್ತೇನ ಮಾರ್ಗೇಣ ಪ್ರತಸ್ಥೇ ಸಾ ಪತಿವ್ರತಾ ॥ ೨೫

೧೨೬-೧೩೦. ತರುವಾಯ ಒಂದು ರಾತ್ರಿ "ಕ್ಷಮಿಸು’ ಎಂದು ಹೇಳುತ್ತಿರುವಂತೆ ತನ್ನ ಕಿರಣಗಳನ್ನು ಹರಡಿ ಅಸ್ತಂಗತನಾದ ಸೂರ್ಯನನ್ನು ನೋಡಿ ಕೀರ್ತಿಸೇನೆಯು ಕಾಡಿನ ದೊಡ್ಡಮರದ ಮನೆಯಂತಿರುವ ಒಂದು ಪೊಟರೆಯನ್ನು ಹೊಕ್ಕಳು. ಅದರ ಬಾಗಿಲನ್ನು ಮತ್ತೊಂದು ಮರದ ತುಂಡಿನಿಂದ ಮುಚ್ಚಿದಳು. ಸಾಯಂಕಾಲವಾದಾಗ ಬಾಗಿಲಿನ ರಂಧ್ರದ ಮೂಲಕ ಒಬ್ಬ ಘೋರಾಕೃತಿಯ ರಾಕ್ಷಸಿಯು ತನ್ನ ಗಂಡು ಮಕ್ಕಳೊಡನೆ ಬರುತ್ತಿರುವುದನ್ನು ನೋಡಿದಳು. ಒಂದು ಕಷ್ಟದಿಂದ ಪಾರಾದೆ ಎಂದು ತಿಳಿದರೆ ಈಗ ಈ ರಾಕ್ಷಸಿಯು ನನ್ನನ್ನು ತಿನ್ನಲು ಬಂದಳು ಎಂದು ಹೆದರಿದಳು. ಅಷ್ಟರಲ್ಲಿ ರಾಕ್ಷಸಿಯು ಮರವನ್ನು ಹತ್ತಿದಳು. ಅವಳ ಮಕ್ಕಳೂ ಅವಳ ಹಿಂದೆಯೇ ಹತ್ತಿ “ಅಮ್ಮ ನಮಗೆ ತಿನ್ನಲು ಈಗಲೇ ಏನನ್ನಾದರೂ ಕೊಡು” ಎಂದು ಕೇಳಿದರು.

---

ಅಥಾಸ್ತಶಿಖರಾರೂಢಂ ಪ್ರಸಾರಿತಕರಂ ರವಿಮ್ ।
ರಾತ್ರಿಮೇಕಾಂ ಕ್ಷಮಸ್ವೇತಿ ವದಂತಮಿವ ವೀಕ್ಷ್ಯ ಸಾ ॥ ೧೨೬
ಮಹತೋಽರಣ್ಯವೃಕ್ಷಸ್ಯ ಗೃಹಾಭಂ ಮೂಲಕೋಟರಮ್ ।
ವಿವೇಶ ಪಿದಧೇ ಚಾಸ್ಯ ದ್ವಾರಮನ್ಯೇನ ದಾರುಣಾ ॥ ೧೨೭
ಪ್ರದೋಷೇ ಚ ದದರ್ಶಾತ್ರ ದ್ವಾರಚ್ಛಿದ್ರಾಂತರೇಣ ಸಾ ।
ರಾಕ್ಷಸೀಮಾಗತಾಂ ಘೋರಾಂ ಬಾಲಕೈರನ್ವಿತಾಂ ಸುತೈಃ ॥ ೧೨೮
ತೀರ್ಣಾನ್ಯವಿಪದದ್ಯಾಹಮನಯಾ ಭಕ್ಷಿತೇತಿ ಸಾ ।
ತ್ರಸ್ತಾ ಯಾವತ್ತರೌ ತಾವದಾರೂಢಾ ತತ್ರ ರಾಕ್ಷಸೀ ॥ ೧೨೯
ಅನ್ವಾರೂಢಾಶ್ಚ ತತ್ಪುತ್ರಾಸ್ತತ್ರ ತಾಂ ಕಿಲ ರಾಕ್ಷಸೀಮ್ ।
ಅಬ್ರುವನ್ನಂಬ ನಃ ಕಿಂಚಿದ್‌ಭಕ್ಷ್ಯಂ ದೇಹೀತಿ ತತ್ಕ್ಷಣಮ್ ॥ ೧೩೦

೧೩೧–೧೩೪. ಆಗ ಅವಳು ತನ್ನ ಮಕ್ಕಳಿಗೆ ಹೇಳಿದಳು. '"ಮಕ್ಕಳೇ, ದೊಡ್ಡ ಸ್ಮಶಾನಕ್ಕೆ ಹೋದರೂ ನನಗೆ ಆಹಾರ ಸಿಗಲಿಲ್ಲ. ಡಾಕಿನಿಯರನ್ನು ಕೇಳಿದರೂ ಅವರೂ ಕೊಡಲಿಲ್ಲ. ದುಃಖದಿಂದ ಭೈರವನನ್ನು ಬೇಡಿಕೊಂಡೆ. ಅವನು ಹೆಸರು ಗೋತ್ರಗಳನ್ನು ಕೇಳಿ ನನಗೆ ಹೇಳಿದನು. "ಭಯಂಕರಳೇ, ಖರದೂಷಣರ ವಂಶದವಳಾದ ನೀನು ಕುಲೀನಳು. ಆದ್ದರಿಂದ ಇಲ್ಲಿಂದ ಸ್ವಲ್ಪವೇ ದೂರದಲ್ಲಿ ಇರುವ ವಸುದತ್ತಪುರಕ್ಕೆ ಹೋಗು. ಅಲ್ಲಿ ವಸುದತ್ತ ಎಂಬ ಧಾರ್ಮಿಕನಾದ ರಾಜನು ಇದ್ದಾನೆ

೧೩೫ ಅವನು ಇಡೀ ಕಾಡನ್ನು ಅದರ ಹೊರಗೆ ಇದ್ದುಕೊಂಡು ರಕ್ಷಿಸುತ್ತಿದ್ದಾನೆ. ಅವನು ಶುಲ್ಕವನ್ನು ತೆಗೆದುಕೊಂಡು ಕಳ್ಳರನ್ನು ಬಂಧಿಸುತ್ತಾನೆ.

೧೩೬ ಒಮ್ಮೆ ಆ ಕಾಡಿನಲ್ಲಿ ಬೇಟೆಯಾಡಿ ಆಯಾಸಗೊಂಡಿದ್ದ ಆ ರಾಜನ ಕಿವಿಯನ್ನು ಅವನಿಗೆ ತಿಳಿಯದಂತೆ ಒಂದು ಸಣ್ಣ ಜರಿಯು ಹೊಕ್ಕಿತು.

೧೩೭ ಅದು ಕಾಲಕ್ರಮದಲ್ಲಿ ಅವನ ತಲೆಯ ನಡುವೆ ಬಹಳ ಮರಿಗಳನ್ನು ಹಾಕಿತು. ಅದರಿಂದ ರಾಜನು ರೋಗಗ್ರಸ್ತನಾಗಿ ಈಗ ಅವನ ಮೈಯಲ್ಲಿ ಸ್ನಾಯು ಮಾತ್ರ ಉಳಿದಿದೆ

---

ತತಃಸಾ ರಾಕ್ಷಸೀ ಬಾಲಾಂಸ್ತಾನುವಾಚಾದ್ಯ ಪುತ್ರಕಾಃ ।
ಮಹಾಶ್ಮಶಾನಂ ಗತ್ವಾಪಿ ಭಕ್ಷ್ಯಂ ನಾಸಾದಿತಂ ಮಯಾ ॥ ೧೩೧
ಯಾಚಿತೋ ಡಾಕಿನೀಸಂಘೋಽಪ್ಯತ್ರ ಭಾಗಮದಾನ್ನ ಮೇ ।
ತತ್ಖೇದಾದಥ ವಿಜ್ಞಪ್ಯ ಯಾಚಿತೋ ಭೈರವೋ ಮಯಾ ॥ ೧೩೨
ಸ ಚ ನಾಮಾನ್ವಯೌ ಪೃಷ್ಟ್ವಾ ದೇವೋ ಮಾಮೇವಮಾದಿಶತ್ ।
ಭಯಂಕರಿ ಕುಲೀನಾಸಿ ಖರದೂಷಣವಂಶಜಾ ॥ ೧೩೩
ತದಿತೋ ನಾತಿದೂರಸ್ಥಂ ವಸುದತ್ತಪುರಂ ವ್ರಜ ।
ತತ್ರಾಸ್ತೇ ವಸುದತ್ತಾಖ್ಯೋ ರಾಜಾ ಧರ್ಮಪರೋ ಮಹಾನ್ ॥ ೧೩೪
ಯಃ ಕೃತ್ಸ್ನಾಮಟವೀಮೇತಾಂ ಪರ್ಯಂತಸ್ಥೋಽಭಿರಕ್ಷತಿ ।
ಸ್ವಯಂ ಗೃಹ್ಣಾತಿ ಶುಲ್ಕಂ ಚ ನಿಗೃಹ್ಣಾತಿ ಚ ತಸ್ಕರಾನ್ ॥ ೧೩೫
ತಸ್ಯಾಟವ್ಯಾಂ ಚ ಮೃಗಯಾಶ್ರಮಸುಪ್ತಸ್ಯ ಭೂಪತೇಃ ।
ಅಜ್ಞಾತೈವ ಪ್ರವಿಷ್ಟಾಂತಃ ಕರ್ಣೇ ಶತಪದೀ ಲಘು ॥ ೧೩೬
ಸಾ ಚ ಕಾಲೇನ ಬಹುಶಃ ಪ್ರಸೂತಾಸ್ಯ ಶಿರೋಂತರೇ ।
ತೇನ ರೋಗೇಣ ರಾಜಾಸೌ ಸ್ನಾಯುಶೇಷೋಽದ್ಯ ವರ್ತತೇ ॥ ೧೩೭

೧೩೮–೧೩೯. ವೈದ್ಯರಿಗೂ ಅವನ ರೋಗ ಗೊತ್ತಾಗಿಲ್ಲ. ಬೇರೆ ಯಾರಿಗೂ ಅದು ಗೊತ್ತಾಗದೇ ಹೋದರೆ ಇನ್ನು ಕೆಲವೇ ದಿನಗಳಲ್ಲಿ ಅವನು ಸತ್ತುಹೋಗುತ್ತಾನೆ. ಸತ್ತಮೇಲೆ ಅವನ ಮಾಂಸವನ್ನು ಮಾಯೆಯಿಂದ ತಿನ್ನು. ಆರು ತಿಂಗಳವರೆಗೆ ಅದು ಸಾಕಾಗುತ್ತದೆ.

೧೪೦. ಹೀಗೆ ಭೈರವನು ಸಂಶಯಗ್ರಸ್ತವಾದ ರೀತಿಯಲ್ಲಿ ಇನ್ನು ಕೆಲವು ಕಾಲದ ನಂತರವೇ ಆಹಾರವು ದೊರೆಯುವುದೆಂದು ಹೇಳಿದ್ದಾನೆ. ಮಕ್ಕಳೇ, ನಾನು ಏನು ಮಾಡಲಿ" ಎಂದಳು.

೧೪೧–೧೪೨. ಆಗ ಅವಳ ಮಕ್ಕಳು ಕೇಳಿದರು : "ಅಮ್ಮ, ರೋಗ ಯಾವುದೆಂದು ತಿಳಿದು ಅದನ್ನು ದೂರ ಮಾಡಿದರೆ ರಾಜನು ಬದುಕಿಕೊಳ್ಳುತ್ತಾನೆಯೇ ? ಆ ರೋಗ ವಾಸಿಯಾಗುವುದು ಹೇಗೆ' ?. ಆಗ ಅವಳು ತನ್ನ ಮಕ್ಕಳಿಗೆ ಹೇಳಿದಳು.

೧೪೩ "ಆ ರೋಗವು ವಾಸಿಯಾದರೆ ರಾಜನು ಬದುಕುತ್ತಾನೆ. ಆ ಮಹಾ ರೋಗ ವಾಸಿಯಾಗುವ ಬಗೆಯನ್ನು ಕೇಳಿ.

೧೪೪. ಮೊದಲು ಅವನ ತಲೆಗೆ ಬಿಸಿ ತುಪ್ಪವನ್ನು ಹಚ್ಚಿ ಉರಿಬಿಸಿಲಿನಲ್ಲಿ ಕೂರಿಸಬೇಕು.

೧೪೫ ಅವನ ಕಿವಿಗೆ ಬಿದಿರಿನ ಕೊಳವೆಯನ್ನು ಸಿಕ್ಕಿಸಿ ಒಂದು ತಣ್ಣೀರಿನ ಬಿಂದಿಗೆಗೆ ಅದನ್ನು ಬಿಡಬೇಕು.

---

ವೈದ್ಯಾಶ್ಚಾಸ್ಯ ನ ತಂ ವ್ಯಾಧಿಂ ವಿದಂತ್ಯನ್ಯೋಽಪಿ ಕೋಽಪಿ ಚೇತ್ ।
ನ ಜ್ಞಾಸ್ಯತಿ ತತಶ್ಚೈಷ ದಿನೈರಲ್ಪೈರ್ವಿಪತ್ಸ್ಯತೇ ॥ ೧೩೮
ತಸ್ಯ ಮಾಂಸಾನಿ ಭುಂಜೀಥಾ ವಿಪನ್ನಸ್ಯ ಸ್ವಮಾಯಯಾ ।
ಭಕ್ಷಿತೈಸ್ತೈರ್ಹಿ ಷಣ್ಮಾಸಾನ್ ಪರಿತೃಪ್ತಾ ಭವಿಷ್ಯಸಿ ॥ ೧೩೯
ಇತ್ಥಂ ಮೇ ಭೈರವೇಣಾಪಿ ಸಂವಿಭಾಗಃ ಸಸಂಶಯಃ ।
ಕಾಲವಾಂಶ್ಚಾದ್ಯ ವಿಹಿತಸ್ತತ್ಪುತ್ರಾಃ ಕಿಂ ಕರೋಮ್ಯಹಮ್ ॥ ೧೪೦
ಏವಂ ತಯೋಕ್ತಾ ರಾಕ್ಷಸ್ಯಾ ಪುತ್ರಾಸ್ತೇ ತಾಮಥಾಬ್ರುವನ್ ।
ಜ್ಞಾತಾಪನೀತೇ ರೋಗೇಽಸ್ಮಿನ್ ಕಿಂ ಸ ರಾಜಾಂಬ ಜೀವತಿ ॥ ೧೪೧
ಕಥಂ ಚ ತಾದೃಶೋ ರೋಗೋ ವದ ತಸ್ಯಾಪನೀಯತೇ ।
ಏವಮುಕ್ತವತಸ್ತಾನ್ಸಾ ತನಯಾನ್ ರಾಕ್ಷಸೀ ಜಗೌ ॥ ೧೪೨
ಜ್ಞಾತಾಪನೀತೇ ರೋಗೇಽಸ್ಮಿನ್ ಜೀವತ್ಯೇವ ಸ ಭೂಪತಿಃ ।
ಶ್ರೂಯತಾಂ ಚ ಯಥಾ ಸೋಽಸ್ಯ ಮಹಾರೋಗೋಽಪನೀಯತೇ ॥ ೧೪೩
ಶಿರಃ ಪೂರ್ವಂ ಘೃತಾಭ್ಯಕ್ತಂ ತಸ್ಯ ನ್ಯಸ್ತೋಷ್ಣಸರ್ಪಿಷಾ ।
ಕೃತ್ವಾ ಚ ಮಧ್ಯಾಹ್ನಕಠಿನೇ ಸ್ಥಾಪಿತಸ್ಯಾತಪೇ ಚಿರಮ್ ॥ ೧೪೪
ನಿವೇಶ್ಯ ಕರ್ಣಕುಹರೇ ಸುಷಿರಾಂ ವಂಶನಾಡಿಕಾಮ್ ।
ಶೀತಾಂಬುಘಟಪೃಷ್ಠಸ್ಥಶರಾವಚ್ಛಿದ್ರಸಂಗಿನೀಮ್ ॥ ೧೪೫

೧೪೬–೧೪೭. ಆಗ ಬಿಸಿಲಿನ ತಾಪ ತಾಳಲಾರದೆ ಜರಿಗಳು ತಲೆಯಿಂದ ಹೊರಟು ಕಿವಿಯ ಮೂಲಕ ಬಿದಿರಿನ ಕೊಳವೆಗೆ ಬಂದು ತಂಪನೆಯ ಜಾಗವನ್ನು ಬಯಸಿ ತಣ್ಣೀರಿನ ಗಡಿಗೆಗೆ ಬೀಳುತ್ತವೆ. ಹೀಗೆ ಆ ರಾಜನು ರೋಗದಿಂದ ಬಿಡುಗಡೆ ಹೊಂದುತ್ತಾನೆ.

೧೪೮. ಎಂದು ಆ ರಾಕ್ಷಸಿಯು ಮರದ ಮೇಲೆ ಇದ್ದ ಮಕ್ಕಳಿಗೆ ಹೇಳಿದಳು. ಪೊಟರೆಯಲ್ಲಿದ್ದ ಕೀರ್ತಿಸೇನೆಯು ಅದೆಲ್ಲವನ್ನೂ ಕೇಳಿದಳು.

೧೪೯–೧೫೦. ಅದನ್ನು ಕೇಳಿ ಅವಳು ಯೋಚಿಸಿದಳು. ನಾನು ಈ ಸ್ಥಳದಿಂದ ಹೊರಟುಹೋದರೆ ರಾಕ್ಷಸಿಯು ಹೇಳಿದ ಉಪಾಯದಿಂದ ರಾಜನನ್ನು ಬದುಕಿಸಬಹುದು. ಆಗ ರಾಜನು ಶುಲ್ಕವನ್ನು ಕಡಿಮೆ ಮಾಡಿ ಈ ಅಡವಿಯ ಸಮೀಪದಲ್ಲೇ ಇದ್ದುಕೊಂಡು ಪಾಲನೆಮಾಡುತ್ತಾನೆ. ಆ ಸೌಕರ್ಯದಿಂದ ವ್ಯಾಪಾರಿಗಳೂ ಇದೇ ಮಾರ್ಗದಲ್ಲಿ ಸಂಚರಿಸುತ್ತಾರೆ.

೧೫೧. ಸ್ವರ್ಗಸ್ಥನಾದ ವ್ಯಾಪಾರಿ ಸಮುದ್ರಸೇನನೂ ಹಾಗೆಯೇ ಹೇಳಿದ್ದನು. ಈ ಮಾರ್ಗದಲ್ಲೇ ನನ್ನ ಗಂಡನೂ ಬರುತ್ತಾನೆ.

೧೫೨. ಆದ್ದರಿಂದ ಇಲ್ಲಿಂದ ಹೊರಟು ಕಾಡಿನ ಅಂಚಿನಲ್ಲಿರುವ ವಸುದತ್ತಪುರಕ್ಕೆ ಹೋಗಿ ರಾಜನ ರೋಗವನ್ನು ವಾಸಿಮಾಡಿ ನನ್ನ ಗಂಡನಿಗಾಗಿ ಅಲ್ಲಿಯೇ ಕಾಯುತ್ತಾ ಇರುತ್ತೇನೆ.

---

ತೇನ ಸ್ವೇದಾತಪಕ್ಲಾಂತಾ ನಿರ್ಗತ್ಯಾಸ್ಯ ಶಿರೋಂತರಾತ್ ।
ಕರ್ಣರಂಧ್ರೇಣ ತೇನೈವ ವಂಶನಾಡೀಂ ಪ್ರವಿಶ್ಯ ತಾಮ್ ॥ ೧೪೬
ಘಟೇ ಶೀತಾಭಿಲಾಷಿಣ್ಯಃ ಶತಪದ್ಯಃ ಪತಂತಿ ತಾಃ ।
ಏವಂ ಸ ನೃಪತಿಸ್ತಸ್ಮಾತ್ ಮಹಾರೋಗಾದ್ವಿಮುಚ್ಯತೇ ॥ ೧೪೭
ಇತ್ಯುಕ್ತ್ವಾ ರಾಕ್ಷಸೀ ಪುತ್ರಾನ್ ವೃಕ್ಷಸ್ಥಾನ್ ವಿರರಾಮ ಸಾ ।
ಕೀರ್ತಿಸೇನಾ ಚ ತತ್ಸರ್ವಂ ಅಶೃಣೋತ್ ಕೋಟರಸ್ಥಿತಾ ॥ ೧೪೮
ಶ್ರುತ್ವಾ ಚ ಚಿಂತಯಾಮಾಸ ನಿಸ್ತರಿಷ್ಯಾಮಿ ಚೇದಿತಃ ।
ತದ್ಗತ್ವೈವೈತಯಾ ಯುಕ್ತ್ಯಾ ಜೀವಯಿಷ್ಯಾಮಿ ತಂ ನೃಪಮ್ ॥ ೧೪೯
ಏತಾಮೇವಾಟವೀಂ ಸೋಽಲ್ಪಶುಲ್ಕಃ ಪ್ರಾಂತಸ್ಥಿತೋಽವತಿ ।
ತತ್ಸೌಕರ್ಯಾಚ್ಚ ವಣಿಜಃ ಸರ್ವೇ ಯಾಂತ್ಯಮುನಾ ಪಥಾ ॥ ೧೫೦
ಏತತ್ಸಮುದ್ರಸೇನೋಽಪಿ ಸ್ವರ್ಗಾಮೀ ಸೋಽಬ್ರವೀದ್ವಣಿಕ್ ।
ತದೇತೇನೈವ ಮಾರ್ಗೇಣ ಸ ಮೇ ಭರ್ತಾ ಗಮಿಷ್ಯತಿ ॥ ೧೫೧
ಅತೋ ಗತ್ವಾಟವೀಪ್ರಾಂತೇ ವಸುದತ್ತಪುರೇ ನೃಪಮ್ ।
ರೋಗಾದುತ್ತಾರ್ಯ ತತ್ರಸ್ಥಾ ಪ್ರತೀಕ್ಷೇ ಭರ್ತುರಾಗಮಮ್ ॥ ೧೫೨

೧೫೫-೧೫೭ ಹೀಗೆಂದು ಯೋಚಿಸುತ್ತಾ ಅವಳು ಹೇಗೋ ಕಷ್ಟಪಟ್ಟು ಆ ರಾತ್ರಿಯನ್ನು ಕಳೆದಳು. ಬೆಳಿಗ್ಗೆ ರಾಕ್ಷಸರು ಹೊರಟುಹೋದಮೇಲೆ ಪೊಟರೆಯಿಂದ ಹೊರಗೆ ಬಂದಳು. ಅಲ್ಲಿಂದ ಕೀರ್ತಿಸೇನೆಯು ಪುರುಷವೇಷದಲ್ಲಿಯೇ ಇರುತ್ತಾ, ಮಧ್ಯಾಹ್ನದವರೆಗೂ ನಡೆದು ಹಸುವನ್ನು ಮೇಯಿಸುತ್ತಿದ್ದ ಸಾಧುಪುರುಷನೊಬ್ಬನನ್ನು ನೋಡಿದಳು. ಅವನನ್ನು "ಯಾವ ಊರಿದು" ಎಂದು ಕೇಳಿದಳು. ನಡೆದು ನಡೆದು ಬಹಳ ಶ್ರಮಪಟ್ಟ ಈ ಸುಕುಮಾರಿಯನ್ನು ಕಂಡು ಅವನೂ ಕರುಣೆಯುಳ್ಳವನಾಗಿ ಮುಂದೆ ಕಾಣುವುದು ವಸುದತ್ತರಾಜನ ವಸುದತ್ತಪುರ. ಆ ರಾಜನು ರೋಗದಿಂದ ನರಳುತ್ತಾ ಸಾಯುವ ಸ್ಥಿತಿಯಲ್ಲಿದ್ದಾನೆ ಎಂದು ಹೇಳಿದನು. ಅದನ್ನು ಕೇಳಿ ಅವಳು ಆ ಗೋಪಾಲಕನಿಗೆ ಹೇಳಿದಳು.

೧೫೮-೧೬೦. ""ಯಾರಾದರೂ ನನ್ನನ್ನು ರಾಜನ ಹತ್ತಿರಕ್ಕೆ ಕರೆದುಕೊಂಡು ಹೋದರೆ ನಾನು ಅವನ ರೋಗವನ್ನು ವಾಸಿಮಾಡುತ್ತೇನೆ." ಅದನ್ನು ಕೇಳಿ ಗೋಪಾಲನು'ನಾನೂ ಪ್ರಯತ್ನ ಮಾಡುತ್ತೇನೆ. ನಾನೂ ಅಲ್ಲಿಗೇ ಹೋಗುತ್ತಿದ್ದೇನೆ. ನೀನೂ ನನ್ನ ಜೊತೆ ಬಾ' ಎಂದು ಹೇಳಿ ಪುರುಷವೇಷದ ಕೀರ್ತಿಸೇನೆಯನ್ನು ಕರೆದುಕೊಂಡು ಆ ಊರಿಗೆ ಹೋದನು.

---

ಏವಂ ವಿಚಿಂತಯಂತೀ ಸಾ ಕೃಚ್ಛ್ರಾತ್ ತಾಮನಯನ್ನಿಶಾಮ್ ।
ಪ್ರಾತರ್ನಷ್ಟೇಷು ರಕ್ಷಃಸು ನಿರಗಾತ್ ಕೋಟರಾತ್ತತಃ ॥ ೧೫೩
ಕ್ರಮಾತ್ತತೋಽಟವೀಮಧ್ಯೇ ಯಾಂತೀ ಪುರುಷವೇಷಭೃತ್ ।
ಪ್ರಾಪ್ತೇಽಪರಾಹ್ಣೇ ಗೋಪಾಲಮೇಕಂ ಸಾಧುಂ ದದರ್ಶ ಸಾ ॥ ೧೫೪
ತತ್ಸೌಕುಮಾರ್ಯದೂರಾಧ್ವದರ್ಶನಾರ್ದ್ರೀಕೃತಂ ಚ ತಮ್ ।
ಪಪ್ರಚ್ಛೋಪೇತ್ಯ ಸಾ ಕೋಽಯಂ ಪ್ರದೇಶಃ ಕಥ್ಯತಾಮಿತಿ ॥ ೧೫೫
ಸೋಽಪಿ ಗೋಪಾಲಕೋಽವಾದೀದ್ವಸುದತ್ತಸ್ಯ ಭೂಪತೇಃ ।
ವಸುದತ್ತಪುರಂ ನಾಮ ಪುರಮೇತತ್ಪುರಃ ಸ್ಥಿತಮ್ ॥ ೧೫೬
ರಾಜಾಪಿ ಸ ಮಹಾತ್ಮಾತ್ರ ಮುಮೂರ್ಷುರ್ವ್ಯಾಧಿತಃ ಸ್ಥಿತಃ ।
ತತ್ ಶ್ರುತ್ವಾ ಕೀರ್ತಿಸೇನಾ ತಂ ಗೋಪಾಲಕಮಭಾಷತ ॥ ೧೫೭
ಯದಿ ಮಾಂ ನಯತೇ ಕಶ್ಚಿತ್ ರಾಜ್ಞಸ್ತಸ್ಯಾಂತಿಕಂ ತತಃ ।
ಅಹಂ ತಂ ತಸ್ಯ ಜಾನಾಮಿ ನಿವಾರಯಿತುಮಾಮಯಮ್ ॥ ೧೫೮
ತತ್‌ಶ್ರುತ್ವೈವಾವದದ್ಗೋಪಃ ಪುರೇಽತ್ರೈವ ವ್ರಜಾಮ್ಯಹಮ್ ।
ತದಾಯಾಹಿ ಮಯಾ ಸಾಕಂ ಯಾವದ್ಯತ್ನಂ ಕರೋಮಿ ತೇ ॥ ೧೫೯
ತಥೇತ್ಯುಕ್ತವತೀಂ ತಾಂ ಚ ಕೀರ್ತಿಸೇನಾಂ ತದೈವ ಸಃ ।
ವಸುದತ್ತಪುರಂ ಗೋಪಃ ಪುಂವೇಷಾಂ ನಯತಿ ಸ್ಮ ತಾಮ್ ॥ ೧೬೦

೧೬೧-೧೬೨. ಅರಮನೆಯಲ್ಲಿ ದ್ವಾರಪಾಲಕನಿಗೆ ವಿಷಯವನ್ನೆಲ್ಲ ತಿಳಿಸಿ ಕೀರ್ತಿಸೇನೆಯನ್ನು ಅವನಿಗೆ ಪರಿಚಯಿಸಿದನು. ದ್ವಾರಪಾಲಕನು ರಾಜನಿಗೆ ತಿಳಿಸಿ ಅವನ ಆದೇಶದಂತೆ ಅನಿಂದಿತೆಯಾದ ಕೀರ್ತಿಸೇನೆಯನ್ನು ರಾಜನ ಸಮೀಪಕ್ಕೆ ಕಳಿಸಿದನು.

೧೬೩-೧೬೫. ರಾಜನು ಅದ್ಭುತವಾದ ಆಕೃತಿಯನ್ನು ಹೊಂದಿದ್ದ ಅವಳನ್ನು ನೋಡಿ ಸಮಾಧಾನಗೊಂಡನು. ಆತ್ಮವು ತನ್ನ ಒಳಿತು ಕೆಡುಕನ್ನು ತಾನೇ ತಿಳಿಯುತ್ತದೆ. ರಾಜನು ಪುರುಷವೇಷದ ಅವಳನ್ನು ಕುರಿತು "ನೀನು ನನ್ನ ಈ ರೋಗವನ್ನು ದೂರಮಾಡಿದರೆ ನಾನು ಅರ್ಧರಾಜ್ಯವನ್ನು ನಿನಗೆ ಕೊಡುತ್ತೇನೆ. ಕನಸಿನಲ್ಲಿ ಒಬ್ಬ ಹೆಣ್ಣು ನನ್ನ ಬೆನ್ನಮೇಲಿಂದ ಒಂದು ಕರಿಕಂಬಳಿಯನ್ನು ಎಳೆದ ಹಾಗೆ ಆಯಿತು. ಆದ್ದರಿಂದ ನೀನು ನನ್ನ ರೋಗವನ್ನು ಖಂಡಿತವಾಗಿಯೂ ವಾಸಿ ಮಾಡುತ್ತೀಯೆ' ಎಂದನು.

೧೬೬-೧೬೭ ಅದನ್ನು ಕೇಳಿ ಕೀರ್ತಿಸೇನೆಯು ಅವನಿಗೆ ಹೇಳಿದಳು. "ಇಂದು ಕಳೆಯಿತು, ನಾಳೆ ಬೆಳಿಗ್ಗೆ ನಿನ್ನ ರೋಗವನ್ನು ನಿವಾರಿಸುತ್ತೇನೆ. ಅಧೀರನಾಗಬೇಡ' ಎಂದು ಹೇಳಿ ರಾಜನ ತಲೆಯ ಮೇಲೆ ಹಸುವಿನ ತುಪ್ಪವನ್ನು ಹಚ್ಚಿಸಿದಳು. ಅದರಿಂದ ಅವನಿಗೆ ನಿದ್ದೆ ಬಂದಿತಲ್ಲದೆ ಅತಿಯಾಗಿದ್ದ ವೇದನೆಯೂ ದೂರವಾಯಿತು.

---

ತಚ್ಚ ತತ್ರ ತಥಾವಸ್ತು ನಿವೇದ್ಯಾರ್ತಾಯ ತತ್‌ಕ್ಷಣಾತ್ ।
ಪ್ರತೀಹಾರಾಯ ಕಲ್ಯಾಣಲಕ್ಷಣಾಂ ತಾಂ ಸಮರ್ಪಯತ್ ॥ ೧೬೧
ಪ್ರತೀಹಾರೋಽಪಿ ರಾಜಾನಂ ವಿಜ್ಞಪ್ಯೈವ ತದಾಜ್ಞಯಾ ।
ಪ್ರವೇಶಯಾಮಾಸ ಸ ತಾಂ ತಸ್ಯಾಂತಿಕಮನಿಂದಿತಾಮ್ ॥ ೧೬೨
ರಾಜಾ ಚ ಸೋಽತ್ರ ರೋಗಾರ್ತಸ್ತಾಂ ದೃಷ್ಟ್ವೈವಾದ್ಭುತಾಕೃತಿಮ್ ।
ಆಶ್ವಸ್ತೋ ವಸುದತ್ತೋಽಭೂತ್ ವೇತ್ತ್ಯಾತ್ಮೈವ ಹಿತಾಹಿತಮ್ ॥ ೧೬೩
ಉವಾಚ ಚೈತಾಂ ಪುಂವೇಷಾಂ ಯದೀಮಾಮಪನೇಷ್ಯಸಿ ।
ರುಜಮೇತತ್ ಪ್ರದಾಸ್ಯಾಮಿ ರಾಜ್ಯಾರ್ಧಂ ತೇ ಸುಲಕ್ಷಣ ॥ ೧೬೪
ಜಾನೇ ಜಹಾರ ಪೃಷ್ಠಾನ್ಮೇ ಸ್ವಪ್ನೇ ಸ್ತ್ರೀ ಕೃಷ್ಣಕಂಬಲಮ್ ।
ತನ್ನಿಶ್ಚಿತಮಿಮಂ ರೋಗಂ ಹರಿಷ್ಯತಿ ಭವಾನ್ಮಮ ॥ ೧೬೫
ತತ್‌ಶ್ರುತ್ವಾ ಕೀರ್ತಿಸೇನಾ ತಂ ಜಗಾದಾದ್ಯ ದಿನಂ ಗತಮ್ ।
ದೇವ ಶ್ವೋಽಪನೇಷ್ಯಾಮಿ ರೋಗಂ ಮಾ ಸ್ಮಾಧೃತಿಂ ಕೃಥಾಃ ॥ ೧೬೬
ಇತ್ಯುಕ್ತ್ವಾ ಮೂರ್ಧ್ನಿ ರಾಜ್ಞೋಽಸ್ಯ ಗವ್ಯಂ ಘೃತಮದಾಪಯತ್ ।
ತೇನ ತಸ್ಯಾಯಯೌ ನಿದ್ರಾ ಯಯೌ ಸಾ ಚಾತಿವೇದನಾ ॥ ೧೬೭

೧೬೮–೧೬೯. ಯಾರೋ ದೇವರು ನಮ್ಮ ಪುಣ್ಯದಿಂದ ವೈದ್ಯನ ರೂಪದಲ್ಲಿ ಬಂದಿದ್ದಾನೆ ಎಂದು ಭಾವಿಸಿ ಜನರೆಲ್ಲ ಕೀರ್ತಿಸೇನೆಯನ್ನು ಹೊಗಳಿದರು. ರಾಣಿಯೂ ಕೂಡ ಅವಳನ್ನು ವಿವಿಧ ರೀತಿಯಲ್ಲಿ ಉಪಚರಿಸಿದಳು. ರಾತ್ರಿಯಲ್ಲಿ ಇವಳಿಗೆ ಪ್ರತ್ಯೇಕ ವಾಸಸ್ಥಾನವನ್ನು ಗೊತ್ತುಪಡಿಸಿ ದಾಸಿಯರನ್ನು ಸೇವೆಗೆ ಇಟ್ಟಳು.

೧೭೦–೧೭೩. ಮಾರನೆಯ ದಿನ ಮಧ್ಯಾಹ್ನ ಮಂತ್ರಿಗಳ ಹಾಗೂ ಅಂತಃಪುರದವರ ಎದುರಿಗೆ ಕೀರ್ತಿಸೇನೆಯು ರಾಜನ ತಲೆಯಿಂದ ಕಿವಿಯ ಮೂಲಕ ನೂರಾರು ಜರಿಗಳನ್ನು ಹೊರಗೆ ತೆಗೆದಳು. ರಾಕ್ಷಸಿಯು ಹೇಳಿದ ಅದ್ಭುತವಾದ ರೀತಿಯಲ್ಲೇ ಆ ಜರಿಗಳನ್ನು ಒಂದು ಗಡಿಗೆಯಲ್ಲಿ ಹಾಕಿ ಅನಂತರ ತುಪ್ಪಹಾಲು ಮೊದಲಾದವುಗಳಿಂದ ರಾಜನನ್ನು ಉಪಚರಿಸಿದಳು. ಕ್ರಮೇಣ ರಾಜನು ಸುಧಾರಿಸಿಕೊಂಡು ರೋಗಮುಕ್ತನಾಗಿ ಸಮಾಧಾನ ಹೊಂದಿದಾಗ ಗಡಿಗೆಯಲ್ಲಿದ್ದ ಜರಿಗಳನ್ನು ನೋಡಿ ಎಲ್ಲರೂ ಆಶ್ಚರ್ಯಗೊಂಡರು.

೧೭೪. ರಾಜನೂ ಸಹ ತನ್ನ ತಲೆಯಿಂದ ಕ್ಷುದ್ರ ಕೀಟಗಳು ಹೊರಗೆ ಬಂದದ್ದನ್ನು ಕಂಡು ಹೆದರಿ, ನಂತರ ಅದರ ಬಗ್ಗೆ ಚಿಂತಿಸಿ ಆನಂದಪಟ್ಟು ತನಗೆ ಹೊಸ ಜನ್ಮ ಬಂದಿತು ಎಂದು ಭಾವಿಸಿದನು.

---

ಭಿಷಗ್ರೂಪೇಣ ದೇವೋಽಯಂ ಪುಣ್ಯೈರ್ನಃ ಕೋಽಪ್ಯುಪಾಗತಃ ।
ಇತಿ ತತ್ರ ಚ ತಾಂ ಸರ್ವೇ ಕೀರ್ತಿಸೇನಾಂ ತತೋಽಸ್ತುವನ್ ॥ ೧೬೮
ಮಹಾದೇವೀ ಚ ತೈಸ್ತೈಸ್ತಾಮುಪಚಾರೈರುಪಾಚರತ್ ।
ನಕ್ತಂ ವೇಶ್ಮ ಪೃಥಕ್ ಚಾಸ್ಯಾಃ ಸದಾಸೀಕಮಕಲ್ಪಯತ್ ॥ ೧೬೯
ಅಥಾಪರೇದ್ಯುರ್ಮಧ್ಯಾಹ್ನೇ ಮಂತ್ರಿಷ್ವಂತಃಪುರೇಷು ಚ ।
ಪಶ್ಯತ್ಸು ತಸ್ಯ ಭೂಪಸ್ಯ ಕೀರ್ತಿಸೇನಾ ಚಕರ್ಷ ಸಾ ॥ ೧೭೦
ಶಿರಸಃ ಕರ್ಣಮಾರ್ಗೇಣ ಸಾರ್ಧಂ ಶತಪದೀಶತಮ್ ।
ರಾಕ್ಷಸ್ಯುದಿತಯಾ ಪೂರ್ವಂ ಯುಕ್ತ್ಯಾದ್ಭುತತಯಾ ತಯಾ ॥ ೧೭೧
ಸ್ಥಾಪಯಿತ್ವಾ ಚ ಘಟಕೇ ಸಾ ತಾಃ ಶತಪದೀಸ್ತತಃ ।
ಘೃತಕ್ಷೀರಾದಿಸೇಕೇನ ತಂ ನೃಪಂ ಸಮತರ್ಪಯತ್ ॥ ೧೭೨
ಕ್ರಮಾತ್ತಸ್ಮಿನ್ ಸಮಾಶ್ವಸ್ತೇ ರೋಗಮುಕ್ತೇ ಮಹೀಪತೌ ।
ಘಟೇ ತಾನ್ ಪ್ರಾಣಿನೋ ದೃಷ್ಟ್ವಾ ಕೋ ನ ತತ್ರ ವಿಸಿಷ್ಮಿಯೇ ॥ ೧೭೩
ರಾಜಾ ಚ ಸ ವಿಲೋಕ್ಯೈತಾನ್ ಕುಕೀಟಾನ್ ಮೂರ್ಧನಿರ್ಗತಾನ್ ।
ತತ್ರಾಸ ದಧ್ಯೌ ಮುಮುದೇ ಮೇನೇ ಜನ್ಮ ನಿಜಂ ಪುನಃ ॥ ೧೭೪

೧೭೫-೧೭೬ ಅವನು ಸಂತೋಷಗೊಂಡು ಸ್ನಾನವನ್ನು ಮಾಡಿ ಕೀರ್ತಿಸೇನೆಯನ್ನು ಸಮ್ಮಾನಿಸಿದನು. ರಾಜ್ಯದ ಅರ್ಧಭಾಗದ ಮೇಲೆ ಆದರವನ್ನು ತೋರದ ಅವಳಿಗೆ ಆನೆ, ಕುದುರೆ ಬಂಗಾರಗಳನ್ನು ಕೊಟ್ಟನು. ನಮ್ಮ ರಾಜನ ಪ್ರಾಣವನ್ನು ಉಳಿಸಿದ ಈ ವೈದ್ಯನು ಪೂಜ್ಯನು ಎಂದು ಭಾವಿಸಿ ರಾಣಿ ಮತ್ತು ಮಂತ್ರಿಗಳು ಬಂಗಾರ ಹಾಗೂ ವಸ್ತ್ರಗಳಿಂದ ಅವಳನ್ನು ಗೌರವಿಸಿದರು.

೧೭೭-೧೭೮. ಆ ಕೀರ್ತಿಸೇನೆಯು ಅವುಗಳನ್ನೆಲ್ಲ ರಾಜನ ಕೈಗೇ ಹಿಂದಿರುಗಿಸಿದಳು. ತಾನು ಒಂದು ವ್ರತವನ್ನು ಕೈಗೊಂಡಿರುವುದಾಗಿ ಹೇಳಿ ಪತಿಯನ್ನು ನಿರೀಕ್ಷಿಸುತ್ತಾ ಅವಳು ಎಲ್ಲರಿಂದಲೂ ಸಮ್ಮಾನವನ್ನು ಪಡೆದು ಪುರುಷವೇಷದಲ್ಲೇ ಕೆಲವು ದಿನಗಳು ಅಲ್ಲಿ ಉಳಿದಳು.

೧೭೯-೧೮೦. ಆಗ ವಲಭಿಯಿಂದ ವ್ಯಾಪಾರಿಗಳ ಗುಂಪು ಬಂದಿದೆ ಎಂದು ಜನರು ಹೇಳಿದ್ದನ್ನು ಕೇಳಿ ಅದೇ ಮಾರ್ಗದಲ್ಲಿ ತನ್ನ ಪತಿ ದೇವಸೇನನೂ ಆ ನಗರಕ್ಕೆ ಬಂದಿರುವುದನ್ನು ತಿಳಿದಳು. ಗಂಡನನ್ನು ನೋಡಿ, ಹೊಸಮೋಡಗಳನ್ನು ನೋಡಿ ಮುದಗೊಳ್ಳುವ ನವಿಲಿನಂತೆ ಪರಮಾನಂದದಿಂದ ಅವನ ಪಾದಗಳಿಗೆ ಎರಗಿದಳು.

---

ಕೃತೋತ್ಸವಶ್ಚ ಸ ಸ್ನಾತಃ ಕೀರ್ತಿಸೇನಾಮಪೂಜಯತ್ ।
ತಾಮನಾದೃತರಾಜ್ಯಾರ್ಧಾಂ ಗ್ರಾಮಹಸ್ತ್ಯಶ್ವಕಾಂಚನೈಃ ॥ ೧೭೫
ದೇವೀ ಚ ಮಂತ್ರಿಣಶ್ಚೈತಾಂ ಹೇಮ್ನಾ ವಸ್ತ್ರೈರಪೂರಯನ್ ।
ಪ್ರಭುಪ್ರಾಣಪ್ರದೋಽಸ್ಮಾಕಂ ಪೂಜ್ಯೋ ಭಿಷಗಸಾವಿತಿ ॥ ೧೭೬
ಸಾ ಚ ತಸ್ಯೈವ ರಾಜ್ಞಸ್ತಾನ್ ಹಸ್ತೇಽರ್ಥಾನ್ ಸಂಪ್ರತಿ ನ್ಯಧಾತ್ ।
ಕಂಚಿತ್ಕಾಲಂ ವ್ರತಸ್ಥೋಽಹಮಿತ್ಯುಕ್ತ್ವಾ ಭರ್ತೃಪೇಕ್ಷಿಣೀ ॥ ೧೭೭
ತತಃ ಸಂಮಾನ್ಯಮಾನಾತ್ರ ಸರ್ವೈಃ ಕಾನ್ಯಪ್ಯಹಾನಿ ಸಾ ।
ಯಾವತ್ಪುರುಷವೇಷೇಣ ಕೀರ್ತಿಸೇನಾವತಿಷ್ಠತೇ ॥ ೧೭೮
ತಾವತ್ ಶುಶ್ರಾವ ಲೋಕಾತ್ತು ವಲಭೀತಃ ಸಮಾಗತಮ್ ।
ಸಾರ್ಥವಾಹಂ ಪಥಾ ತೇನ ದೇವಸೇನಂ ನಿಜಂ ಪತಿಮ್ ॥ ೧೭೯
ಪುರಿ ತತ್ರಾಥ ತಂ ಸಾರ್ಥಂ ಪ್ರಾಪ್ತಂ ಬುದ್ಧ್ವೈವ ಸಾಭ್ಯಗಾತ್ ।
ಭರ್ತಾರಂ ತಮಪಶ್ಯಚ್ಚ ಮಯೂರೀವ ನವಾಂಬುದಮ್ ॥ ೧೮೦

೧೪೧. ಕೀರ್ತಿಸೇನೆಯು ಪತಿಯ ಪಾದಗಳಿಗೆರಗಿ ಬಹಳ ಕಾಲದ ಉತ್ಸುಕತೆಯಿಂದ ಉಂಟಾದ ಸಂತಾಪದಿಂದ ಮನಸ್ಸು ಕರಗಿ ಸುರಿಯಿತೆಂಬಂತೆ ಹರಿದ ಆನಂದಾಶ್ರುಗಳಿಂದಲೇ ಅರ್ಘ್ಯವನ್ನು ಅರ್ಪಿಸಿದಳು.

೧೪೨–೧೪೬. ದೇವಸೇನನೂ ಬಹಳ ಕಾಲದ ನಂತರ ಸಿಕ್ಕಿದ ಕೀರ್ತಿಸೇನೆಯನ್ನು ನೋಡಿ ಹರ್ಷಗೊಂಡನು. ತನ್ನ ಪತ್ನಿಯು ಹೀಗೇಕೆ ವೇಷ ಮರೆಸಿಕೊಂಡು ಇಲ್ಲಿದ್ದಳೆಂದು ವಿಸ್ಮಯವನ್ನು ಹೊಂದಿದನು. ದೇವಸೇನನಂತೆಯೇ ರಾಜಾ ವಸುದತ್ತನೂ ಕೀರ್ತಿಸೇನೆಯ ಬಗೆಗೆ ಬೆರಗಾದನು. ಕೀರ್ತಿಸೇನೆಯು ದೇವಸೇನ–ವಸುದತ್ತರ ಜಿಜ್ಞಾಸೆ ತಣಿಯಲೆಂದು ತನ್ನ ಗ್ರಾಮದಲ್ಲಿ ಅನುಭವಿಸಿದ ಅತ್ತೆಯ ಕಾಟ ಮೊದಲುಗೊಂಡು ಎಲ್ಲ ವೃತ್ತಾಂತವನ್ನೂ ತಿಳಿಸಿದಳು.

---

ಚಿತ್ತೇನೇವ ಚಿರೌತ್ಸುಕ್ಯಸಂತಾಪಪ್ರವಿಲಾಯಿನಾ ।
ದತ್ತಾರ್ಘಾನಂದಬಾಷ್ಪೇಣ ಪಾದಯೋಸ್ತಸ್ಯ ಚಾಪತತ್ ॥ ೧೪೧
ಸೋಽಪಿ ಪ್ರತ್ಯಭ್ಯಜಾನಾಚ್ಚ ವೇಷಚ್ಛನ್ನಾಂ ನಿರೂಪ್ಯ ತಾಮ್ ।
ಭರ್ತಾ ಭಾಸ್ವತ್ಕರಾಲಕ್ಷ್ಯಾಂ ದಿವಾ ಮೂರ್ತಿಮಿವೈಂದವೀಮ್ ॥ ೧೪೨
ತಸ್ಯ ತದ್ವದನೇಂದುಂ ಚ ಚಂದ್ರಕಾಂತಸ್ಯ ಪಶ್ಯತಃ ।
ದೇವಸೇನಸ್ಯ ಹೃದಯಂ ಚಿತ್ರಂ ನ ಗಲತಿಸ್ಮ ಯತ್ ॥ ೧೪೩
ಅಥಾಸ್ಯಾಂ ಕೀರ್ತಿಸೇನಾಯಾಮೇವಂ ಪ್ರಕಟಿತಾತ್ಮನಿ ।
ಕಿಮೇತದಿತಿ ಸಾಶ್ಚರ್ಯಂ ಸ್ಥಿತೇ ತಸ್ಮಿಂಶ್ಚ ತತ್ಪತೌ ॥ ೧೪೪
ವಿಸ್ಮಿತೇ ಚ ವಣಿಗ್ಗ್ರಾಮೇ ತದ್‌ಬುದ್ಧ್ವೈವ ಸುವಿಸ್ಮಯಃ ।
ಸ ರಾಜಾ ವಸುದತ್ತೋಽತ್ರ ಸ್ವಯಮೇವ ಕಿಲಾಯಯೌ ॥ ೧೪೫
ತೇನ ಪೃಷ್ಟಾ ಚ ಸಾ ಕೀರ್ತಿಸೇನಾ ಪತ್ಯುಃ ಪುರೋಽಖಿಲಮ್ ।
ಶ್ವಶ್ರೂದುಶ್ಚರಿತೋತ್ಪನ್ನಂ ಸ್ವವೃತ್ತಾಂತಮವರ್ಣಯತ್ ॥ ೧೪೬

೧೮೭–೧೮೯. ದೇವಸೇನನು ತನ್ನ ಪ್ರಿಯೆಯು ಅನುಭವಿಸಿದ ದುಃಖದುಮ್ಮಾನಗಳನ್ನು ಕೇಳಿ, ತಾಯಿಯ ದುಷ್ಟತನದ ಬಗೆಗಿನ ಸಿಟ್ಟು, ಅವಳಿಗೆ ತಾನು ಕೆಡಕು ಮಾಡಬಾರದೆಂಬ ಕ್ಷಮೆ, ತನ್ನ ಹೆಂಡತಿಯು ಪರಿಸ್ಥಿತಿಯನ್ನು ನಿಭಾಯಿಸಿದ ಬಗೆಗೆ ಅಚ್ಚರಿ, ಸುಖಾಂತವಾದದ್ದಕ್ಕೆ ಹರ್ಷ, ಹೀಗೆ ಹಲವು ಭಾವನೆಗಳುಳ್ಳವನಾದನು. ಕೀರ್ತಿಸೇನೆಯ ಅದ್ಭುತ ವೃತ್ತಾಂತವನ್ನು ಕೇಳಿದ ಎಲ್ಲ ಜನರು "ಗಂಡನಲ್ಲಿರುವ ಪವಿತ್ರಪ್ರೇಮವೆಂಬ ರಥವೇರಿ, ಶೀಲವೆಂಬ ಕವಚ ತೊಟ್ಟು, ಬುದ್ಧಿಯೆಂಬ ಆಯುಧ ಹಿಡಿದು, ಧರ್ಮವನ್ನೇ ಸಾರಥಿಯಾಗಿಸಿಕೊಂಡ ಕೀರ್ತಿಸೇನೆಯಂತಹ ಪತಿವ್ರತೆಯರು ಕಷ್ಟವನ್ನು ಗೆಲ್ಲುತ್ತಾರೆ" ಎಂದರು.

೧೯೦–೧೯೧. ರಾಜನೂ ಸಹ ಅವಳನ್ನು ಪ್ರಶಂಸಿಸುತ್ತಾ ಗಂಡನಿಗಾಗಿ ಕಷ್ಟವನ್ನು ಅನುಭವಿಸಿದ ಇವಳು ಸೀತಾದೇವಿಯನ್ನೂ ಮೀರಿಸಿದ್ದಾಳೆ. ನನಗೆ ಪ್ರಾಣವನ್ನು ನೀಡಿದ್ದಾಳೆ. ನನ್ನ ಧರ್ಮಸೋದರಿ ಇವಳು ಎಂದು ಹೇಳಿದನು. ಆಗ ಕೀರ್ತಿಸೇನೆಯು ಹೇಳಿದಳು.

೧೯೨. "ರಾಜನೆ, ನೀನು ಪ್ರೀತಿಯಿಂದ ಕೊಟ್ಟ ಗ್ರಾಮ, ಕುದುರೆ, ಆನೆ ಮುತ್ತುರತ್ನ ಇವುಗಳನ್ನೆಲ್ಲ ನನ್ನ ಪತಿಗೇ ಕೊಟ್ಟು ಬಿಡು.'

---

ದೇವಸೇನಶ್ಚ ತತ್ ಶ್ರುತ್ವಾ ತದ್ಭರ್ತಾ ಚ ಸ್ವಮಾತರಿ ।
ಪರಾಙ್ಮುಖೋಽಭವತ್ಕೋಪಕ್ಷಮಾವಿಸ್ಮಯಹರ್ಷವಾನ್ ॥ ೧೮೭
ಭರ್ತೃಭಕ್ತಿರಥಾರೂಢಾಃ ಶೀಲಸಂನಾಹರಕ್ಷಿತಾಃ ।
ಧರ್ಮಸಾರಥಯಃ ಸಾಧ್ವ್ಯಃ ಜಯಂತಿ ಮತಿಹೇತಯಃ ॥ ೧೮೮
ಇತಿ ತತ್ರ ಸ್ಥಿತೋಽವಾದೀತ್ ಆಕರ್ಣ್ಯೈವ ತದದ್ಭುತಮ್ ।
ಚರಿತಂ ಕೀರ್ತಿಸೇನಾಯಾಃ ಸಾನಂದಃ ಸಕಲೋ ಜನಃ ॥ ೧೮೯
ರಾಜಾಪ್ಯುವಾಚ ಪತ್ಯರ್ಥಮಾಶ್ರಿತಕ್ಲೇಶಯಾನಯಾ ।
ಸೀತಾದೇವ್ಯಪಿ ರಾಮಸ್ಯ ಪರಿಕ್ಲೇಶಮಹಾ ಜಿತಾ ॥ ೧೯೦
ತದೇಷಾ ಧರ್ಮಭಗಿನೀ ಮಮ ಪ್ರಾಣಪ್ರದಾಯಿನೀ ।
ಇತ್ಯುಕ್ತವಂತಂ ತಂ ಭೂಪಂ ಕೀರ್ತಿಸೇನಾಥ ಸಾಬ್ರವೀತ್ ॥ ೧೯೧
ದೇವ ತ್ವತ್ ಪ್ರೀತಿದಾಯೋ ಯಸ್ತವ ಹಸ್ತೇ ಮಮ ಸ್ಥಿತಃ ।
ಗ್ರಾಮಹಸ್ತ್ಯಶ್ವರತ್ನಾದಿಃ ಸ ಮೇ ಭರ್ತ್ರೇ ಸಮರ್ಪ್ಯತಾಮ್ ॥ ೧೯೨

೧೯೩. ರಾಜನೂ ಅವುಗಳನ್ನು ಅವಳ ಪತಿಯಾದ ದೇವಸೇನನಿಗೆ ಕೊಟ್ಟು ಪಟ್ಟವನ್ನು ಕಟ್ಟಿದನು.

೧೯೪. ರಾಜನು ಕೊಟ್ಟ ಹಾಗೂ ತಾನು ವ್ಯಾಪಾರದಿಂದ ಸಂಪಾದಿಸಿದ ಧನರಾಶಿಯಿಂದ ದೇವಸೇನನು ತಾಯಿಯಿಂದ ದೂರವಾಗಿ ಕೀರ್ತಿಸೇನೆಯನ್ನು ಹೊಗಳುತ್ತಾ ಅವಳ ಜೊತೆಯಲ್ಲಿ ಅದೇ ಊರಿನಲ್ಲಿ ಮನೆ ಮಾಡಿಕೊಂಡು ತಂಗಿದನು.

೧೯೫. ಕೀರ್ತಿಸೇನೆಯೂ ಪಾಪಿಯಾದ ಅತ್ತೆಯ ಕಾಟವಿಲ್ಲದೆ ಸುಖವಾಗಿರುತ್ತಾ ತನಗೆ ತನ್ನ ಅಸಾಧಾರಣವಾದ ನಡವಳಿಕೆಯಿಂದ ಬಂದ ಪ್ರಸಿದ್ಧಿಯಿಂದ ಸಂತೋಷಪಡುತ್ತಾ ದೇಹ ಧರಿಸಿದ ಪುಣ್ಯಫಲಗಳ ಸಮೃದ್ಧಿಯಂತೆ ಎಲ್ಲ ಭೋಗ ಐಶ್ವರ್ಯಗಳನ್ನೂ ಗಂಡನ ಜೊತೆಯಲ್ಲಿ ಅನುಭವಿಸುತ್ತಾ ಇದ್ದಳು.

೧೯೬. ವಿಧಿಯ ಬರಹವನ್ನು ಸಹಿಸಿಕೊಂಡು ಆಪತ್ತಿನಲ್ಲೂ ತಮ್ಮ ಶೀಲವನ್ನು ಕಾಪಾಡಿಕೊಳ್ಳುವ ಪತಿವ್ರತೆಯರು ತಮ್ಮ ಮಹತ್ತರವಾದ ಸದ್ಗುಣಗಳಿಂದ ರಕ್ಷಿತರಾಗಿ ತಮಗೂ ತಮ್ಮ ಪತಿಗೂ ಮಂಗಳವನ್ನು ಉಂಟು ಮಾಡುತ್ತಾರೆ.

---

ಏವಮುಕ್ತ್ವಯಾ ರಾಜಾ ದತ್ವಾ ಗ್ರಾಮಾದಿ ತಸ್ಯ ತತ್ ।
ತದ್ಭರ್ತುರ್ದೇವಸೇನಸ್ಯ ಪ್ರೀತಃ ಪಟ್ಟಂ ಬಬಂಧ ಸಃ ॥ ೧೯೩

ಅಥ ನರಪತಿದತ್ತೈ ಸ್ತೈರ್ವಣಿಜ್ಯಾರ್ಜಿತೈಶ್ಚ
ಪ್ರಸಭಭರಿತಕೋಷೋ ದೇವಸೇನೋ ಘನೌಘೈಃ ।
ಪರಿಹೃತಜನನೀಕಃ ಸಂಸ್ತುವನ್ ಕೀರ್ತಿಸೇನಾಂ
ಕೃತವಸತಿರಮುಷ್ಮಿನ್ನೇವ ತಸ್ಥೌ ಪುರೇ ಸಃ ॥ ೧೯೪

ಸುಖಮಪಗತಪಾಪಶ್ವಶ್ರೂಕಂ ಕೀರ್ತಿಸೇನಾ
ಪ್ರಸಮಚರಿತಲಬ್ಧಖ್ಯಾತಿರಾಸಾದ್ಯ ತತ್ರ ।
ನ್ಯವಸದಖಿಲಭೋಗೈಶ್ವರ್ಯಭಾಗಾಂತಿಕಸ್ಥಾ
ಸುಕೃತಫಲಸಮೃದ್ಧಿರ್ದೇಹಬದ್ಧೇವ ಭರ್ತುಃ ॥ ೧೯೫

ಏವಂ ವಿಷಹ್ಯ ವಿಧುರಸ್ಯ ವಿಧೇರ್ನಿಯೋಗಂ
ಆಪತ್ಸು ರಕ್ಷಿತಚರಿತ್ರಧನಾ ಹಿ ಸಾಧ್ವ್ಯಃ ।
ಗುಪ್ತಾಃ ಸ್ವಸತ್ತ್ವವಿಭವೇನ ಮಹತ್ತಮೇನ
ಕಲ್ಯಾಣಮಾದಧತಿ ಪತ್ಯುರಥಾತ್ಮನಶ್ಚ ॥ ೧೯೬

೧೫೭. ಎಲೈ ರಾಜಕುಮಾರಿಯೇ, ಅತ್ತೆ–ಅತ್ತಿಗೆಯರಿಂದ ಸೊಸೆಯರು ಬಹಳ ಕಷ್ಟವನ್ನು ಅನುಭವಿಸುತ್ತಾರೆ. ಆದ್ದರಿಂದ ನಿನಗೆ ದುಷ್ಟ ಅತ್ತೆ–ಅತ್ತಿಗೆ ಇಲ್ಲದ ಮನೆ ದೊರೆಯಲಿ ಎಂದು ಹಾರೈಸುತ್ತೇನೆ.

೧೫೮. ಹೀಗೆ ರಾಕ್ಷಸ ರಾಜಕುಮಾರಿಯಾದ ಸೋಮಪ್ರಭೆಯಿಂದ ಅದ್ಭುತವಾದ ಕಥೆಯನ್ನು ಕೇಳಿದ ಕಳಿಂಗಸೇನೆಯು ಸಂತೋಷಗೊಂಡಳು.

೧೫೯. ಅನಂತರ ವಿಚಿತ್ರವಾದ ಘಟನೆಗಳ ಆ ಕಥೆಯು ಮುಗಿದುಹೋದುದರಿಂದಲೋ ಎಂಬಂತೆ ಸೂರ್ಯನು ಮರೆಯಾಗುತ್ತಾ ಬರಲು ಸೋಮಪ್ರಭೆಯು ಕಳಿಂಗಸೇನೆಯನ್ನು ಅಪ್ಪಿಕೊಂಡು (ಬೀಳ್ಕೊಂಡು) ತನ್ನ ಮನೆಗೆ ಹೊರಟಳು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ

'ಮದನಮಂಚುಕಾ'ಲಂಬಕದ ಮೂರನೆಯ ತರಂಗ ಮುಗಿಯಿತು.

---

ಇತ್ಥಂ ಚ ಪಾರ್ಥಿವಕುಮಾರಿ ಭವಂತಿ ದೋಷಾಃ
ಶ್ವಶ್ರೂನನಂದೃವಿಹಿತಾ ಬಹವೋ ವಧೂನಾಮ್ ।
ತದ್ಭರ್ತೃವೇಶ್ಮ ತವ ತಾದೃಶಮರ್ಥಯೇಽಹಂ
ಶ್ವಶ್ರೂರ್ನ ಯತ್ರ ನ ಚ ಯತ್ರ ಶಠಾ ನನಂದಾ ॥ ೧೫೭
ಇತೀದಮಾನಂದಿಕಥಾದ್ಭುತಂ ಸಾ
ಮುಖಾನ್ನಿಶಮ್ಯಾಸುರರಾಜಪುತ್ರ್ಯಾಃ ।
ಸೋಮಪ್ರಭಾಯಾ ಮನುಜೇಂದ್ರಪುತ್ರೀ
ಕಲಿಂಗಸೇನಾ ಪರಿತುಷ್ಯತಿ ಸ್ಮ ॥ ೧೫೮
ತತೋ ವಿಚಿತ್ರಾರ್ಥಕಥಾವಸಾನಂ
ದೃಷ್ಟ್ವೇವ ಗಂತುಂ ಮಿಹಿರೇ ಪ್ರವೃತ್ತೇ ।
ಸೋತ್ಕಾಂ ಸಮಾಲಿಂಗ್ಯ ಕಲಿಂಗಸೇನಾಂ
ಸೋಮಪ್ರಭಾ ಸ್ವಂ ಭವನಂ ಜಗಾಮ ॥ ೧೫೯

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

'ಮದನಮಂಚುಕಾ'ಲಂಬಕೇ ತೃತೀಯಸ್ತರಂಗಃ ।

## ನಾಲ್ಕನೆಯ ತರಂಗ

೧–೨. ತನ್ನ ಮನೆಗೆ ಹೊರಟ ಸೋಮಪ್ರಭೆಯು ಹೋಗುತ್ತಿರುವುದನ್ನು ನೋಡಲು ಕಳಿಂಗಸೇನೆಯು ಉಪ್ಪರಿಗೆಯ ಮೇಲೆ ನಿಂತಿದ್ದಾಗ ಇದ್ದಕ್ಕಿದ್ದಂತೆ ಆಕಾಶದಲ್ಲಿ ವಿದ್ಯಾಧರರ ಒಡೆಯನಾದ ಮದನವೇಗ ಎಂಬ ಯುವಕನು ಅವಳನ್ನು ನೋಡಿದನು.

೩. ಮೂರು ಲೋಕಗಳನ್ನೂ ಮೋಹಗೊಳಿಸುವ ಮತ್ತು ಮನ್ಮಥನೆಂಬ ಐಂದ್ರಜಾಲಿಕನ ನವಿಲುಗರಿಯಂತಿರುವ ಅವಳನ್ನು ನೋಡಿ ಅವನು ವಿಚಲಿತನಾದನು.

೪–೫. ಇಂತಹ ಅದ್ಭುತವಾದ ಮಾನವ ಸ್ತ್ರೀಯನ್ನು ನೋಡಿದ ಮೇಲೆ ವಿದ್ಯಾಧರ ಹೆಂಗಸರೂ ಬೇಡ, ಇನ್ನು ಅಪ್ಸರೆಯರ ಮಾತೇನು? ಇವಳು ನನ್ನ ಹೆಂಡತಿಯಾಗದಿದ್ದರೆ ನಾನು ಬದುಕಿ ಏನು ಪ್ರಯೋಜನ ? ಆದರೆ ವಿದ್ಯಾಧರನಾಗಿ ಮಾನವಸ್ತ್ರೀಯ ಸಹವಾಸವನ್ನು ಹೇಗೆ ತಾನೇ ಮಾಡಲಿ?

---

## ಚತುರ್ಥಸ್ತರಂಗಃ

ತತಃ ಸ್ವಸದ್ಮ ಯಾತಾಯಾಃ ಪಶ್ಚಾನ್ಮಾರ್ಗಮವೇಕ್ಷಿತುಮ್ ।
ಸೋಮಪ್ರಭಾಯಾಃ ಸ್ನೇಹೇನ ಮಾರ್ಗಹರ್ಮ್ಯಾಗ್ರಮಾಸ್ಥಿತಾಮ್ ॥ ೧
ಕಲಿಂಗಸೇನಾಮಾರಾತ್ತಾಂ ದದರ್ಶ ಗಗನಾಗತಃ ।
ದೈವಾನ್ಮದನವೇಗಾಖ್ಯೋ ಯುವಾ ವಿದ್ಯಾಧರಾಧಿಪಃ ॥ ೨
ಸ ತಾಂ ದೃಷ್ಟ್ವೈವ ರೂಪೇಣ ಜಗತ್ತ್ರಿತಯಮೋಹಿನೀಮ್ ।
ಕ್ಷೋಭಂ ಜಗಾಮ ಕಾಮೈಂದ್ರಜಾಲಿಕಸ್ಯೇವ ಪಿಚ್ಛಿಕಾಮ್ ॥ ೩
ಅಲಂ ವಿದ್ಯಾಧರಸ್ತ್ರೀಭಿಃ ಕಾ ಕಥಾಪ್ಸರಸಾಮಪಿ ।
ಯತ್ರೇದೃಗೇತದೇತಸ್ಯಾ ಮಾನುಷ್ಯಾ ರೂಪಮದ್ಭುತಮ್ ॥ ೪
ತದೇಷಾ ಯದಿ ಮೇ ನ ಸ್ಯಾದ್ಭಾರ್ಯಾ ಕಿಂ ಜೀವಿತೇನ ತತ್ ।
ಕಥಂ ಚ ಮಾನುಷೀಸಂಗಂ ಕುರ್ಯಾಂ ವಿದ್ಯಾಧರೋಽಪಿ ಸನ್ ॥ ೫

೬ ಎಂದು ಆಲೋಚಿಸಿ ಪ್ರಜ್ಞಪ್ತಿಸಂಜ್ಞಿಕಾ ಎಂಬ ವಿದ್ಯೆಯನ್ನು ಸ್ಮರಿಸಿದನು. ಅದು ಮೂರ್ತಿ ರೂಪದಲ್ಲಿ ಬಂದು ಅವನಿಗೆ ಹೀಗೆ ಹೇಳಿತು.

೭–೮. "ಸುಂದರನೇ, ಇವಳು ನಿಜವಾಗಲೂ ಮನುಷ್ಯಳಲ್ಲ. ಇವಳು ಶಾಪಗ್ರಸ್ತ ಅಪ್ಸರೆ. ಕಳಿಂಗದತ್ತ ಎಂಬ ರಾಜನ ಮನೆಯಲ್ಲಿ ಜನಿಸಿದ್ದಾಳೆ.' ಹೀಗೆ ಆ ವಿದ್ಯೆಯು ಹೇಳಿದಾಗ ಸಂತೋಷಗೊಂಡ ಅವನು ತನ್ನ ಮನೆಗೆ ಹೋಗಿ ಕಾಮಪೀಡಿತನಾಗಿ ಹೀಗೆ ಚಿಂತಿಸಿದನು.

೯–೧೦. ಇವಳನ್ನು ಬಲಾತ್ಕಾರವಾಗಿ ಒಯ್ಯುವುದು ನನಗೆ ಉಚಿತವೆನಿಸುವುದಿಲ್ಲ. ಸ್ತ್ರೀಯರನ್ನು ಬಲಾತ್ಕಾರದಿಂದ ಅನುಭವಿಸಿದರೆ ನನಗೆ ಸಾವು ಬರುವುದು ಎಂಬ ಶಾಪ ನನ್ನ ಮೇಲಿದೆ. ಆದ್ದರಿಂದ ಇವಳನ್ನು ಪಡೆಯಲು ನಾನು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಳ್ಳುತ್ತೇನೆ. ಶ್ರೇಯಸ್ಸು ತಪಸ್ಸಿನ ಅಧೀನ. ಬೇರೆ ದಾರಿ ಇಲ್ಲ.

೧೧. ಹೀಗೆ ನಿಶ್ಚಯಿಸಿ ಮಾರನೆಯ ದಿನ ಋಷಭಪರ್ವತಕ್ಕೆ ಹೋಗಿ ನಿರಾಹಾರನಾಗಿ ಒಂಟಿಕಾಲಮೇಲೆ ನಿಂತು ತಪಸ್ಸನ್ನು ಮಾಡಿದನು.

೧೨. ಬಹುಕಾಲ ಕಠಿಣವಾದ ತಪಸ್ಸು ಮಾಡಿದ್ದರಿಂದ ಶಿವನು ಪ್ರತ್ಯಕ್ಷನಾಗಿ ಮದನವೇಗನಿಗೆ ಈ ರೀತಿ ಆಜ್ಞೆಮಾಡಿದನು.

---

ಇತ್ಯಾಲೋಚ್ಯ ಸ ದಧ್ಯೌ ಚ ವಿದ್ಯಾಂ ಪ್ರಜ್ಞಪ್ತಿಸಂಜ್ಞಕಾಮ್ ।
ಸಾ ಚಾವಿರ್ಭೂಯ ಸಾಕಾರಾ ತಮೇವಮುವದತ್ತದಾ ॥ ೬
ತತ್ತ್ವತೋ ಮಾನುಷೀ ನೇಯಮೇಷಾ ಶಾಪಚ್ಯುತಾಪ್ಸರಾಃ ।
ಜಾತಾ ಕಲಿಂಗದತ್ತಸ್ಯ ಗೃಹೇ ಸುಭಗಭೂಪತೇಃ ॥ ೭
ಇತ್ಯುಕ್ತೇ ವಿದ್ಯಯಾ ಸೋಽಥ ಹೃಷ್ಟೋ ಗತ್ವಾ ಸ್ವಧಾಮನಿ ।
ವಿದ್ಯಾಧರೋಽನ್ಯವಿಮುಖಃ ಕಾಮಾರ್ತಃ ಸಮಚಿಂತಯತ್ ॥ ೮
ಹಠಾದ್ಯದಿ ಹರಾಮ್ಯೇತಾಂ ತದೇತನ್ಮೇ ನ ಯುಜ್ಯತೇ ।
ಸ್ತ್ರೀಣಾಂ ಹಠೋಪಭೋಗೋಹಿ ಮಮ ಶಾಪೋಽಸ್ತಿ ಮೃತ್ಯುದಃ ॥ ೯
ತದೇತತ್ಪ್ರಾಪ್ತಯೇ ಶಂಭುರಾರಾಧ್ಯಸ್ತಪಸಾ ಮಯಾ ।
ತಪೋಽಧೀನಾನಿ ಹಿ ಶ್ರೇಯಾಂಸ್ಯುಪಾಯೋಽನ್ಯೋ ನ ವಿದ್ಯತೇ ॥ ೧೦
ಇತಿ ನಿಶ್ಚಿತ್ಯ ಚಾನ್ಯೇದ್ಯುರ್ಗತ್ವಾ ಋಷಭಪರ್ವತಮ್ ।
ಏಕಪಾದಸ್ಥಿತಸ್ತೇಪೇ ನಿರಾಹಾರಸ್ತಪಾಂಸಿ ಸಃ ॥ ೧೧
ಅಥ ತುಷ್ಟೋಽಚಿರಾತ್ತೀವ್ರೈಸ್ತಪೋಭಿರ್ದತ್ತದರ್ಶನಃ ।
ಏವಂ ಮದನವೇಗಂ ತಮಾದಿದೇಶಾಂಬಿಕಾಪತಿಃ ॥ ೧೨

೧೨–೧೪. "ಕಳಿಂಗಸೇನೆ ಎಂಬ ಈ ಕನ್ಯೆಯು ತನ್ನ ಸೌಂದರ್ಯದಿಂದ ಭೂಲೋಕದಲ್ಲಿ ಪ್ರಸಿದ್ಧಳಾಗಿದ್ದಾಳೆ. ಇವಳಿಗೆ ರೂಪಸಂಪತ್ತಿನಲ್ಲಿ ಅನುರೂಪನಾದ ಪತಿಯು ಬೇರೆ ಯಾರೂ ಇಲ್ಲ. ಆದರೆ ವತ್ಸರಾಜ ಎಂಬುವನು ಒಬ್ಬನಿದ್ದಾನೆ. ಅವನು ಇವಳನ್ನು ಇಷ್ಟಪಡುತ್ತಿದ್ದಾನೆ. ಆದರೆ ವಾಸವದತ್ತೆಗೆ ಹೆದರಿ ಬಾಯಿಬಿಡುತ್ತಿಲ್ಲ.

೧೫. ಇವಳೂ ಕೂಡ ವತ್ಸರಾಜನ ಬಗ್ಗೆ ಸೋಮಪ್ರಭೆಯಿಂದ ತಿಳಿದು ಅವನ ಸೌಂದರ್ಯಕ್ಕೆ ಮಾರುಹೋಗಿ ಅವನನ್ನೇ ಮದುವೆಯಾಗಲು ಇಚ್ಛಿಸಿದ್ದಾಳೆ.

೧೬–೧೭. ಇವಳು ವತ್ಸರಾಜನನ್ನು ಮದುವೆಯಾಗುವುದರೊಳಗೆ ನೀನು ತಡಮಾಡದೆ ವತ್ಸರಾಜನೇ ಬಂದನೆಂಬಂತೆ ಅವನ ರೂಪ ಧರಿಸಿ ಹೋಗಿ ಗಾಂಧರ್ವ ರೀತಿಯಲ್ಲಿ ಅವಳನ್ನು ವರಿಸು. ಹೀಗೆ ಕಳಿಂಗಸೇನೆಯು ನಿನ್ನ ವಶವಾಗುವಳು.'

೧೮. ಈ ರೀತಿಯಾಗಿ ಶಿವನಿಂದ ಆದೇಶಿಸಲ್ಪಟ್ಟ ಮದನವೇಗನು ಶಿವನಿಗೆ ನಮಸ್ಕರಿಸಿ ಕಾಲಕೂಟಪರ್ವತದ ತಪ್ಪಲಿನಲ್ಲಿದ್ದ ತನ್ನ ಮನೆಗೆ ಹೋದನು.

೧೯–೨೦. ಈ ನಡುವೆ ಪ್ರತಿಸಂಜೆ ಹೋಗಿ ಬೆಳಿಗ್ಗೆ ಆಕಾಶಗಾಮಿಯಾದ ಯಾನದಲ್ಲಿ ಬೆಳಿಗ್ಗೆ ತಕ್ಷಶಿಲೆಗೆ ಬರುತ್ತಿದ್ದ ಸೋಮಪ್ರಭೆಯೊಡನೆ ಆಟವಾಡುತ್ತಿದ್ದ ಕಳಿಂಗಸೇನೆಯು ಏಕಾಂತದಲ್ಲಿ ಇವಳಿಗೆ ಹೇಳಿದಳು.

---

ಏಷಾ ಕಲಿಂಗಸೇನಾಖ್ಯಾ ಖ್ಯಾತಾ ರೂಪೇಣ ಭೂತಲೇ ।
ಕನ್ಯಾ ನಾಸ್ಯಾಶ್ಚ ಭರ್ತಾಪಿ ಸದೃಶೋ ರೂಪಸಂಪದಾ ॥ ೧೩
ಏಕಸ್ತು ವತ್ಸರಾಜೋಽಸ್ತಿ ಸ ಚೈತಾಮಭಿವಾಂಛತಿ ।
ಕಿಂತು ವಾಸವದತ್ತಾಯಾ ಭೀತ್ಯಾ ನಾರ್ಥಯತೇ ಸ್ಫುಟಮ್ ॥ ೧೪
ಏಷಾಪಿ ರೂಪಲುಬ್ಧಾ ತಂ ಶ್ರುತ್ವಾ ಸೋಮಪ್ರಭಾಮುಖಾತ್ ।
ಸ್ವಯಂವರಾಯ ವತ್ಸೇಶಂ ರಾಜಪುತ್ರ್ಯಭಿವಾಂಛತಿ ॥ ೧೫
ತತ್ರ ಯಾವದ್ವಿವಾಹೋಽಸ್ಯಾ ನ ಭವೇತ್ತಾವದಂತರಾ ।
ಕೃತ್ವಾ ಕಾಲಾಸಹಸ್ಯೇವ ರೂಪಂ ವತ್ಸೇಶ್ವರಸ್ಯ ತತ್ ॥ ೧೬
ಗತ್ವಾ ಗಾಂಧರ್ವವಿಧಿನಾ ಭಾರ್ಯಾಂ ಕುರ್ಯಾದ್ಭವಾನಿಮಾಮ್ ।
ಏವಂ ಕಲಿಂಗಸೇನಾ ಸೌ ತವ ಸೇತ್ಸ್ಯತಿ ಸುಂದರೀ ॥ ೧೭
ಇತ್ಯಾದಿಷ್ಟಃ ಸ ಶರ್ವೇಣ ಪ್ರಣಿಪತ್ಯಾಥ ತಂ ಯಯೌ ।
ಗೃಹಂ ಮದನವೇಗಃ ಸ್ವಂ ಕಾಲಕೂಟಗಿರೇಸ್ತಟಮ್ ॥ ೧೮
ಅತ್ರಾಂತರೇ ಪ್ರತಿನಿಶಂ ಗಚ್ಛಂತ್ಯಾ ನಿಜಮಂದಿರಮ್ ।
ಪ್ರತಿಪ್ರಭಾತಮಾಯಾಂತ್ಯಾ ಯಂತ್ರೇಣ ವ್ಯೋಮಗಾಮಿನಾ ॥ ೧೯
ತಯಾ ತಕ್ಷಶಿಲಾಪುರ್ಯಾಂ ಸಾ ಸೋಮಪ್ರಭಯಾ ಸಹ ।
ಕಲಿಂಗಸೇನಾ ಕ್ರೀಡಂತೀ ತಾಂ ಜಗಾದೈಕದಾ ರಹಃ ॥ ೨೦

೨೧. "ಗೆಳತಿ, ನಾನು ಹೇಳುವ ಮಾತನ್ನು ಯಾರಿಗೂ ಹೇಳಬೇಡ. ನನ್ನ ಮದುವೆಯ ಪ್ರಸ್ತಾಪವಿದೆ. ಅದಕ್ಕೇ ಹೇಳುತ್ತಿದ್ದೇನೆ ಕೇಳು.

೨೨. ಅನೇಕ ರಾಜರು ನನ್ನನ್ನು ಪಡೆಯಲು ದೂತರನ್ನು ಕಳಿಸುತ್ತಿದ್ದಾರೆ. ನನ್ನ ತಂದೆಯು ಅವರನ್ನು ಬರಿಗೈಯಲ್ಲಿ ಹಿಂದಿರುಗಿ ಕಳಿಸುತ್ತಿದ್ದಾನೆ.

೨೩–೨೪. ಆದರೆ ಶ್ರಾವಸ್ತಿಯಲ್ಲಿ ಪ್ರಸೇನಜಿತ್ ಎಂಬ ರಾಜನಿದ್ದಾನೆ. ಅವನು ಕಳಿಸಿದ ದೂತನಿಗೆ ಮಾತ್ರ ತಂದೆಯು ಸತ್ಕಾರವನ್ನು ಮಾಡಿದ್ದಾನೆ. ಅಮ್ಮನ ಜೊತೆಯಲ್ಲೂ ಮಾತನಾಡಿದ್ದಾನೆ. ಆ ರಾಜನೇ ನನ್ನ ವರನಾಗುವನು. ಅವನು ನನ್ನ ಅಪ್ಪಅಮ್ಮಂದಿರ ದೃಷ್ಟಿಯಲ್ಲಿ ಒಳ್ಳೆಯ ಕುಲದವನು.

೨೫–೨೬. ಕೌರವ–ಪಾಂಡವರ ಅಜ್ಜಿಯರಾದ ಅಂಬೆ–ಅಂಬಾಲಿಕೆಯರ ಕುಲದಲ್ಲಿ ಅವನು ಹುಟ್ಟಿದವನಂತೆ. ಅಂತಹ ಪ್ರಸೇನಜಿತನಿಗೆ ಶ್ರಾವಸ್ತಿ ನಗರದಲ್ಲಿ ನನ್ನನ್ನು ಮದುವೆ ಮಾಡಿ ಕೊಡಲು ನನ್ನ ತಂದೆ ಮಾತುಕೊಟ್ಟಿದ್ದಾನೆ.'

೨೭–೨೮. ಕಳಿಂಗಸೇನೆಯ ಈ ಮಾತುಗಳನ್ನು ಕೇಳಿ ದುಃಖದಿಂದ ಸೋಮಪ್ರಭೆಯು ಬೇರೊಂದು ಹಾರವನ್ನು ಸೃಷ್ಟಿಸಿದಂತೆ ಧಾರಾಕಾರವಾಗಿ ಕಣ್ಣೀರು ಸುರಿಸಿದಳು. ಕಣ್ಣೀರಿಟ್ಟ ಕಾರಣವನ್ನು ಕೇಳಿದಾಗ ಭೂಲೋಕವನ್ನು ಸಂಪೂರ್ಣವಾಗಿ ನೋಡಿರುವ ಮಯಾಸುರನಮಗಳಾದ ಸೋಮಪ್ರಭೆಯು ಹೀಗೆಂದಳು.

---

ಸಖಿ ವಾಚ್ಯಂ ನ ಕಸ್ಯಾಪಿ ತ್ವಯಾ ಯತ್ತೇ ಬ್ರವೀಮ್ಯಹಮ್ ।
ವಿವಾಹೋ ಮಮ ಸಂಪ್ರಾಪ್ತ ಇತಿ ಜಾನೇ ಯತಃ ಶೃಣು ॥ ೨೧
ಇಹ ಮಾಂ ಯಾಚಿತುಂ ದೂತಾಃ ಪ್ರೇಷಿತಾ ಬಹುಭಿರ್ನೃಪೈಃ ।
ತೇ ಚ ತಾತೇನ ಸಂವೃತ್ಯ ತಥೈವ ಪ್ರೇಷಿತಾ ಇತಃ ॥ ೨೨
ಯಸ್ತು ಪ್ರಸೇನಜಿನ್ನಾಮ ಶ್ರಾವಸ್ತ್ಯಾಮಸ್ತಿ ಭೂಪತಿಃ ।
ತದೀಯಃ ಕೇವಲಂ ದೂತಃ ಸಾದರಂ ತೇನ ಸತ್ಕೃತಃ ॥ ೨೩
ಮಂತ್ರಿತಂ ಚಾಂಬಯಾಪ್ಯೇತತ್ ತನ್ಮನ್ಯೇ ಮದ್ವರೋ ನೃಪಃ ।
ಸ ತಾತಸ್ಯ ತಥಾಂಬಾಯಾಃ ಕುಲೀನ ಇತಿ ಸಂಮತಃ ॥ ೨೪
ಸ ಹಿ ತತ್ರ ಕುಲೇ ಜಾತೋ ಯತ್ರಾಂಬಾಂಬಾಲಿಕಾದಿಕಾಃ ।
ಪಿತಾಮಹ್ಯಃ ಕುರೂಣಾಂ ಚ ಪಾಂಡವಾನಾಂ ಚ ಜಜ್ಞಿರೇ ॥ ೨೫
ತತ್ಪ್ರಸೇನಜಿತೇ ತಸ್ಮೈ ಸಖಿ ದತ್ತಾಸ್ಮಿ ಸಾಂಪ್ರತಮ್ ।
ತಾತೇನ ರಾಜ್ಞೇ ಶ್ರಾವಸ್ತ್ಯಾಂ ನಗರ್ಯಾಮಿತಿ ನಿಶ್ಚಯಃ ॥ ೨೬
ಏತತ್ಕಲಿಂಗಸೇನಾತಃ ಶ್ರುತ್ವಾ ಸೋಮಪ್ರಭಾ ಶುಚಾ ।
ಸೃಜಂತೀವಾಪರಂ ಹಾರಂ ಸದ್ಯೋ ಧಾರಾಶ್ರುಣಾರುದತ್ ॥ ೨೭
ಜಗಾದ ಚೈತಾಂ ಪೃಚ್ಛಂತೀಂ ವಯಸ್ಯಾಮಶ್ರುಕಾರಣಮ್ ।
ದೃಷ್ಟನಿಃಶೇಷಭೂಲೋಕಾ ಸಾ ಮಯಾಸುರಪುತ್ರಿಕಾ ॥ ೨೮

೨೯–೩೩. "ಸಖಿ! ವಯಸ್ಸು, ರೂಪ, ಕುಲ, ಶೀಲ, ಧನ ಇವು ವರನಲ್ಲಿ ನೋಡುವ ಗುಣಗಳು ಅದರಲ್ಲಿ ಮೊದಲನೆಯದು ವಯಸ್ಸು. ಆಮೇಲೆ ಕುಲ ಇತ್ಯಾದಿ. ಪ್ರಸೇನಜಿತ್ತು ತುಂಬಾ ವಯಸ್ಸಾದವನು. ನಾನವನನ್ನು ನೋಡಿದ್ದೇನೆ. ಬಾಡಿಹೋದ ಜಾಜೀ ಹೂವಿನ ಜಾತಿಯಂತೆ ಇರುವ ಇವನ ಕುಲವನ್ನು ನೋಡಿ ಲಾಭವೇನು ? ಹಿಮದಂತೆ ಇರುವ ಅವನೊಡನೆ ನೀನು ಹೇಮಂತದಲ್ಲಿ ಕಮಲವು ಬಾಡಿ ಹೋಗುವಂತೆ ಸೊರಗಿ ಬಿಡುತ್ತೀಯೆ, ಅದಕ್ಕೇ ನನಗೆ ದುಃಖವಾಗುತ್ತಿದೆ. ನಿನಗೆ ವತ್ಸರಾಜನು ಪತಿಯಾದರೆ ನನಗೆ ಸಂತೋಷವಾಗುವುದು. ಏಕೆಂದರೆ ರೂಪ, ಲಾವಣ್ಯ, ಕುಲ, ಶೌರ್ಯ, ಸಂಪತ್ತು ಇವುಗಳಲ್ಲಿ ಅವನಿಗೆ ಸರಿಸಮಾನನಾದ ರಾಜನು ಈ ಲೋಕದಲ್ಲೇ ಇಲ್ಲ.

೩೪–೩೫. ನಿನಗೆ ಅನುರೂಪನಾದ ಅವನೊಡನೆ ನಿನ್ನ ವಿವಾಹವಾದರೆ ಬ್ರಹ್ಮನು ನಿನ್ನನ್ನು ಲಾವಣ್ಯವತಿಯನ್ನಾಗಿ ಸೃಷ್ಟಿಮಾಡಿದ್ದು ಸಾರ್ಥಕವಾಗುತ್ತದೆ' ಎಂದು ಸೋಮಪ್ರಭೆಯು ಸಂಕ್ಷಿಪ್ತವಾಗಿ ಹೇಳಿದಳು. ಅದನ್ನು ಕೇಳಿ ಕಳಿಂಗಸೇನೆಗೆ ವತ್ಸರಾಜನಲ್ಲಿ ಮನಸ್ಸು ಲಗ್ನವಾಯಿತು.

---

ವಯೋ ರೂಪಂ ಕುಲಂ ಶೀಲಂ ವಿತ್ತಂ ಚೇತಿ ವರಸ್ಯ ಯತ್ ।
ಮೃಗ್ಯತೇ ಸಖಿ ತತ್ರಾದ್ಯಂ ವಯೋ ವಂಶಾದಿಕಂ ತತಃ ॥ ೨೯
ಪ್ರಸೇನಜಿಚ್ಚ ಪ್ರವಯಾಃ ಸ ದೃಷ್ಟೋ ನೃಪತಿರ್ಮಯಾ ।
ಜಾತೀಪುಷ್ಪಸ್ಯ ಜಾತ್ಯೇವ ಜೀರ್ಣಸ್ಯಾಸ್ಯ ಕುಲೇನ ಕಿಮ್ ॥ ೩೦
ಹಿಮಶುಭ್ರೇಣ ತೇನ ತ್ವಂ ಹೇಮಂತೇನೇವ ಪದ್ಮಿನೀ ।
ಪರಿಮ್ಲಾನಾಂಬುಜಮುಖೀ ಯುಕ್ತಾ ಶೋಚ್ಯಾ ಭವಿಷ್ಯಸಿ ॥ ೩೧
ಅತೋ ಜಾತೋ ವಿಷಾದೋ ಮೇ ಪ್ರಹರ್ಷಸ್ತು ಭವೇನ್ಮಮ ।
ಯದಿ ಸ್ಯಾದ್ವತ್ಸರಾಜಸ್ತೇ ಕಲ್ಯಾಣ್ಯುದಯನಃ ಪತಿಃ ॥ ೩೨
ತಸ್ಯ ನಾಸ್ತಿ ಹಿ ರೂಪೇಣ ಲಾವಣ್ಯೇನ ಕುಲೇನ ಚ ।
ಶೌರ್ಯೇಣ ಚ ವಿಭೂತ್ಯಾ ಚ ತುಲ್ಯೋಽನ್ಯೋ ನೃಪತಿರ್ಭುವಿ ॥ ೩೩
ತೇನ ಚೇದ್ಯುಜ್ಯಸೇ ಭರ್ತ್ರಾ ಸದೃಶೇನ ಕೃಶೋದರಿ ।
ಧಾತುಃ ಫಲತಿ ಲಾವಣ್ಯನಿರ್ಮಾಣಂ ತದಿದಂ ತ್ವಯಿ ॥ ೩೪
ಇತಿ ಸೋಮಪ್ರಭಾಕ್ಲೃಪ್ತೈ ವಾಕ್ಯೈಃ ಯಂತ್ರೈರಿವೇರಿತಮ್ ।
ಯಯೌ ಕಲಿಂಗಸೇನಾಯಾ ಮನೋ ವತ್ಸೇಶ್ವರಂ ಪ್ರತಿ ॥ ೩೫

೩೬–೩೭. ಆ ವತ್ಸರಾಜ ಎಂತಹವನು ಅವನ ವಂಶ ಎಂತಹುದು, ಉದಯನ ಎಂಬ ಹೆಸರು ಹೇಗೆ ಬಂದಿತು, ಇದನ್ನೆಲ್ಲ ನನಗೆ ತಿಳಿಸು ಎಂದು ಕಳಿಂಗಸೇನೆಯು ಸೋಮಪ್ರಭೆಯನ್ನು ಕೇಳಿದಳು. ಆಗ ಸೋಮಪ್ರಭೆಯು "ಅವನ್ನೆಲ್ಲ ಹೇಳುತ್ತೇನೆ ಕೇಳು' ಎಂದು ಹೇಳಿದಳು.

೩೮–೩೯. ವತ್ಸ ಎಂಬ ಪ್ರಸಿದ್ಧವಾದ ದೇಶವಿದೆ. ಎರಡನೆಯ ಅಮರಾವತಿಯಂತೆ ಇರುವ ಕೌಶಾಂಬೀ ನಗರಿಯು ಅದರ ರಾಜಧಾನಿ. ಅಲ್ಲಿ ಅವನು ರಾಜ್ಯವಾಳುತ್ತಿರುವುದರಿಂದ ವತ್ಸರಾಜ ಎಂದು ಪ್ರಸಿದ್ಧನಾಗಿದ್ದಾನೆ. ಅವನ ವಂಶದ ಬಗ್ಗೆ ಹೇಳುತ್ತೇನೆ ಕೇಳು.

೪೦. ಪಾಂಡವನಾದ ಅರ್ಜುನನಿಗೆ ಅಭಿಮನ್ಯು ಎಂಬ ಮಗನಿದ್ದನು. ಚಕ್ರವ್ಯೂಹವನ್ನು ಭೇದಿಸಿದ ಅವನು ಕೌರವ ಸೈನ್ಯವನ್ನು ನಾಶ ಮಾಡಿದನು.

೪೧–೪೨. ಅವನಿಗೆ ಪರೀಕ್ಷಿತ್ ಎಂಬ ಭರತವಂಶದ ಉದ್ಧಾರಕನಾದ ಮಗನಿದ್ದನು. ಅವನ ಮಗನೇ ಸರ್ಪಯಾಗವನ್ನು ಮಾಡಿದ ಜನಮೇಜಯನು. ಅವನ ವಂಶದಲ್ಲಿ ಹುಟ್ಟಿದ ಶತಾನೀಕನು ಕೌಶಾಂಬಿಯನ್ನು ಆಳುತ್ತಿದ್ದನು. ಅವನು ದೇವಾಸುರ ಯುದ್ಧದಲ್ಲಿ ರಾಕ್ಷಸರನ್ನು ಕೊಂದು ತಾನೂ ಹತನಾದನು.

---

ತತಶ್ಚ ಸಾ ತಾಂ ಪಪ್ರಚ್ಛ ರಾಜಕನ್ಯಾ ಮಯಾತ್ಮಜಾಮ್ ।
ಕಥಂ ಸ ವತ್ಸರಾಜಾಖ್ಯಃ ಸಖಿ ಕಿಂವಂಶಸಂಭವಃ ॥ ೩೬
ಕಥಂ ಚೋದಯನೋ ನಾಮ್ನಾ ತ್ವಯಾ ಮೇ ಕಥ್ಯತಾಮಿತಿ ।
ಸಾಥ ಸೋಮಪ್ರಭಾವಾದೀತ್ ಶೃಣು ತತ್ಸಖಿ ವಚ್ಮಿ ತೇ ॥ ೩೭
ವತ್ಸ ಇತ್ಯಸ್ತಿ ವಿಖ್ಯಾತೋ ದೇಶೋ ಭೂಮೇರ್ವಿಭೂಷಣಮ್ ।
ಪುರೀ ತತ್ರಾಸ್ತಿ ಕೌಶಾಂಬೀ ದ್ವಿತೀಯೇವಾಮರಾವತೀ ॥ ೩೮
ತಸ್ಯಾಂ ಸ ಕುರುತೇ ರಾಜ್ಯಂ ಯತೋ ವತ್ಸೇಶ್ವರಸ್ತತಃ ।
ವಂಶಂ ಚ ತಸ್ಯ ಕಲ್ಯಾಣಿ ಕೀರ್ತ್ಯಮಾನಂ ಮಯಾ ಶೃಣು ॥ ೩೯
ಪಾಂಡವಸ್ಯಾರ್ಜುನಸ್ಯಾಭೂದಭಿಮನ್ಯುಃ ಕಿಲಾತ್ಮಜಃ ।
ಚಕ್ರವ್ಯೂಹಭಿದಾ ಯೇನ ನೀತಾ ಕುರುಚಮೂಃ ಕ್ಷಯಮ್ ॥ ೪೦
ತಸ್ಮಾತ್ಪರೀಕ್ಷಿದಭವದ್ರಾಜಾ ಭರತವಂಶಭೃತ್ ।
ಸರ್ಪಸತ್ರಪ್ರಣೇತಾಭೂತ್ತತೋಽಪಿ ಜನಮೇಜಯಃ ॥ ೪೧
ತತೋಽಭವಚ್ಛತಾನೀಕಃ ಕೌಶಾಂಬೀಮಧ್ಯುವಾಸ ಯಃ ।
ಯಶ್ಚ ದೇವಾಸುರರಣೇ ದೈತ್ಯಾನ್ ಹತ್ವಾ ವ್ಯಪದ್ಯತ ॥ ೪೨

೪೩. ಅವನಿಗೆ ಸಹಸ್ರಾನೀಕ ಎಂಬ ಮಗ ಹುಟ್ಟಿದನು. ಅವನು ಬಹಳ ಪ್ರಸಿದ್ಧನು. ಅವನು ಇಂದ್ರನು ಕಳಿಸಿದ ರಥದಲ್ಲಿ ದೇವಲೋಕಕ್ಕೆ ಹೋಗಿ ಬರುತ್ತಿದ್ದನು.

೪೪. ಅವನ ಪತ್ನಿ ಮೃಗಾವತಿಯಲ್ಲಿ ಚಂದ್ರವಂಶಕ್ಕೆ ಭೂಷಣನಾದ ಜಗತ್ತಿನ ಕಣ್ಣಿಗೆ ಹಬ್ಬವಾದ ಈ ಉದಯನನು ಹುಟ್ಟಿದನು.

೪೫–೪೭. ಇವನಿಗೆ ಈ ಹೆಸರು ಬಂದುದರ ಕಾರಣವನ್ನು ಹೇಳುತ್ತೇನೆ ಕೇಳು. ಇವನ ತಾಯಿಯು ಗರ್ಭಿಣಿಯಾಗಿದ್ದಾಗ ಅವಳಿಗೆ ರಕ್ತದಲ್ಲಿ ಸ್ನಾನ ಮಾಡಬೇಕೆಂಬ ಬಯಕೆ ಉಂಟಾಯಿತು. ಅವಳ ಗಂಡನು ಪಾಪಕ್ಕೆ ಹೆದರಿ ಲಾಕ್ಷಾರಸದಿಂದ ಒಂದು ಕೊಳವನ್ನು ನಿರ್ಮಿಸಿದನು. ಅವಳು ಅದರಲ್ಲಿ ಸ್ನಾನ ಮಾಡುತ್ತಿದ್ದಳು. ಆಗ ಗರುಡಪಕ್ಷಿಯ ವಂಶದ ಪಕ್ಷಿಯೊಂದು ಮಾಂಸದ ಭ್ರಮೆಯಿಂದ ಆ ಕೊಳಕ್ಕೆ ಬಿದ್ದು ಅವಳನ್ನು ಕಚ್ಚಿಕೊಂಡು ಹೋಗಿ ಅದೃಷ್ಟವಶಾತ್ ಉದಯಾಚಲದಲ್ಲಿ ಸಾಯಿಸದೆ ಹಾಗೆಯೇ ಬಿಟ್ಟಿತು.

೪೮–೪೯. ಅಲ್ಲಿ ಜಮದಗ್ನಿ ಮುನಿಯು ಅವಳಿಗೆ ಗಂಡನ ಸಮಾಗಮವಾಗುತ್ತದೆ ಎಂದು ಆಶ್ವಾಸನೆಕೊಟ್ಟು ದಯೆಯಿಂದ ತನ್ನ ಆಶ್ರಮದಲ್ಲಿ ಆಶ್ರಯ ಕೊಟ್ಟನು. ಅದೇ ಸಂದರ್ಭದಲ್ಲಿ ಉದಯಾಚಲದ ಜಮದಗ್ನಿಯ ಆಶ್ರಮಕ್ಕೆ ಬಂದ ತಿಲೋತ್ತಮೆಯನ್ನು ಮೃಗಾವತಿ ಉಪಚರಿಸಲಿಲ್ಲ. ತಿಲೋತ್ತಮೆಗೆ ಉಪಚಾರಲೋಪದಿಂದ ಸಿಟ್ಟು ಬಂದಿತು. ಮೃಗಾವತಿಗೆ ಗಂಡನಿಂದ ವಿರಹವುಂಟಾಗುವಂತೆ ಶಾಪ ದೊರೆಯಿತು.

---

ತಸ್ಮಾದ್ರಾಜಾ ಜಗತ್‌ಶ್ಲಾಘ್ಯಃ ಸಹಸ್ರಾನೀಕ ಇತ್ಯಭೂತ್ ।
ಯಃ ಶಕ್ರಪ್ರೇಷಿತರಥೋ ದಿವಿ ಚಕ್ರೇ ಗತಾಗತಮ್ ॥ ೪೩
ತಸ್ಯ ದೇವ್ಯಾಂ ಮೃಗಾವತ್ಯಾಮಸಾವುದಯನೋಽಜನಿ ।
ಭೂಷಣಂ ಶಶಿನೋ ವಂಶೇ ಜಗನ್ನೇತ್ರೋತ್ಸವೋ ನೃಪಃ ॥ ೪೪
ನಾಮ್ನೋ ನಿಮಿತ್ತಮಪ್ಯಸ್ಯ ಶೃಣು ಸಾ ಹಿ ಮೃಗಾವತೀ ।
ಅಂತರ್ವತ್ನೀ ಸತೀ ರಾಜ್ಞೋ ಜನನ್ಯಸ್ಯ ಸುಜನ್ಮನಃ ॥ ೪೫
ಉತ್ಪನ್ನರುಧಿರಸ್ನಾನದೋಹದಾ ಪಾಪಭೀರುಣಾ ।
ಭರ್ತ್ರಾ ರಚಿತಲಾಕ್ಷಾದಿರಸವಾಪೀಕೃತಾಪ್ಲವಾ ॥ ೪೬
ಪಕ್ಷಿಣಾ ತಾರ್ಕ್ಷ್ಯವಂಶ್ಯೇನ ನಿಪತ್ಯಾಮಿಷಶಂಕಯಾ ।
ನೀತ್ವಾ ವಿಧಿವಶಾತ್ ತ್ಯಕ್ತಾ ಜೀವಂತ್ಯೇವೋದಯಾಚಲೇ ॥ ೪೭
ತತ್ರ ಚಾಶ್ವಾಸಿತಾ ಭೂಯೋ ಭರ್ತೃಸಂಗಮವಾದಿನಾ ।
ಜಮದಗ್ನ್ಯೃಷಿಣಾ ದೃಷ್ಟ್ವಾ ಸ್ಥಿತಾಸೌ ತತ್ರ ಚಾಶ್ರಮೇ ॥ ೪೮
ಅವಜ್ಞಾಜನಿತೇರ್ಷ್ಯಾಯಾಃ ಕಂಚಿತ್ಕಾಲಂ ಹಿ ತಾದೃಶಃ ।
ಶಾಪಸ್ತಿಲೋತ್ತಮಾತೋಽಭೂತ್ತದ್ಭರ್ತುಸ್ತದ್ವಿಯೋಗದಃ ॥ ೪೯

೩೦–೩೨. ಕೆಲವು ದಿನಗಳಲ್ಲಿ ಮೃಗಾವತಿಯು ಜಮದಗ್ನಿಯ ಆಶ್ರಮದಲ್ಲಿ ಉದಯಪರ್ವತದಲ್ಲಿ ಆಕಾಶವು ನೂತನ ಚಂದ್ರನನ್ನು ಪಡೆದಂತೆ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಆ ಮಗುವೇ ಸಾರ್ವಭೌಮರಾಜನಾದ ಈ ಉದಯನನು. "'ಇವನಿಗೆ ವಿದ್ಯಾಧರನೊಬ್ಬನು ಮಗನಾಗಿ ಜನಿಸುವನು" ಎಂದು ಆಕಾಶವಾಣಿಯು ಆಯಿತು. ಆಗ ದೇವತೆಗಳು ಇವನಿಗೆ ಉದಯನ ಎಂದು ಹೆಸರಿಟ್ಟರು.

೩೩. ಈ ಕಡೆ ಸಹಸ್ರಾನೀಕನು ತನ್ನ ಶಾಪವು ಕೊನೆಗೊಳ್ಳುವ ಬಗ್ಗೆ ಮಾತಲಿಯಿಂದ ತಿಳಿದು ಅದಕ್ಕಾಗಿ ಕಾಯುತ್ತಾ ಮೃಗಾವತಿಯಿಲ್ಲದೆ ಬಹಳ ಕಷ್ಟದಿಂದ ಕಾಲವನ್ನು ಕಳೆದನು.

೩೪–೩೫. ಶಾಪದ ಅವಧಿಯು ಮುಗಿಯುತ್ತಾ ಬಂದಾಗ ವಿಧಿಯಿಂದ ಕಳಿಸಲ್ಪಟ್ಟ ಶಬರನು ಉದಯಾಚಲದ ಕಡೆಯಿಂದ ಬಂದು ತನ್ನ ಗುರುತನ್ನು ತಿಳಿಸಿ ವಿಷಯವನ್ನು ಅರುಹಿದನು. ಆಗ ಅಶರೀರವಾಣಿಯೊಂದು ಕೇಳಿಸಿ ಅದೂ ಈ ವಿಷಯವನ್ನೇ ತಿಳಿಸಿತು. ಆಗ ಸಹಸ್ರಾನೀಕನು ಶಬರನ ಜೊತೆಯಲ್ಲಿ ಉದಯಾಚಲಕ್ಕೆ ಹೋದನು.

೩೬–೩೭. ಅಲ್ಲಿ ಇಷ್ಟಾರ್ಥವನ್ನು ಪಡೆದಂತೆ ಪತ್ನಿಯಾದ ಮೃಗಾವತಿಯನ್ನೂ ಮನೋರಾಜ್ಯವನ್ನು ಪಡೆದಂತೆ ಪುತ್ರನಾದ ಉದಯನನ್ನೂ ಪಡೆದು ಅವರಿಬ್ಬರನ್ನೂ ಕರೆದುಕೊಂಡು ಕೌಶಾಂಬಿಗೆ ಬಂದು ಮಗನ ಉತ್ಕೃಷ್ಟ ಗುಣಗಳಿಂದ ಸಂತೋಷಗೊಂಡವನಾಗಿ ಮಗನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು.

---

ದಿವಸೈಃ ಸಾ ಚ ತತ್ರೈವ ಜಮದಗ್ನ್ಯಾಶ್ರಮೇ ಸುತಮ್ ।
ಉದಯಾದ್ರೌ ಪ್ರಸೂತೇ ಸ್ಮ ದ್ಯೌರಿಂದುಮಿವ ನೂತನಮ್ ॥ ೩೦
ಅಸಾವುದಯನೋ ಜಾತಃ ಸಾರ್ವಭೌಮೋ ಮಹೀಪತಿಃ ।
ಜನಿಷ್ಯತೇ ಚ ಪುತ್ರೋಽಸ್ಯ ಸರ್ವವಿದ್ಯಾಧರಾಧಿಪಃ ॥ ೩೧
ಇತ್ಯುಚ್ಚಚಾರಾಂಬರಾದ್ವಾಣೀಮಶರೀರಾಂ ತದಾ ಕೃತಮ್ ।
ನಾಮೋದಯನ ಇತ್ಯಸ್ಯ ದೇವೈರುದಯಜನ್ಮತಃ ॥ ೩೨
ಸೋಽಪಿ ಶಾಪಾಂತಬುದ್ಧಾಶಃ ಕಾಲಂ ಮಾತಲಿಬೋಧಿತಃ ।
ಕೃಚ್ಛ್ರಾತ್ ಸಹಸ್ರಾನೀಕಸ್ತಾಂ ವಿನಾನೈಷೀತ್ ಮೃಗಾವತೀಮ್ ॥ ೩೩
ಪ್ರಾಪ್ತೇ ಶಾಪಾವಸಾನೇ ತು ಶಬರಾದ್ವಿಧಿಯೋಗತಃ ।
ಉದಯಾದ್ರೇರುಪಾಯಾತಾತ್ ಪ್ರಾಪ್ಯಾಭಿಜ್ಞಾನಮಾತ್ಮನಃ ॥ ೩೪
ಆವೇದಿತಾರ್ಥಸ್ತತ್ಕಾಲಂ ಗಗನೋದ್ಗತಯಾ ಗಿರಾ ।
ಶಬರಂ ತಂ ಪುರಸ್ಕೃತ್ಯ ಜಗಾಮೈವೋದಯಾಚಲಮ್ ॥ ೩೫
ತತ್ರ ವಾಂಛಿತಸಂಸಿದ್ಧಿಮಿವ ಪ್ರಾಪ್ಯ ಮೃಗಾವತೀಮ್ ।
ಭಾರ್ಯಾಮುದಯನಂ ತಂ ಚ ಮನೋರಾಜ್ಯಮಿವಾತ್ಮಜಮ್ ॥ ೩೬
ತೌ ಗೃಹೀತ್ವಾಥ ಕೌಶಾಂಬೀಮಾಗತ್ಯೈವಾಭಿಷಿಕ್ತವಾನ್ ।
ಯೌವರಾಜ್ಯೇ ತನೂಜಂ ತಂ ತದ್ಗುಣೋತ್ಕರ್ಷತೋಷಿತಃ ॥ ೩೭

೫೮. ಅವನ ಸಹಾಯಕ್ಕೆ ಯೌಗಂಧರಾಯಣ ಮೊದಲಾದ ಮಂತ್ರಿ ಮಕ್ಕಳನ್ನು ಕೊಟ್ಟನು. ಅವನಿಗೆ ಜವಾಬ್ದಾರಿ ವಹಿಸಿಕೊಟ್ಟು ತಾನು ಹೆಂಡತಿಯೊಡನೆ ಬಹುಕಾಲ ಸುಖವಾಗಿದ್ದನು.

೫೯. ಕಾಲಕ್ರಮೇಣ ಪುತ್ರನಾದ ಉದಯನನಿಗೆ ಪಟ್ಟಾಭಿಷೇಕ ಮಾಡಿ ವೃದ್ಧನಾದ ಸಹಸ್ರಾನೀಕನು ಹೆಂಡತಿ ಮತ್ತು ಮಂತ್ರಿಗಳೊಡನೆ ಸ್ವರ್ಗಸ್ಥನಾದನು.

೬೦. ಹೀಗೆ ಪಿತ್ರಾರ್ಜಿತವಾದ ರಾಜ್ಯವನ್ನು ಪಡೆದು ಇಡೀ ಭೂಮಿಯನ್ನು ಗೆದ್ದು ಉದಯನನು ಯೌಗಂಧರಾಯಣನ ಸಹಾಯದಿಂದ ರಾಜ್ಯಭಾರ ಮಾಡುತ್ತಿದ್ದಾನೆ.

೬೧. ಈ ರೀತಿಯಾಗಿ ಸೋಮಪ್ರಭೆಯು ಕಳಿಂಗಸೇನೆಗೆ ಏಕಾಂತದಲ್ಲಿ ಸಂಕ್ಷಿಪ್ತವಾಗಿ ಹೇಳಿ ಮತ್ತೆ ಮುಂದುವರಿದಳು.

೬೨–೬೪. ಈ ರೀತಿಯಾಗಿ ಉದಯನನು ವತ್ಸದೇಶಕ್ಕೆ ರಾಜನಾದ್ದರಿಂದ ವತ್ಸರಾಜನೆಂದು ಪ್ರಸಿದ್ಧನಾಗಿ ಪಾಂಡವರ ವಂಶದಲ್ಲಿ ಹುಟ್ಟಿದ್ದರಿಂದ ಚಂದ್ರವಂಶದವನಾಗಿ ಉದಯಪರ್ವತ ಪ್ರದೇಶದಲ್ಲಿ ಜನಿಸಿದ್ದರಿಂದ ಉದಯನ ಎಂದು ಪ್ರಸಿದ್ಧನಾಗಿದ್ದಾನೆ ರೂಪದಲ್ಲಿ ಈ ಜಗತ್ತಿನಲ್ಲಿ ಮನ್ಮಥನು ಕೂಡ ಅವನಂತೆ ಇಲ್ಲ. ತ್ರೈಲೋಕ್ಯಸುಂದರಿಯೆ! ನಿನಗೆ ಅವನೊಬ್ಬನೇ ಸಮಾನನು. ಸೌಂದರ್ಯಾಪೇಕ್ಷಿ ಯಾದ ಅವನು ಖಂಡಿತವಾಗಿಯೂ ನಿನ್ನನ್ನು ಬಯಸುತ್ತಾನೆ.

---

ಯೌಗಂಧರಾಯಣಾದೀಂಶ್ಚ ತಸ್ಮೈ ಮಂತ್ರಿಸುತಾನ್ ದದೌ ।
ತೇನಾತ್ತಭಾರೋ ಬುಭುಜೇ ಭೋಗಾನ್ ಭಾರ್ಯಾಸಖಶ್ಚಿರಮ್ ॥ ೫೮
ಕಾಲೇನಾರೋಪ್ಯ ರಾಜ್ಯೇ ಚ ತಮೇವೋದಯನಂ ಸುತಮ್ ।
ವೃದ್ಧಃ ಸಭಾರ್ಯಾಸಚಿವೋ ಯಯೌ ರಾಜಾ ಮಹಾಪಥಮ್ ॥ ೫೯
ಏವಂ ಸ ಪಿತ್ರ್ಯಂ ರಾಜ್ಯಂ ತತ್ ಪ್ರಾಪ್ಯ ಜಿತ್ವಾ ತತೋಽಖಿಲಾಮ್ ।
ಯೌಗಂಧರಾಯಣಸಖಃ ಪ್ರಶಾಸ್ತ್ಯುದಯನೋ ಮಹೀಮ್ ॥ ೬೦
ಇತ್ಯಾಶು ಕಥಯಿತ್ವಾ ಸಾ ಕಥಾಂ ಸೋಮಪ್ರಭಾ ರಹಃ ।
ಸಖೀಂ ಕಲಿಂಗಸೇನಾಂ ತಾಂ ಪುನರೇವಮಭಾಷತ ॥ ೬೧
ಏವಂ ವತ್ಸೇಷು ರಾಜತ್ವಾತ್ ವತ್ಸರಾಜಃ ಸುಗಾತ್ರಿ ಸಃ ।
ಪಾಂಡವಾನ್ವಯಸಂಭೂತ್ಯಾ ಸೋಮವಂಶೋದ್ಭವಸ್ತಥಾ ॥ ೬೨
ನಾಮ್ನಾಪ್ಯುದಯನಃ ಪ್ರೋಕ್ತೋ ದೇವೈರುದಯಜನ್ಮನಾ ।
ರೂಪೇಣ ಚಾತ್ರ ಸಂಸಾರೇ ಕಂದರ್ಪೋಽಪಿ ನ ತಾದೃಶಃ ॥ ೬೩
ಸ ಏಕಸ್ತವ ತುಲ್ಯೋಽಸ್ತಿ ಪತಿಸ್ತ್ರೈಲೋಕ್ಯಸುಂದರಿ ।
ಸ ಚ ವಾಂಛತಿ ಲಾವಣ್ಯಲುಬ್ಧಸ್ತ್ವಾಂ ಪ್ರಾರ್ಥಿತಾಂ ಧ್ರುವಮ್ ॥ ೬೪

೬೫–೬೮. ಆದರೆ ಚಂಡಮಹಾಸೇನನ ಮಗಳಾದ ವಾಸವದತ್ತೆ ಎಂಬುವಳು ಅವನ ಮಹಾರಾಣಿ. ಉಷೆ, ಶಕುಂತಲೆ ಮುಂತಾದ ಕನ್ಯೆಯರನ್ನು ಮೀರಿಸಿದ ಅವಳು ಇವನನ್ನು ಗಾಢವಾಗಿ ಪ್ರೀತಿಸಿ ತನ್ನ ಬಾಂಧವರನ್ನೆಲ್ಲ ಬಿಟ್ಟು ಇವನನ್ನು ಮದುವೆಯಾದಳು. ವತ್ಸರಾಜನಿಗೆ ಅವಳಲ್ಲಿ ನರವಾಹನದತ್ತ ಎಂಬ ಮಗನು ಜನಿಸಿದನು. ಅವನು ವಿದ್ಯಾಧರ ರಾಜನಾಗುವನೆಂದು ದೇವತೆಗಳು ಭವಿಷ್ಯ ನುಡಿದಿದ್ದಾರೆ. ಆದ್ದರಿಂದ ಅವಳಿಗೆ ಹೆದರಿರುವ ಉದಯನನು ನಿನ್ನನ್ನು ಬೇಡುವುದಿಲ್ಲ. ನಾನು ವಾಸವದತ್ತೆಯನ್ನು ನೋಡಿದ್ದೇನೆ. ರೂಪದಲ್ಲಿ ಅವಳು ನಿನ್ನೊಡನೆ ಸ್ಪರ್ಧಿಸಲಾರಳು.

೬೯. ಹೀಗೆ ನುಡಿದ ಸೋಮಪ್ರಭೆಗೆ ವತ್ಸರಾಜನಲ್ಲಿ ಆಸಕ್ತಳಾದ ಕಳಿಂಗಸೇನೆಯು ಹೇಳಿದಳು.

೭೦–೭೧. ಅದು ನನಗೆ ಗೊತ್ತು. ಆದರೆ ತಂದೆತಾಯಿಯ ಅಧೀನಳಾದ ನನಗೆ ಏನು ಮಾಡಲು ಸಾಧ್ಯ ? ಸರ್ವಜ್ಞಳೂ ಪ್ರಭಾವಿಯೂ ಆದ ನೀನು ನನಗೆ ದಾರಿ ತೋರಿಸಬೇಕು ಎಂದಳು. ಆಗ ಸೋಮಪ್ರಭೆಯು "ಇದು ದೈವದ ಸಹಾಯದಿಂದ ಮಾತ್ರ ಆಗುವಂತಹ ಕಾರ್ಯ. ಒಂದು ಕಥೆಯನ್ನು ಹೇಳುತ್ತೇನೆ ಕೇಳು' ಎಂದು ಈ ಕಥೆಯನ್ನು ಹೇಳಲು ತೊಡಗಿದಳು.

---

ಕಿಂತು ಚಂಡಮಹಾಸೇನಮಹೀಪತಿತನೂದ್ಭವಾ ।
ಅಸ್ತಿ ವಾಸವದತ್ತಾಖ್ಯಾ ತಸ್ಯಾಗ್ರ್ಯಮಹಿಷೀ ಸಖಿ ॥ ೬೫
ತಯಾ ಸ ಚ ವೃತಸ್ತ್ಯಕ್ತ್ವಾ ಬಾಂಧವಾನತಿರಿಕ್ತಯಾ ।
ಉಷಾಶಕುಂತಲಾದೀನಾಂ ಕನ್ಯಾನಾಂ ಹೃತಲಜ್ಜಯಾ ॥ ೬೬
ನರವಾಹನದತ್ತಾಖ್ಯೋ ತಸ್ಯಾಂ ಜಾತೋಽಸ್ಯ ಚಾತ್ಮಜಃ ।
ಆದಿಷ್ಟಃ ಕಿಲ ದೇವೈರ್ಯೋ ಭಾವೀ ವಿದ್ಯಾಧರಾಧಿಪಃ ॥ ೬೭
ಅತಸ್ತಸ್ಯಾಃ ಸ ವತ್ಸೇಶೋ ಭಿಭ್ಯತ್ ತ್ವಾಂ ನೇಹ ಯಾಚತೇ ।
ಸಾ ಚ ದೃಷ್ಟಾ ಮಯಾ ನ ತ್ವಾಂ ಸ್ಪರ್ಧತೇ ರೂಪಸಂಪದಾ ॥ ೬೮
ಏವಮುಕ್ತವತೀಂ ತಾಂ ಚ ಸಖೀಂ ಸೋಮಪ್ರಭಾಂ ತದಾ ।
ಕಲಿಂಗಸೇನಾ ವತ್ಸೇಶಸೋತ್ಸುಕಾ ನಿಜಗಾದ ಸಾ ॥ ೬೯
ಜಾನೇಽಹಮೇತತ್ ವಶ್ಯಾಯಾಃ ಪಿತ್ರೋಃ ಶಕ್ಯಂ ತು ಕಿಂ ಮಮ ।
ಸರ್ವಜ್ಞಾ ಸಪ್ರಭಾವಾ ಚ ತತ್ತ್ವಮೇವಾತ್ರ ಮೇ ಗತಿಃ ॥ ೭೦
ದೈವಾಯತ್ತಮಿದಂ ಕಾರ್ಯಂ ತಥಾ ಚಾತ್ರ ಕಥಾಂ ಶೃಣು ।
ಸೋಮಪ್ರಭಾ ತಾಮಿತ್ಯುಕ್ತ್ವಾ ಶಶಂಸಾಸ್ಯೈ ಕಥಾಮಿಮಾಮ್ ॥ ೭೧

೭೨. ಹಿಂದೆ ಉಜ್ಜಯಿನಿಯಲ್ಲಿ ವಿಕ್ರಮಸೇನ ಎಂಬ ರಾಜನಿದ್ದನು. ಅವನಿಗೆ ತೇಜಸ್ವತೀ ಎಂಬ ಅನುಪಮ ಸುಂದರಿಯಾದ ಮಗಳಿದ್ದಳು.

೭೩. ಅವಳಿಗೆ ಯೋಗ್ಯನಾದ ವರನಾಗುವ ಯಾವ ರಾಜನೂ ಇರಲಿಲ್ಲ. ಒಂದು ಸಲ ಅವಳು ಉಪ್ಪರಿಗೆಯಲ್ಲಿದ್ದಾಗ ಒಬ್ಬ ಪುರುಷನನ್ನು ನೋಡಿದಳು.

೭೪. ಸುಂದರವಾಗಿದ್ದ ಅವನೊಡನೆ ವಿವಾಹವನ್ನು ಬಯಸಿದಳು. ತನ್ನ ಅಭಿಪ್ರಾಯವನ್ನು ತಿಳಿಸಲು ಸಖಿಯನ್ನು ಅವನ ಬಳಿ ಕಳಿಸಿದಳು.

೭೫–೭೬. ಆದರೆ ಸಖಿಯು ಸಾಹಸ ಮಾಡಲು ಹಿಂಜರಿದ ಅವನನ್ನು ಇಷ್ಟವಿಲ್ಲದಿದ್ದರೂ ಒಪ್ಪಿಸಿ ಇಲ್ಲಿ ಏಕಾಂತವಾದ ಒಂದು ದೇವಾಲಯವಿರುವುದು ಕಾಣಿಸುತ್ತಿದೆ, ಅಲ್ಲಿಗೆ ರಾತ್ರಿ ಬಂದು ರಾಜಪುತ್ರಿಗಾಗಿ ಕಾಯುತ್ತಿರಿ ಎಂದು ಹೇಳಿದಳು.

೭೭. ಹೀಗೆ ಹೇಳಿ ಅವನಿಂದ ಬೀಳ್ಕೊಂಡು ಬಂದು ಈ ವಿಷಯವನ್ನು ಅವಳು ತೇಜಸ್ವತಿಗೆ ಹೇಳಿದಳು. ಅವಳು ಅವನಿಗಾಗಿ ಸಂಜೆಯಾಗುವುದನ್ನೇ ಕಾಯುತ್ತಿದ್ದಳು.

೭೮. ಆ ಪುರುಷನು ಒಪ್ಪಿದ್ದರೂ ಭಯದಿಂದ ಬೇರೆ ಕಡೆ ಹೊರಟುಹೋದನು. ಕಪ್ಪೆಗೇನು ಗೊತ್ತು ಕಮಲದ ಪರಾಗದ ಆಸ್ವಾದ !

---

ರಾಜಾ ವಿಕ್ರಮಸೇನಾಖ್ಯ ಉಜ್ಜಯಿನ್ಯಾಮಭೂತ್ ಪುರಾ ।
ತಸ್ಯ ತೇಜಸ್ವತೀತ್ಯಾಸೀತ್ ರೂಪೇಣಾಪ್ರತಿಮಾ ಸುತಾ ॥ ೭೨
ತಸ್ಯಾಶ್ಚಾಭಿಮತಃ ಕಶ್ಚಿತ್ ಪ್ರಾಯೋ ನಾಭೂದ್ವರೋ ನೃಪಃ ।
ಏಕದಾ ಚ ದದರ್ಶೈಕಂ ಪುರುಷಂ ಸಾ ಸ್ವಹರ್ಮ್ಯಗಾ ॥ ೭೩
ತೇನ ಸ್ವಾಕೃತಿನಾ ದೈವಾತ್ ಸಂಗತಿಂ ವಾಂಛತಿ ಸ್ಮ ಸಾ ।
ಸ್ವಾಭಿಪ್ರಾಯಂ ಚ ಸಂದಿಶ್ಯ ತಸ್ಮೈ ಸ್ವಾಂ ವ್ಯಸೃಜತ್ಸಖೀಮ್ ॥ ೭೪
ಸಾ ಗತ್ವಾ ತತ್ಸಖೀ ತಸ್ಯ ಪುಂಸಃ ಸಾಹಸಶಂಕಿನಃ ।
ಅನಿಚ್ಛತೋಽಪಿ ಪ್ರಾರ್ಥ್ಯೈವಂ ಯತ್ನಾತ್ ಸಂಕೇತಕಂ ವ್ಯಧಾತ್ ॥ ೭೫
ಏತದ್ದೇವಕುಲಂ ಭದ್ರ ವಿವಿಕ್ತಂ ಪಶ್ಯಸೀಹ ಯಮ್ ।
ಅತ್ರ ರಾತ್ರೌ ಪ್ರತೀಕ್ಷೇಥಾ ರಾಜಪುತ್ರ್ಯಾಃ ತ್ವಮಾಗಮಮ್ ॥ ೭೬
ಇತ್ಯುಕ್ತ್ವಾ ಸಾ ತಮಾಮಂತ್ರ್ಯ ಗತ್ವಾ ತಸ್ಯೈ ತದಭ್ಯಧಾತ್ ।
ತೇಜಸ್ವತ್ಯೈ ತತಃ ಸಾಪಿ ತಸ್ಥೌ ಸೂರ್ಯಾವಲೋಕಿನೀ ॥ ೭೭
ಪುಮಾಂಶ್ಚ ಸೋಽನುಮಾನ್ಯಾಪಿ ಭಯಾತ್ ಕ್ವಾಪ್ಯನ್ಯತೋ ಯಯೌ ।
ನ ಭೇಕಃ ಕೋಕನದಿನೀಕಿಂಜಲ್ಕಾಸ್ವಾದಕೋವಿದಃ ॥ ೭೮

೭೯–೮೦. ಏತನ್ಮಧ್ಯೆ ಒಬ್ಬ ಒಳ್ಳೆಯ ಕುಲದಲ್ಲಿ ಹುಟ್ಟಿದ ಸುಂದರನಾದ ರಾಜಕುಮಾರನು ಅಲ್ಲಿಗೆ ಬಂದನು. ಅವನ ಹೆಸರು ಸೋಮದತ್ತ ಅವನ ತಂದೆಯು ಮೃತನಾಗಿದ್ದ ದಾಯಾದಿಗಳು ಆಸ್ತಿಯನ್ನು ಅಪಹರಿಸಿದ್ದರು. ಅವನು ತನ್ನ ತಂದೆಯ ಮಿತ್ರನಾದ ರಾಜನನ್ನು ನೋಡಲು ಬಂದಿದ್ದನು.

೮೧–೮೩. ವಿಧಿವಶಾತ್ ಆ ರಾತ್ರಿಯನ್ನು ಕಳೆಯಲು ಅವನು ಸಖಿಯೊಡನೆ ರಾಜಪುತ್ರಿಯು ಒಬ್ಬ ಪುರುಷನಿಗೆ ಕಾಯಲು ಹೇಳಿದ ಅದೇ ದೇವಾಲಯಕ್ಕೆ ಬಂದನು. ಅವಳು ಅವನ ಬಳಿ ಬಂದು ಕತ್ತಲೆಯಲ್ಲಿ ತಿಳಿಯದೆ ಗಾಢಾನುರಾಗದಿಂದ ಅವನನ್ನೇ ಪತಿಯಾಗಿ ವರಿಸಿದಳು. ಅವನೂ ಸಹ ವಿಧಿಯೇ ಅವನಿಗೆ ಕೊಟ್ಟ ಹಾಗೂ ಮುಂದೆ ರಾಜ್ಯಲಕ್ಷ್ಮಿಯೊಡನೆ ಸಮಾಗಮವಾಗುತ್ತದೆ ಎಂಬುದನ್ನು ಸೂಚಿಸುತ್ತಿದ್ದ ರಾಜಕುಮಾರಿಯನ್ನು ಸ್ವೀಕರಿಸಿದನು.

೮೪–೮೫. ಅವಳು ಕೂಡ ಅತಿ ಸುಂದರವಾದ ಅವನನ್ನು ನೋಡಿ ಬ್ರಹ್ಮನು ತನಗೆ ಒಳ್ಳೆಯದನ್ನೇ ಮಾಡಿದ್ದಾನೆಂದು ಭಾವಿಸಿದಳು. ಅನಂತರ ಅವರಿಬ್ಬರೂ ಮಾತನಾಡಿಕೊಂಡು ಅವನು ದೇವಾಲಯದಲ್ಲೇ ಉಳಿದನು, ಅವಳು ಅರಮನೆಗೆ ಒಬ್ಬಳೇ ಹೋದಳು.

---

ಅತ್ರಾಂತರೇ ಚ ಕೋಽಪ್ಯತ್ರ ರಾಜಪುತ್ರಃ ಕುಲೋದ್ಗತಃ ।
ಮೃತೇ ಪಿತರಿ ತನ್ಮಿತ್ರಂ ರಾಜಾನಂ ದ್ರಷ್ಟುಮಾಯಯೌ ॥ ೭೯
ಸ ಚಾತ್ರ ಸಾಯಂ ಸಂಪ್ರಾಪ್ತಃ ಸೋಮದತ್ತಾಭಿಧೋ ಯುವಾ ।
ದಾಯಾದಹೃತರಾಜ್ಯಾದಿರೇಕಾಕೀ ಕಾಂತದರ್ಶನಃ ॥ ೮೦
ವಿವೇಶ ದೈವಾತ್ತತ್ರೈವ ನೇತುಂ ದೇವಕುಲೇ ನಿಶಾಮ್ ।
ರಾಜಪುತ್ರ್ಯಾಃ ಸಖೀ ಯತ್ರ ಪುಂಸಃ ಸಂಕೇತಮಾದಿಶತ್ ॥ ೮೧
ತಂ ತತ್ರಸ್ಥಿತಮಭ್ಯೇತ್ಯ ರಾಜಪುತ್ರ್ಯವಿಭಾವ್ಯ ಸಾ ।
ನಿಶಾಯಾಮನುರಾಗಾಂಧಾ ಸ್ವಯಂವರಪತಿಂ ವ್ಯಧಾತ್ ॥ ೮೨
ಸೋಽಪ್ಯಭ್ಯನಂದತ್ ತೂಷ್ಣೀಂ ತಾಂ ಪ್ರಾಜ್ಞೋ ವಿಧಿಸಮರ್ಪಿತಾಮ್ ।
ಸಂಸೂಚಯಂತೀಂ ಭಾವಿನ್ಯಾ ರಾಜಲಕ್ಷ್ಮ್ಯಾ ಸಮಾಗಮಮ್ ॥ ೮೩
ತತಃ ಕ್ಷಣಾದ್ರಾಜಸುತಾ ಸಾ ವಿಲೋಕ್ಯೈವಮೇವ ತಮ್ ।
ಕಮನೀಯತಮಂ ಮೇನೇ ಧಾತ್ರಾತ್ಮಾನಮವಂಚಿತಾಮ್ ॥ ೮೪
ಅನಂತರಂ ಕಥಾಂ ಕೃತ್ವಾ ಯಥಾ ಸ್ವಂ ಸಂವಿದಾ ತಯೋಃ ।
ಏಕಾ ಸ್ವಮಂದಿರಮಗಾತ್ ಅನ್ಯಸ್ತತ್ರಾನಯನ್ನಿಶಾಮ್ ॥ ೮೫

೮೬. ಮಾರನೆಯ ದಿನ ಬೆಳಿಗ್ಗೆ ಆ ರಾಜಕುಮಾರನು ದ್ವಾರಪಾಲಕನ ಮೂಲಕ ರಾಜನಿಗೆ ತನ್ನ ಆಗಮನವನ್ನು ತಿಳಿಸಿ ರಾಜನ ಬಳಿಗೆ ಹೋದನು.

೮೭–೮೮. ಅಲ್ಲಿ ರಾಜಕುಮಾರನು ರಾಜ್ಯ ಕಳೆದುಕೊಂಡಿರುವುದನ್ನು ತಿಳಿದ ರಾಜನು ಶತ್ರುಗಳನ್ನು ಗೆಲ್ಲಲು ಅವನಿಗೆ ಸಹಾಯಮಾಡುವುದಾಗಿ ಮಾತು ಕೊಟ್ಟನು. ಅಲ್ಲದೆ ಮೊದಲೇ ಕೊಡಲು ನಿರ್ಧರಿಸಿದ್ದಂತೆ ತನ್ನ ಮಗಳನ್ನು ಅವನಿಗೆ ಕೊಡಲು ತೀರ್ಮಾನಿಸಿದನು. ಮಂತ್ರಿಗಳಿಗೂ ತನ್ನ ತೀರ್ಮಾನವನ್ನು ತಿಳಿಸಿದನು.

೮೯. ಮೊದಲೇ ಆಪ್ತ ಸಖಿಯರಿಂದ ಈ ವಿಷಯವನ್ನು ತಿಳಿದುಕೊಂಡಿದ್ದ ರಾಣಿಯು ರಾಜನಿದಿರು ಮಗಳ ವೃತ್ತಾಂತವನ್ನು ಹೇಳಿದಳು.

೯೦–೯೧. ಬೇಡವಾದುದು ನಡೆಯದೆ ನನಗೆ ಬೇಕಾದಂತೆಯೇ ನಡೆದ ಈ ಕಾಕಾತಾಳೀಯದಂತಹ ವಿಸ್ಮಯವನ್ನು ಕೇಳಿ ರಾಜನು ಈ ವಿಷಯದ ಬಗೆಗೆ ಮಂತ್ರಿಗಳೊಡನೆ ಚರ್ಚಿಸಿದನು. ಆಗ ಮಂತ್ರಿಯೊಬ್ಬನು 'ರಾಜನೇ, ಉತ್ತಮರಾದವರು ಉನ್ನತ ಪದವಿಯನ್ನು ಹೊಂದಲೆಂದು ಒಡೆಯನ ಉನ್ನತಿಗಾಗಿ ಸೇವಕರು ತಂತ್ರವನ್ನಾಶ್ರಯಿಸುವಂತೆ ವಿಧಿಯೇ ಕೆಲವೊಮ್ಮೆ ಪಥಕ ರೂಪಿಸುತ್ತದೆ. ಈ ಬಗ್ಗೆ ಕಥೆಯೊದನ್ನು ಹೇಳುತ್ತೇನೆ ಕೇಳು' ಎಂದನು.

---

ಪ್ರಾತರ್ಗತ್ವಾ ಪ್ರತೀಹಾರಮುಖೇನಾವೇದ್ಯ ನಾಮ ಸಃ ।
ರಾಜಪುತ್ರಃ ಪರಿಜ್ಞಾತೋ ರಾಜ್ಞಃ ಪ್ರಾವಿಶದಂತಿಕಮ್ ॥ ೮೬
ತತ್ರೋಕ್ತರಾಜ್ಯಹಾರಾದಿ ದುಃಖಸ್ಯ ಸ ಕೃತಾದರಃ ।
ಅಂಗೀಚಕ್ರೇ ಸಹಾಯತ್ವಂ ರಾಜಾ ತಸ್ಯಾರಿಮರ್ದನೇ ॥ ೮೭
ಮತಿಂ ಚಕ್ರೇ ಚ ತಾಂ ತಸ್ಮೈ ದಾತುಂ ಪ್ರಾಗ್ದಿತ್ಸಿತಾಂ ಸುತಾಮ್ ।
ಮಂತ್ರಿಭ್ಯಶ್ಚ ತದೈವೈತಮಭಿಪ್ರಾಯಂ ಶಶಂಸ ಸಃ ॥ ೮೮
ಅಥೈತಸ್ಮೈ ಚ ರಾಜ್ಞೇ ತಂ ಸುತಾ ವೃತ್ತಾಂತಮಭ್ಯಧಾತ್ ।
ದೇವೀ ಸ್ವಾಬೋಧಿತಾ ಪೂರ್ವಂ ತಯೈವಾಪ್ತಸಖೀ ಮುಖೈಃ ॥ ೮೯
ಅಸಿದ್ಧಾನಿಷ್ಟಸಿದ್ಧೇಷ್ಟಕಾಕತಾಲೀಯವಿಸ್ಮಿತಮ್ ।
ತತಸ್ತಂ ತತ್ರ ರಾಜಾನಮೇಕೋ ಮಂತ್ರೀ ತದಾಬ್ರವೀತ್ ॥ ೯೦
ವಿಧಿರೇವ ಹಿ ಜಾಗರ್ತಿ ಭವ್ಯಾನಾಮರ್ಥಸಿದ್ಧಿಷು ।
ಅಸಂಚೇತಯಮಾನಾನಾಂ ಸದ್ಭೃತ್ಯಃ ಸ್ವಾಮಿನಾಮಿವ ॥ ೯೧
ತಥಾ ಚ ಕಥಯಾಮ್ಯೇತಾಂ ರಾಜನ್ನತ್ರ ಕಥಾಂ ಶೃಣು ।
ಬಭೂವ ಹರಿಶರ್ಮಾಖ್ಯಃ ಕೋಽಪಿ ಗ್ರಾಮೇ ಕ್ವಚಿತ್ ದ್ವಿಜಃ ॥ ೯೨

೯೩. ಒಂದು ಹಳ್ಳಿಯಲ್ಲಿ ಹರಿಶರ್ಮ ಎಂಬ ಬ್ರಾಹ್ಮಣನಿದ್ದನು. ಅವನು ವಿದ್ಯಾವಂತನಲ್ಲ. ಜೊತೆಗೆ ಬಡವ. ಕೆಲಸವೂ ಇಲ್ಲದುದರಿಂದ ದುಃಸ್ಥಿತಿಯಲ್ಲಿದ್ದ. ಹಿಂದಿನ ಜನ್ಮದ ಪಾಪದ ಫಲವನ್ನು ಅನುಭವಿಸುವುದಕ್ಕೆ ಅವನಿಗೆ ಮನೆ ತುಂಬ ಮಕ್ಕಳು.

೯೪. ಅವನು ಕುಟುಂಬದೊಡನೆ ದಾರಿಯುದ್ದಕ್ಕೂ ಭಿಕ್ಷೆಬೇಡುತ್ತಾ ಒಂದು ಪಟ್ಟಣಕ್ಕೆ ಬಂದು ಸ್ಥೂಲದತ್ತ ಎಂಬ ಶ್ರೀಮಂತನನ್ನು ಆಶ್ರಯಿಸಿದನು.

೯೫. ಮಕ್ಕಳನ್ನು ದನಕಾಯುವುದಕ್ಕೂ ಹೆಂಡತಿಯನ್ನು ಮನೆ ಕೆಲಸಕ್ಕೂ ಬಿಟ್ಟು ತಾನು ಆಳಿನ ಕೆಲಸ ಮಾಡುತ್ತಾ ಹತ್ತಿರದಲ್ಲೇ ಒಂದು ಮನೆಯಲ್ಲಿ ವಾಸವಾಗಿದ್ದನು.

೯೬. ಒಮ್ಮೆ ಸ್ಥೂಲದತ್ತನ ಮಗಳ ಮದುವೆಯ ಸಂದರ್ಭ. ಅದಕ್ಕಾಗಿ ಅಲ್ಲಿ ಜನರು ಬಂದು ನೆರೆದಿದ್ದರು.

೯೭–೯೮. ಆಗ ಹರಿಶರ್ಮನು ತನಗೂ ತನ್ನ ಕುಟುಂಬಕ್ಕೂ ಕಂಠಪೂರ್ತಿಯಾಗಿ ತುಪ್ಪ ಮಾಂಸ ಇತ್ಯಾದಿಗಳಿಂದ ಪುಷ್ಕಳ ಭೋಜನ ದೊರೆಯುವುದೆಂದು ಆಸೆಪಟ್ಟಿದ್ದನು. ಆದರೆ ಅದಕ್ಕಾಗಿ ಕಾಯುತ್ತಿದ್ದ ಅವನ ನೆನಪೇ ಯಾರಿಗೂ ಆಗಲಿಲ್ಲ. ಆಹಾರವಿಲ್ಲದೆ ದುಃಖಗೊಂಡ ಅವನು ತನ್ನ ಹೆಂಡತಿಗೆ ರಾತ್ರಿ ಹೇಳಿದನು.

೯೯. "ಬಡತನ ಮತ್ತು ದಡ್ಡತನ ನನ್ನನ್ನು ಈ ಅಗೌರವದ ಸ್ಥಿತಿಗೆ ತಂದಿದೆ. ಈಗ ಕುಟಿಲತಂತ್ರದಿಂದ ನನ್ನ ವಿಜ್ಞಾನವನ್ನು ಪ್ರಯೋಗಿಸುತ್ತೇನೆ.

---

ಸ ದರಿದ್ರಶ್ಚ ಮೂರ್ಖಶ್ಚ ವೃತ್ತ್ಯಭಾವೇನ ದುಃಸ್ಥಿತಃ ।
ಪೂರ್ವದುಷ್ಕೃತಭೋಗಾಯ ಜಾತೋಽತಿಬಹುಬಾಲಕಃ ॥ ೯೩
ಸಕುಟುಂಬೋ ಭ್ರಮನ್ ಭಿಕ್ಷಾಂ ಪ್ರಾಪ್ಯೈಕಂ ನಗರಂ ಕ್ರಮಾತ್ ।
ಶಿಶ್ರಿಯೇ ಸ್ಥೂಲದತ್ತಾಖ್ಯಂ ಗೃಹಸ್ಥಂ ಚ ಮಹಾಧನಮ್ ॥ ೯೪
ಗವಾದಿರಕ್ಷಕಾನ್ ಪುತ್ರಾನ್ ಭಾರ್ಯಾಂ ಕರ್ಮಕರೀಂ ನಿಜಾಮ್ ।
ತಸ್ಯ ಕೃತ್ವಾ ಗೃಹಾಭ್ಯರ್ಣೇ ಪ್ರೈಷ್ಯಂ ಕುರ್ವನ್ನುವಾಸ ಸಃ ॥ ೯೫
ಏಕದಾ ಸ್ಥೂಲದತ್ತಸ್ಯ ಸುತಾಪರಿಣಯೋತ್ಸವಃ ।
ತಸ್ಯಾಭೂದಾಗತಾನೇಕಜನ್ಯಯಾತ್ರಾ ಜನಾಕುಲಃ ॥ ೯೬
ತದಾ ಚ ಹರಿಶರ್ಮಾತ್ರ ತದ್ಗೃಹೇ ಸಕುಟುಂಬಕಃ ।
ಆಕಂಠಘೃತಮಾಂಸಾದಿ ಭೋಜನಾಸ್ಥಾಂ ಬಬಂಧ ಸಃ ॥ ೯೭
ತದ್ವೇಲಾಂ ವೀಕ್ಷಮಾಣೋಽಥ ಸ್ಮೃತಃ ಕೇನಾಪಿ ನಾತ್ರ ಸಃ ।
ತತೋಽನಾಹಾರನಿರ್ವಿಣ್ಣೋ ಭಾರ್ಯಾಮಿತ್ಯಬ್ರವೀನ್ನಿಶಿ ॥ ೯೮
ದಾರಿದ್ರ್ಯಾದಿಹ ಮೌರ್ಖ್ಯಾಚ್ಚ ಮಮೇದೃಶಮಗೌರವಮ್ ।
ತದತ್ರ ಕೃತ್ರಿಮಂ ಯುಕ್ತ್ಯಾ ವಿಜ್ಞಾನಂ ಪ್ರಯುನಜ್ಮ್ಯಹಮ್ ॥ ೯೯

೧೦೦. ಅದರಿಂದ ಸ್ಥೂಲದತ್ತನಿಗೆ ನನ್ನ ಮೇಲೆ ಗೌರವ ಬರುವುದು. ನೀನು ಅವಕಾಶ ಸಿಕ್ಕಾಗ ನಾನು ಮಹಾಜ್ಞಾನಿ ಎಂದು ಅವನಿಗೆ ತಿಳಿಸು' ಎಂದನು.

೧೦೧–೧೦೨. ಹೀಗೆ ಅವಳಿಗೆ ಹೇಳಿ ಸ್ವಲ್ಪ ಯೋಚನೆಮಾಡಿ ಜನರೆಲ್ಲ ಮಲಗಿದ್ದಾಗ ಸ್ಥೂಲದತ್ತನ ಮನೆಯಿಂದ ಅಳಿಯನ ಕುದುರೆಯನ್ನು ದೂರದಲ್ಲಿ ಒಂದು ಕಡೆ ಬಚ್ಚಿಟ್ಟನು. ಬೆಳಿಗ್ಗೆ ಎಲ್ಲರೂ ಕುದುರೆಯನ್ನು ಎಲ್ಲಿ ಹುಡುಕಿದರೂ ಅದು ಸಿಗಲಿಲ್ಲ.

೧೦೩–೧೦೪. ಆಗ ಹರಿಶರ್ಮನ ಹೆಂಡತಿಯು ಅಮಂಗಳವಾಯಿತೆಂದು ಹೆದರಿ ಕುದುರೆಯನ್ನು ಹುಡುಕುತ್ತಿದ್ದ ಸ್ಥೂಲದತ್ತನ ಹತ್ತಿರ ಬಂದು ""ನನ್ನ ಗಂಡನು ಜ್ಯೋತಿಷ್ಯವನ್ನು ಬಲ್ಲ ಮಹಾಮೇಧಾವಿ. ಕುದುರೆಯ ಸುಳಿವನ್ನು ಹೇಳುತ್ತಾರೆ. ಅವರನ್ನು ಏಕೆ ಕೇಳುವುದಿಲ್ಲ?" ಎಂದಳು.

೧೦೫–೧೦೬. ಅದನ್ನು ಕೇಳಿ ಸ್ಥೂಲದತ್ತನು ಹರಿಶರ್ಮನನ್ನು ಆಹ್ವಾನಿಸಿದನು. ಆಗ ಹರಿಶರ್ಮನು 'ನಿನ್ನ ಕುದುರೆ ಕಳವಾದಾಗ ನನ್ನನ್ನು ಮರೆತುಬಿಟ್ಟೆ ಈಗ ನನ್ನ ಜ್ಞಾಪಕ ಬಂದಿತಲ್ಲವೇ' ಎಂದಾಗ ರಾಜನು 'ಮರೆತುಬಿಟ್ಟೆ ಕ್ಷಮಿಸು' ಎಂದು ಪ್ರಾರ್ಥಿಸಿ "ನನ್ನ ಕುದುರೆಯನ್ನು ಕದ್ದವರಾರು ಹೇಳು' ಎಂದು ಕೇಳಿದನು.

---

ಯೇನಾಸ್ಯ ಸ್ಥೂಲದತ್ತಸ್ಯ ಭವೇಯಂ ಗೌರವಾಸ್ಪದಮ್ ।
ತ್ವಂ ಪ್ರಾಪ್ತೇಽವಸರೇ ಚಾಸ್ಮೈ ಜ್ಞಾನಿನಂ ಮಾಂ ನಿವೇದಯ ॥ ೧೦೦
ಇತ್ಯುಕ್ತ್ವಾ ತಾಂ ವಿಚಿಂತ್ಯಾಥ ಧಿಯಾ ಸುಪ್ತೇ ಜನೇ ಹಯಃ ।
ಸ್ಥೂಲದತ್ತಗೃಹಾತ್ತೇನ ಜಹ್ರೇ ಜಾಮಾತೃವಾಹನಃ ॥ ೧೦೧
ದೂರೇ ಪ್ರಚ್ಛನ್ನಮೇತೇನ ಸ್ಥಾಪಿತಂ ಪ್ರಾತರತ್ರ ತಮ್ ।
ಇತಸ್ತತೋ ವಿಚಿನ್ವಂತೋಽಪ್ಯಶ್ವಂ ಜನ್ಯಾ ನ ಲೇಭಿರೇ ॥ ೧೦೨
ಅಥಾಮಂಗಲವಿತ್ರಸ್ತಂ ಹಯಚೌರಗವೇಷಿಣಮ್ ।
ಹರಿಶರ್ಮವಧೂರೇತ್ಯ ಸ್ಥೂಲದತ್ತಮುವಾಚ ಸಾ ॥ ೧೦೩
ಭರ್ತಾ ಮದೀಯೋ ವಿಜ್ಞಾನೀ ಜ್ಯೋತಿರ್ವಿದ್ಯಾದಿಕೋವಿದಃ ।
ಅಶ್ವಂ ವೋ ಲಂಭಯತ್ಯೇನಂ ಕಿಮರ್ಥಂ ಸ ನ ಪೃಚ್ಛ್ಯತೇ ॥ ೧೦೪
ತಚ್ಛ್ರುತ್ವಾ ಸ್ಥೂಲದತ್ತಸ್ತಂ ಹರಿಶರ್ಮಾಣಮಾಹ್ವಯತ್ ।
ಹ್ಯೋ ವಿಸ್ಮೃತೋ ಹೃತೇಽಶ್ವೇ ತು ಸ್ಮೃತೋಽಸ್ಮ್ಯದ್ಯೇತಿ ವಾದಿನಮ್ ॥ ೧೦೫
ವಿಸ್ಮೃತಂ ನಃ ಕ್ಷಮಸ್ವೇತಿ ಪ್ರಾರ್ಥಿತಂ ಬ್ರಾಹ್ಮಣಂ ಚ ಸಃ ।
ಪಪ್ರಚ್ಛ ಕೇನಾಪಹೃತೋ ಹಯೋ ನಃ ಕಥ್ಯತಾಮಿತಿ ॥ ೧೦೬

೧೦೭–೧೦೮. ಹರಿಶರ್ಮನು ಸುಳ್ಳು ಸುಳ್ಳು ಗೀಟುಗಳನ್ನು ಹಾಕಿ ಹೇಳಿದನು: "ಇಲ್ಲಿಂದ ದಕ್ಷಿಣ ದಿಕ್ಕಿನಲ್ಲಿ ಗಡಿಭಾಗದಲ್ಲಿ ಕಳ್ಳರು ಕುದುರೆಯನ್ನು ಇಟ್ಟಿದ್ದಾರೆ. ಸಾಯಂಕಾಲದ ಹೊತ್ತಿಗೆ ಅದನ್ನು ಇನ್ನೂ ದೂರಕ್ಕೆ ಒಯ್ಯುವುದರೊಳಗೆ ಕರೆದುಕೊಂಡು ಬನ್ನಿ' ಎಂದನು.

೧೦೯–೧೧೦. ಅದನ್ನು ಕೇಳಿ ಜನರು ಓಡಿಹೋಗಿ ಆ ಕುದುರೆಯನ್ನು ಕರೆದುಕೊಂಡು ಬಂದರು. ಎಲ್ಲರೂ ಹರಿಶರ್ಮನನ್ನು ಜ್ಞಾನಿ ಎಂದು ಹೊಗಳಿ ಬಹುವಿಧವಾಗಿ ಗೌರವಿಸಿದರು. ಸ್ಥೂಲದತ್ತನೂ ಅವನನ್ನು ಗೌರವಿಸಿ ಸುಖವಾಗಿಟ್ಟಿದ್ದನು.

೧೧೧–೧೧೨. ಹೀಗಿರುವಾಗ ಒಮ್ಮೆ ಅರಮನೆಯಲ್ಲಿ ಮುತ್ತು ರತ್ನಗಳು ಕಳವಾದವು. ಕದ್ದವರು ಯಾರು ಎಂದು ಗೊತ್ತಾಗದಿದ್ದಾಗ ರಾಜನು ಜ್ಞಾನಿ ಎಂದು ಪ್ರಸಿದ್ಧನಾಗಿದ್ದ ಹರಿಶರ್ಮನನ್ನು ಕರೆಸಿದನು.

೧೧೩. ಅವನು ಬಂದು ಕಾಲಹರಣ ಮಾಡುತ್ತಾ 'ಬೆಳಿಗ್ಗೆ ಹೇಳುವೆನು' ಎಂದನು. ರಾಜನು ಅವನನ್ನು ಬಿಗಿ ಕಾವಲಿನಲ್ಲಿ ಇಟ್ಟನು.

---

ಹರಿಶರ್ಮಾ ತತೋ ಮಿಥ್ಯಾರೇಖಾಃ ಕುರ್ವನ್ನುವಾಚ ಸಃ ।
ಇತೋ ದಕ್ಷಿಣಸೀಮಾಂತೇ ಚೋರೈಃ ಸಂಸ್ಥಾಪಿತೋ ಹಯಃ ॥ ೧೦೭
ಪ್ರಚ್ಛನ್ನಸ್ಥೋ ದಿನಾಂತೇ ಚ ದೂರಂ ಯಾವನ್ನ ನೀಯತೇ ।
ತಾವದಾನೀಯತಾಂ ಗತ್ವಾ ತ್ವರಿತಂ ಸ ತುರಂಗಮಃ ॥ ೧೦೮
ತಚ್ಛ್ರುತ್ವಾ ಧಾವಿತೈಃ ಪ್ರಾಪ್ಯ ಕ್ಷಣಾತ್ ಸ ಬಹುಭಿರ್ನರೈಃ ।
ಆನಿನ್ಯೇಽಶ್ವಃ ಪ್ರಶಂಸದ್ಭಿಃ ವಿಜ್ಞಾನಂ ಹರಿಶರ್ಮಣಃ ॥ ೧೦೯
ತತೋ ಜ್ಞಾನೀತಿ ಸರ್ವೇಣ ಪೂಜ್ಯಮಾನೋ ಜನೇನ ಸಃ ।
ಉವಾಸ ಹರಿಶರ್ಮಾತ್ರ ಸ್ಥೂಲದತ್ತಾರ್ಚಿತಃ ಸುಖಮ್ ॥ ೧೧೦
ಅಥ ಗಚ್ಛತ್ಸು ದಿವಸೇಷ್ವತ್ರ ರಾಜಗೃಹಾಂತರಾತ್ ।
ಹೇಮರತ್ನಾದಿ ಚೌರೇಣ ಭೂರಿ ಕೇನಾಪ್ಯನೀಯತ ॥ ೧೧೧
ನಾಜ್ಞಾಯತ ಯದಾ ಚೌರಸ್ತದಾ ಜ್ಞಾನಪ್ರಸಿದ್ಧಿತಃ ।
ಆನಾಯಯಾಮಾಸ ನೃಪೋ ಹರಿಶರ್ಮಾಣಮಾಶು ತಮ್ ॥ ೧೧೨
ಸ ಚಾನೀತಃ ಕ್ಷಿಪನ್ ಕಾಲಂ ವಕ್ಷ್ಯೇ ಪ್ರಾತರಿತಿಬ್ರುವನ್ ।
ವಾಸಕೇ ಸ್ಥಾಪಿತೋ ಜ್ಞಾನವಿಗ್ನೋ ರಾಜ್ಞಾ ಸುರಕ್ಷಿತಃ ॥ ೧೧೩

೧೧೪–೧೧೫. ಆ ಅರಮನೆಯಲ್ಲಿ "ಜಿಹ್ವೆ' ಎಂಬ ದಾಸಿ ಇದ್ದಳು. ಅವಳು ತನ್ನ ಅಣ್ಣನ ಜೊತೆಗೂಡಿ ಆಭರಣಗಳನ್ನು ಕದ್ದಿದ್ದಳು. ಅವಳು ರಾತ್ರಿ ಹರಿಶರ್ಮನು ಇದ್ದ ಕೋಣೆಯ ಹತ್ತಿರಹೋಗಿ ಅವನಿಗೆ ತಿಳಿದಿರಬಹುದೆಂಬ ಶಂಕೆಯಿಂದ ಬಾಗಿಲಿನಲ್ಲಿ ನಿಂತುಕೊಂಡು ಕದ್ದುಕೇಳುತ್ತಿದ್ದಳು.

೧೧೬–೧೧೭ ಆಗ ಹರಿಶರ್ಮನು ಆ ಕೊಠಡಿಯಲ್ಲಿ ಒಬ್ಬನೇ ಇದ್ದು, ಸುಳ್ಳು ಹೇಳಿದ ತನ್ನ "ಜಿಹ್ವೆ'ಯನ್ನು (ನಾಲಗೆಯನ್ನು) ನಿಂದಿಸುತ್ತಿದ್ದನು. "ಜಿಹ್ವೆಯೇ! ದುರಾಸೆಯಿಂದ ಎಂತಹ ಕೆಲಸ ಮಾಡಿಬಿಟ್ಟೆ ಈಗ ಕಾರಾಗೃಹದ ವಾಸವನ್ನು ಅನುಭವಿಸು' ಎಂದನು.

೧೧೮–೧೨೦. ಅದನ್ನು ಕೇಳಿ ದಾಸಿಯಾದ ಜಿಹ್ವೆಯು ಈ ಜ್ಞಾನಿಯು ನಾನೇ ಕದ್ದಿರುವುದನ್ನು ತಿಳಿದುಬಿಟ್ಟಿದ್ದಾನೆ ಎಂದು ಭಯಗೊಂಡು ಅವನ ಹತ್ತಿರ ಉಪಾಯದಿಂದ ಹೋಗಿ ಅವನ ಕಾಲಿಗೆ ಬಿದ್ದು ಹೀಗೆಂದಳು: "ಬ್ರಾಹ್ಮಣನೇ ನಾನೇ ಆಭರಣಗಳನ್ನು ಕದ್ದ ಜಿಹ್ವೆ ಎಂದು ನೀನು ತಿಳಿದಿರುವೆ. ಕದ್ದ ಮಾಲನ್ನು ಅರಮನೆಯ ಹಿಂದಿರುವ ಉದ್ಯಾನದಲ್ಲಿ ದಾಳಿಂಬೆ ಮರದ ಕೆಳಗೆ ಹೂತಿಟ್ಟಿದ್ದೇನೆ.

---

ತತ್ರ ರಾಜಕುಲೇ ಚಾಸೀನ್ನಾಮ್ನಾ ಜಿಹ್ವೇತಿ ಚೇಟಿಕಾ ।
ಯಯಾ ಭ್ರಾತ್ರಾ ಸಮಂ ತಚ್ಚ ನೀತಮಭ್ಯಂತರಾದ್ಧನಮ್ ॥ ೧೧೪
ಸಾ ಗತ್ವಾ ನಿಶಿ ತತ್ರಾಸ್ಯ ವಾಸಕೇ ಹರಿಶರ್ಮಣಃ ।
ಜಿಜ್ಞಾಸಯಾ ದದೌ ದ್ವಾರಿ ಕರ್ಣಂ ತಜ್ಜ್ಞಾನಶಂಕಿತಾ ॥ ೧೧೫
ಹರಿಶರ್ಮಾ ಚ ತತ್ಕಾಲಂ ಏಕಕೋಽಭ್ಯಂತರೇ ಸ್ಥಿತಃ ।
ನಿಜಾಂ ಜಿಹ್ವಾಂ ನಿನಿಂದೈವಂ ಮೃಷಾವಿಜ್ಞಾನವಾದಿನಮ್ ॥ ೧೧೬
ಭೋಗಲಂಪಟಯಾ ಜಿಹ್ವೇ ಕಿಮಿದಂ ವಿಹಿತಂ ತ್ವಯಾ ।
ದುರಾಚಾರೇ ಸಹಸ್ವ ತ್ವಮಿದಾನೀಮಿಹ ನಿಗ್ರಹಮ್ ॥ ೧೧೭
ತತ್‌ಶ್ರುತ್ವಾ ಜ್ಞಾನಿನಾನೇನ ಜ್ಞಾತಾಸ್ಮೀತಿ ಭಯೇನ ಸಾ ।
ಜಿಹ್ವಾಖ್ಯಾ ಚೇಟಿಕಾ ಯುಕ್ತ್ಯಾ ಪ್ರವಿವೇಶ ತದಂತಿಕಮ್ ॥ ೧೧೮
ಪತಿತ್ವಾ ಪಾದಯೋಸ್ತಸ್ಯ ಜ್ಞಾನಿವ್ಯಂಜನಮಬ್ರವೀತ್ ।
ಬ್ರಹ್ಮನ್ನಿಯಂ ಸಾ ಜಿಹ್ವಾಹಂ ತ್ವಯಾ ಜ್ಞಾತಾರ್ಥಹಾರಿಣೀ ॥ ೧೧೯
ನೀತ್ವಾ ತಚ್ಚ ಮಯಾಸ್ಯೈವ ಮಂದಿರಸ್ಯೇಹ ಪೃಷ್ಠತಃ
ಉದ್ಯಾನೇ ದಾಡಿಮಸ್ಯಾಧೋ ನಿಖಾತಂ ಭೂತಲೇ ಧನಮ್ ॥ ೧೨೦

೧೨೧. ನನ್ನ ಕೈಯಲ್ಲಿರುವ ಈ ಸ್ವಲ್ಪ ಬಂಗಾರವನ್ನು ನೀನು ತೆಗೆದುಕೊಂಡು ನನ್ನನ್ನು ಕಾಪಾಡು' ಎಂದಳು. ಇದನ್ನು ಕೇಳಿ ಹರಿಶರ್ಮನು ಗರ್ವದಿಂದ ಅವಳಿಗೆ ಹೀಗೆ ಹೇಳಿದನು.

೧೨೨–೧೨೩. '"ನನಗೆ ಭೂತ, ವರ್ತಮಾನ, ಭವಿಷ್ಯತ್ಕಾಲವೆಲ್ಲ ಗೊತ್ತು. ರಕ್ಷಣೆಕೋರಿ ಬಂದಿರುವ ನಿನ್ನನ್ನು ಬಯಲುಗೊಳಿಸುವುದಿಲ್ಲ. ನಿನ್ನ ಕೈಯಲ್ಲಿರುವುದನ್ನು ಕೊಟ್ಟು ಹೋಗು" ಎಂದು ಹೇಳಿದಾಗ ಅವಳು ಹಾಗೆಯೇ ಮಾಡಿ ಹೊರಟುಹೋದಳು.

೧೨೪–೧೨೬. ವಿಸ್ಮಯಗೊಂಡ ಹರಿಶರ್ಮನು ಯೋಚಿಸಿದನು. ವಿಧಿಯು ನಮ್ಮ ಕಡೆ ತಿರುಗಿದರೆ ಅಸಾಧ್ಯವಾದುದೂ ಸುಲಭವಾಗಿ ಸಾಧ್ಯವಾಗುತ್ತದೆ. ಅನರ್ಥವಾಗುವ ಸಂದರ್ಭ ಬಂದಿದ್ದಾಗ ಅದಕ್ಕೆ ವಿರುದ್ಧವಾಗಿ ಒಳ್ಳೆಯದೇ ಆಗಿದೆ. ನಾನು ನನ್ನ ನಾಲಗೆಯನ್ನು ನಿಂದಿಸುತ್ತಿದ್ದರೆ 'ಜಿಹ್ವೆ' ಎಂಬ ಕಳ್ಳಿಯು ನನ್ನ ಎದುರಿಗೆ ಬಂದಳಲ್ಲಾ! ಕಳ್ಳರು ಸಂದೇಹದಿಂದಲೂ ಬಯಲಾಗುತ್ತಾರೆ ಎಂದು ಯೋಚಿಸುತ್ತಾ ಸಂತೋಷಗೊಂಡು ರಾತ್ರಿಯನ್ನು ಕಳೆದನು.

---

ತದ್ರಕ್ಷ ಮಾಂ ಗೃಹಾಣೇಮಂ ಕಿಂಚಿನ್ಮೇ ಹೇಮ ಹಸ್ತಗಮ್ ।
ಏತತ್ ಶ್ರುತ್ವಾ ಸಗರ್ವಂ ಸ ಹರಿಶರ್ಮಾ ಜಗಾದ ತಾಮ್ ॥ ೧೨೧
ಗಚ್ಛ ಜಾನಾಮ್ಯಹಂ ಸರ್ವಂ ಭೂತಂ ಭವ್ಯಂ ಭವತ್ತಥಾ ।
ತ್ವಾಂ ತು ನೋದ್ಘಾಟಯಿಷ್ಯಾಮಿ ಕೃಪಣಾಂ ಶರಣಾಗತಾಮ್ ॥ ೧೨೨
ಯಚ್ಚ ಹಸ್ತಗತಂ ತೇಽಸ್ತಿ ತದ್ದಾಸ್ಯಸಿ ಪುನರ್ಮಮ ।
ಇತ್ಯುಕ್ತಾ ತೇನ ಸಾ ಚೇಟೀ ತಥೇತ್ಯಾಶು ತತೋ ಯಯೌ ॥ ೧೨೩
ಹರಿಶರ್ಮಾ ಚ ಸ ತತೋ ವಿಸ್ಮಯಾದಿತ್ಯಚಿಂತಯತ್ ।
ಅಸಾಧ್ಯಂ ಸಾಧಯತ್ಯರ್ಥಂ ಹೇಲಯಾಭಿಮುಖೋ ವಿಧಿಃ ॥ ೧೨೪
ಯದಿಹೋಪಸ್ಥಿತೇಽನರ್ಥೇ ಸಿದ್ಧೋಽರ್ಥೋಽಶಂಕಿತಂ ಮಮ ।
ಸ್ವಜಿಹ್ವಾಂ ನಿಂದತೋ ಜಿಹ್ವಾ ಚೌರೀ ಮೇ ಪತಿತಾ ಪುರಃ ॥ ೧೨೫
ಶಂಕಯೈವ ಪ್ರಕಾಶಂತೇ ಬತ ಪ್ರಚ್ಛನ್ನಪಾತಕಾಃ ।
ಇತ್ಯಾದ್ಯಾಕಲಯನ್ ಸೋಽತ್ರ ಹೃಷ್ಟೋ ರಾತ್ರಿಂ ನಿನಾಯ ತಾಮ್ ॥ ೧೨೬

೧೨೭–೧೩೦. ಬೆಳಿಗ್ಗೆ ಅವನು ಸುಳ್ಳು ವಿಜ್ಞಾನವನ್ನು ತೋರಿಸಿ ರಾಜನನ್ನು ಕರೆದುಕೊಂಡು ಹೋಗಿ ಉದ್ಯಾನದಲ್ಲಿ ಹುದುಗಿಸಿ ಇಟ್ಟಿರುವ ಧನವನ್ನು ತೋರಿಸಿದನು. ಕಳ್ಳನು ಸ್ವಲ್ಪ ಆಭರಣಗಳನ್ನು ಒಯ್ದಿರುವುದಾಗಿಯೂ ಹೇಳಿದನು. ಅದರಿಂದ ಸಂತೋಷಗೊಂಡ ರಾಜನು ಅವನಿಗೆ ಹಳ್ಳಿಗಳನ್ನು ಕೊಡಬೇಕೆಂದಿದ್ದನು. ಆಗ ಮಂತ್ರಿಯು "ಮನುಷ್ಯನಿಗೆ ಮೀರಿದ ಶಾಸ್ತ್ರಜ್ಞಾನವಿಲ್ಲದೆ ಈ ತಿಳಿವಳಿಕೆಯು ಬರಲಾರದು. ನಿಜವಾಗಿಯೂ ಹೊಟ್ಟೆಪಾಡಿಗಾಗಿ ಇವನು ಕಳ್ಳರ ಗುಂಪಿನಿಂದ ಬಂದವನಾಗಿರಬೇಕು. ಆದ್ದರಿಂದ ಬೇರೊಂದು ಉಪಾಯದಿಂದ ಇವನು ಜ್ಞಾನಿಯೇ ಎಂಬುದನ್ನು ಪರೀಕ್ಷಿಸಬೇಕು' ಎಂದು ರಾಜನಿಗೆ ಕಿವಿಯಲ್ಲಿ ಹೇಳಿದನು.

೧೩೧. ಅನಂತರ ಒಂದು ಹೊಸ ಗಡಿಗೆಯನ್ನು ತರಿಸಿ ಅದರಲ್ಲಿ ಒಂದು ಕಪ್ಪೆ (ಮಂಡೂಕ)ಯನ್ನು ಹಾಕಿ ರಾಜನು ಹರಿಶರ್ಮನಿಗೆ ಹೇಳಿದನು.

೧೩೨. "ಎಲೈ ಬ್ರಾಹ್ಮಣನೆ ! ಈ ಗಡಿಗೆಯಲ್ಲಿ ಏನು ಇದೆ ಎಂದು ನೀನು ತಿಳಿದು ಹೇಳಿದರೆ ನಿನಗೆ ಇನ್ನೂ ಹೆಚ್ಚಿನ ಗೌರವವನ್ನು ಮಾಡುತ್ತೇನೆ' ಎಂದನು.

---

ಪ್ರಾತಶ್ಚಾಲೀಕವಿಜ್ಞಾನಯುಕ್ತ್ಯಾ ನೀತ್ವಾ ಸ ತಂ ನೃಪಮ್ ।
ತತ್ರೋದ್ಯಾನೇ ನಿಖಾತಸ್ಥಂ ಪ್ರಾಪಯಾಮಾಸ ತದ್ಧನಮ್ ॥ ೧೨೭
ಚೌರಂ ಚಾಪ್ಯಪನೀತಾಂಶಂ ಶಶಂಸ ಪ್ರಪಲಾಯಿತಮ್ ।
ತತಸ್ತುಷ್ಟೋ ನೃಪಸ್ತಸ್ಮೈ ಗ್ರಾಮಾನ್ ದಾತುಂ ಪ್ರಚಕ್ರಮೇ ॥ ೧೨೮
ಕಥಂ ಸ್ಯಾನ್ಮಾನುಷಾಗಮ್ಯಂ ಜ್ಞಾನಂ ಶಾಸ್ತ್ರಂ ವಿನೇದೃಶಮ್ ।
ತನ್ನೂನಂ ಚೌರಸಂಕೇತಕೃತೇಯಂ ಧೂರ್ತಜೀವಿಕಾ ॥ ೧೨೯
ತಸ್ಮಾದೇಷೋಽನ್ಯಥಾ ಯುಕ್ತ್ಯಾ ವಾರಮೇಕಂ ಪರೀಕ್ಷ್ಯತಾಮ್ ।
ದೇವ ಜ್ಞಾನೀತಿ ಕರ್ಣೇ ತಂ ಮಂತ್ರೀ ರಾಜಾನಮಭ್ಯಧಾತ್ ॥ ೧೩೦
ತತೋಽಂತಃಕ್ಷಿಪ್ತಮಂಡೂಕಂ ಸಪಿಧಾನಂ ನವಂ ಘಟಮ್ ।
ಸ್ವೈರಮಾನಾಯ್ಯ ರಾಜಾ ತಂ ಹರಿಶರ್ಮಾಣಮಬ್ರವೀತ್ ॥ ೧೩೧
ಬ್ರಹ್ಮನ್ ಯದಸ್ಮಿನ್ ಘಟಕೇ ಸ್ಥಿತಂ ಜಾನಾಸಿ ತದ್ವದ ।
ತದದ್ಯ ತೇ ಕರಿಷ್ಯಾಮಿ ಪೂಜಾಂ ಸುಮಹತೀಮಹಮ್ ॥ ೧೩೨

೧೩೩–೧೩೫. ಅದನ್ನು ಕೇಳಿ ತನ್ನ ವಿನಾಶವು ಹತ್ತಿರದಲ್ಲಿದೆ ಎಂದು ಭಾವಿಸಿ ಚಿಕ್ಕಂದಿನಲ್ಲಿ ತನ್ನ ತಂದೆಯು ಮುದ್ದಿಗಾಗಿ "ಮಂಡೂಕ' ಎಂದು ತನ್ನನ್ನು ಕರೆಯುತ್ತಿದ್ದುದನ್ನು ಜ್ಞಾಪಿಸಿಕೊಂಡು ವಿಧಿಯ ಪ್ರೇರಣೆಯಿಂದ ನನಗೆ ಈ ದುಃಸ್ಥಿತಿ ಒದಗಿದೆ ಎಂದು ಹಳಿದುಕೊಳ್ಳುತ್ತಾ ಹರಿಶರ್ಮನು ಕೂಡಲೆ ""ಎಲೈ ಮಂಡೂಕ! ಇದ್ದಕ್ಕಿದ್ದ ಹಾಗೆ ನಿನಗೆ ಈ ಗಡಿಗೆಯು ಪ್ರಾಪ್ತವಾಗಿ ವಿನಾಶಕ್ಕೆ ಕಾರಣವಾಗಿದೆ" ಎಂದು ಬಿಟ್ಟನು.

೧೩೬. ಅದನ್ನು ಕೇಳಿದ ಜನರು ಮಹಾಜ್ಞಾನಿಯಾದ ಇವನು ಗಡಿಗೆಯಲ್ಲಿ "ಮಂಡೂಕ' (ಕಪ್ಪೆ) ಇದೆ ಎಂದು ಹೇಳಿಬಿಟ್ಟನಲ್ಲಾ ಎಂದು ಅವನು ಹೇಳಿದುದು ಪ್ರಸ್ತುತ ವಿಷಯಕ್ಕೆ ಅನ್ವಯವಾದುದರಿಂದ ಸಂತೋಷಪಟ್ಟರು.

೧೩೭–೧೩೮. ಅನಂತರ ಅವನು ನಿಜವಾಗಿಯೂ ಪ್ರತಿಭಾವಂತ ಎಂದು ತಿಳಿದು ಹರ್ಷಗೊಂಡ ರಾಜನು ಅವನಿಗೆ ಗ್ರಾಮಗಳನ್ನೂ ಆಭರಣಗಳನ್ನೂ, ವಾಹನಗಳನ್ನೂ ಕೊಟ್ಟನು. ಹೀಗೆ ಹರಿಶರ್ಮನು ಸಾಮಂತರಾಜನಂತೆ ಮೆರೆಯತೊಡಗಿದನು. ಪುಣ್ಯಕರ್ಮಗಳ ಬೆಂಬಲವಿದ್ದವರಿಗೆ ವಿಧಿಯ ಕಟಾಕ್ಷದಿಂದ ಒಳ್ಳೆಯ ಕೆಲಸಗಳು ಸಾಧಿತವಾಗುತ್ತವೆ.

---

ತತ್ಶ್ರುತ್ವಾ ನಾಶಕಾಲಂ ತಂ ಮತ್ವಾ ಸ್ಮೃತ್ವಾ ತತೋ ನಿಜಮ್ ।
ಪಿತ್ರಾ ಕ್ರೀಡಾಕೃತಂ ಬಾಲ್ಯೇ ಮಂಡೂಕ ಇತಿ ನಾಮ ಸಃ ॥ ೧೩೩
ವಿಧಾತೃಪ್ರೇರಿತಃ ಕುರ್ವನ್ ತೇನಾತ್ರ ಪರಿದೇವನಮ್ ।
ಬ್ರಾಹ್ಮಣೋ ಹರಿಶರ್ಮಾತ್ರ ಸಹಸೈವೈವಮಬ್ರವೀತ್ ॥ ೧೩೪
ಸಾಧೋರೇವ ತು ಮಂಡೂಕ ತವಾಕಾಂಡೇ ಘಟೋಽಧುನಾ ।
ಅವಶ್ಯ ವಿನಾಶಾಯ ಸಂಜಾತೋಽಯಂ ಹಠಾದಿಹ ॥ ೧೩೫
ತತ್ಶ್ರುತ್ವಾಹೋ ಮಹಾಜ್ಞಾನೀ ಭೇಕೋಽಪಿ ವಿದಿತೋಽಮುನಾ ।
ಇತಿಜಲ್ಪನ್ನನಂದಾತ್ರ ಪ್ರಸ್ತುತಾರ್ಥಾನ್ವಯಾಜ್ಜನಃ ॥ ೧೩೬
ತತಸ್ತತ್ಪ್ರಾತಿಭಜ್ಞಾನಂ ಮನ್ವಾನೋ ಹರಿಶರ್ಮಣೇ ।
ತುಷ್ಟೋ ರಾಜಾ ದದೌ ಗ್ರಾಮಾನ್ ಸಹೇಮಚ್ಛತ್ರವಾಹನಾನ್ ॥ ೧೩೭
ಕ್ಷಣಾಚ್ಚ ಹರಿಶರ್ಮಾ ಸ ಜಜ್ಞೇ ಸಾಮಂತಸಂನಿಭಃ ।
ಇತ್ಥಂ ದೈವೇನ ಸಾಧ್ಯಂತೇ ಸದರ್ಥಾಃ ಶುಭಕರ್ಮಣಾಮ್ ॥ ೧೩೮

೧೩೯–೧೪೧. "ಎಲೈ ರಾಜನೇ, ನಿನ್ನ ಮಗಳಿಗೆ ಅಪಾತ್ರನನ್ನು ತಪ್ಪಿಸಿ ವಿಧಿಯು ಯೋಗ್ಯನಾದ ಗಂಡನನ್ನೇ ಕೊಟ್ಟಿದೆ'ಎಂದು ಮಂತ್ರಿಹೇಳಿದ್ದನ್ನು ಕೇಳಿ ರಾಜಾ ವಿಕ್ರಮಸೇನನು ಲಕ್ಷ್ಮಿಯಂತಿರುವ ತನ್ನ ಮಗಳು ತೇಜಸ್ವತಿಯನ್ನು ಸೋಮದತ್ತನಿಗೆ ಕೊಟ್ಟನು. ಅನಂತರ ಸೋಮದತ್ತನು ಮಾವನ ಸೈನ್ಯದ ಸಹಾಯದಿಂದ ಶತ್ರುಗಳನ್ನು ಗೆದ್ದು ತನ್ನ ರಾಜ್ಯವನ್ನು ಪಡೆದು ಹೆಂಡತಿಯೊಡನೆ ಸುಖವಾಗಿದ್ದನು.

೧೪೨–೧೪೩. ಹೀಗೆ ಎಲ್ಲವೂ ಅದೃಷ್ಟದಿಂದಲೇ ನಡೆಯುತ್ತದೆ. ವತ್ಸರಾಜನಿಲ್ಲದೆ ವಿಧಿಯ ಸಹಾಯವಿಲ್ಲದೆ ನಾನೇನು ಮಾಡಲು ಸಾಧ್ಯ ಎಂದು ಸೋಮಪ್ರಭೆಯು ಏಕಾಂತದಲ್ಲಿ ಹೇಳಿದ ಮಾತನ್ನು ಕೇಳಿ ಕಳಿಂಗಸೇನೆಯು ಬಂಧುಗಳ ಭಯ ಹಾಗೂ ಲಜ್ಜೆಯನ್ನು ಬಿಟ್ಟು ವತ್ಸರಾಜನನ್ನೇ ಧ್ಯಾನಿಸುತ್ತಾ ಇದ್ದಳು.

---

ತತ್ಸೋಮದತ್ತಂ ಸದೃಶಂ ದೈವೇನೈವಾಭಿಸಾರಿತಾ ।
ನಿವಾರ್ಯಾಸದೃಶಂ ರಾಜಂಸ್ತವ ತೇಜಸ್ವತೀ ಸುತಾ ॥ ೧೩೯
ಇತಿ ಮಂತ್ರಿಮುಖಾತ್ ಶ್ರುತ್ವಾ ತಸ್ಮೈ ರಾಜಸುತಾಯ ತಾಮ್ ।
ರಾಜಾ ವಿಕ್ರಮಸೇನೋಽಥ ದದೌ ಲಕ್ಷ್ಮೀಮಿವಾತ್ಮಜಾಮ್ ॥ ೧೪೦
ತತಃ ಶ್ವಶುರಸೈನ್ಯೇನ ಗತ್ವಾ ಜಿತ್ವಾ ರಿಪೂಂಶ್ಚ ಸಃ ।
ಸೋಮದತ್ತಃ ಸ್ವರಾಜ್ಯಸ್ಥಃ ತಸ್ಥೌ ಭಾರ್ಯಾಸಖಃ ಸುಖಮ್ ॥ ೧೪೧
ಏವಂ ವಿಧೇರ್ಭವತಿ ಸರ್ವಮಿದಂ ವಿಶೇಷಾತ್
ತ್ವಾಮೀದೃಶೀಂ ಘಟಯಿತುಂ ಕ ಇಹ ಕ್ಷಮೇತ ।
ವತ್ಸೇಶ್ವರೇಣ ಸದೃಶೇನ ವಿನೈವ ದೈವಂ
ಕುರ್ಯಾಮಹಂ ಸಖಿ ಕಿಮತ್ರ ಕಲಿಂಗಸೇನೇ ॥ ೧೪೨
ಇತ್ಥಂ ಕಥಾಂ ರಹಸಿ ರಾಜಸುತಾ ನಿಶಮ್ಯ
ಸೋಮಪ್ರಭಾವದನತೋಽತ್ರ ಕಲಿಂಗಸೇನಾ ।
ತತ್ಪ್ರಾರ್ಥಿನೀ ಶಿಥಿಲಬಂಧುಭಯತ್ರಪಾ ಸಾ
ವತ್ಸೇಶಸಂಗಮಸಮುತ್ಕಮನಾ ಬಭೂವ ॥ ೧೪೩

೧೩೪. ಮೂರು ಲೋಕಗಳಿಗೂ ದೀಪವಾದ ಸೂರ್ಯನು ಅಸ್ತಂಗತನಾಗುತ್ತಿರಲು ಬೆಳಗಿನವರೆಗೆ ತನ್ನ ಇಷ್ಟಾರ್ಥ ಸಿದ್ಧಿಯಲ್ಲೇ ಮನಸ್ಸಿಟ್ಟ ಕಳಿಂಗಸೇನೆಯಿಂದ ಹೇಗೋ ಕಷ್ಟದಿಂದ ಬೀಳ್ಕೊಂಡು ಮಯಾಸುರನ ಮಗಳಾದ ಸೋಮಪ್ರಭೆಯು ಆಕಾಶಮಾರ್ಗದಲ್ಲಿ ತನ್ನ ಮನೆಗೆ ಹೋದಳು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದಲ್ಲಿ**

**'ಮದನಮಂಚುಕಾ'ಲಂಬಕದ ನಾಲ್ಕನೆಯ ತರಂಗವು ಮುಗಿಯಿತು**

---

ಅಥಾಸ್ತಮುಪಯಾಸ್ಯತಿ ತ್ರಿಭುವನೈಕದೀಪೇ ರವೌ
ಪ್ರಭಾತಸಮಯಾಗಮಾವಧಿ ಕಥಂಚಿದಾಮಂತ್ರ್ಯ ತಾಮ್ ।
ಸಖೀಮಭಿಮತೋದ್ಯಮಸ್ಥಿತಮತಿಂ ಖಮಾರ್ಗೇಣ ಸಾ
ಮಯಾಸುರಸುತಾ ಯಯೌ ನಿಜಗೃಹಾಯ ಸೋಮಪ್ರಭಾ ॥ ೧೩೪

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತೇ**

**ಕಥಾಸರಿತ್‌ಸಾಗರೇ**

**'ಮದನಮಂಚುಕಾ'ಲಂಬಕೇ ಚತುರ್ಥಸ್ತರಂಗಃ**

---

## ಐದನೆಯ ತರಂಗ

೧–೨. ಮರುದಿನ ಬೆಳಿಗ್ಗೆ ಬಂದ ಸೋಮಪ್ರಭೆಯೊಡನೆ ಕಳಿಂಗಸೇನೆಯು ಮಾತುಕತೆಯಾಡುತ್ತಾ ಹೀಗೆ ಹೇಳಿದಳು. "ನನ್ನನ್ನು ತಂದೆಯು ಖಂಡಿತವಾಗಿಯೂ ಪ್ರಸೇನಜಿತನಿಗೆ ಕೊಟ್ಟು ಮದುವೆಮಾಡುವರು. ಅಮ್ಮನೇ ನನಗೆ ಹೀಗೆ ಹೇಳಿದಳು. ಆ ಮುದುಕನನ್ನು ನೀನು ನೋಡಿರುವಿ.

೩–೪. ವತ್ಸರಾಜನು ರೂಪವಂತನೆಂದು ನೀನು ಹೇಳಿದ್ದನ್ನು ಕೇಳಿ ನನಗೆ ಅವನ ಮೇಲೆ ಮನಸ್ಸಾಗಿದೆ. ಆದ್ದರಿಂದ ಮೊದಲು ಪ್ರಸೇನಜಿತ್ತಿನ ಹತ್ತಿರ ನನ್ನನ್ನು ಕರೆದುಕೊಂಡು ಹೋಗು ತೋರಿಸು. ಆಮೇಲೆ ವತ್ಸರಾಜನ ಹತ್ತಿರ ಕರೆದುಕೊಂಡು ಹೋಗು. ಅಪ್ಪ ಅಮ್ಮನಿಂದ ಏನಾಗಬೇಕಾಗಿದೆ?'

೫–೬ ಆಗ ಸೋಮಪ್ರಭೆಯು ಹೇಳಿದಳು. "ಹಾಗಾದರೆ ವಿಮಾನಯಂತ್ರದಿಂದ ಹೋಗೋಣ ನೀನು ನಿನ್ನ ವಸ್ತುಗಳೆಲ್ಲವನ್ನೂ ತೆಗೆದುಕೊಂಡು ಹೊರಡು. ಏಕೆಂದರೆ ವತ್ಸರಾಜನನ್ನು ನೋಡಿದ ಮೇಲೆ ಇಲ್ಲಿಗೆ ನೀನು ಹಿಂದಿರುಗಿ ಬರುವುದಿಲ್ಲ.

---

## ಪಂಚಮಸ್ತರಂಗಃ

ತತೋಽನ್ಯೇದ್ಯುರುಪೇತಾಂ ತಾಂ ಪ್ರಾತಃ ಸೋಮಪ್ರಭಾಂ ಸಖೀಮ್ ।
ಕಲಿಂಗಸೇನಾ ವಿಶ್ರಂಭಾತ್ ಕಥಾಂ ಕುರ್ವತ್ಯುವಾಚ ಸಾ ॥ ೧
ಮಾಂ ಪ್ರಸೇನಜಿತೇ ರಾಜ್ಞೇ ತಾತೋ ದಾಸ್ಯತಿ ನಿಶ್ಚಿತಮ್ ।
ಏತತ್ಶ್ರುತಂ ಮಯಾಂಬಾತೋ ದೃಷ್ಟೋ ವೃದ್ಧಃ ಸ ಚ ತ್ವಯಾ ॥ ೨
ವತ್ಸೇಶಸ್ತು ಯಥಾರೂಪೋ ತ್ವಯೈವ ಕಥಿತಸ್ತಥಾ ।
ಶ್ರುತಿಮಾರ್ಗಪ್ರವಿಷ್ಟೇನ ಹೃತಂ ತೇನ ಯಥಾ ಮನಃ ॥ ೩
ತತ್ಪ್ರಸೇನಜಿತಂ ಪೂರ್ವಂ ಪ್ರದರ್ಶ್ಯ ನಯ ತತ್ರ ಮಾಮ್ ।
ಆಸ್ತೇ ವತ್ಸೇಶ್ವರೋ ಯತ್ರ ಕಿಂ ತಾತೇನ ಕಿಮಂಬಯಾ ॥ ೪
ಏವಮುಕ್ತವತೀಂ ತಾಂ ಚ ಸೋತ್ಕಾಂ ಸೋಮಪ್ರಭಾಬ್ರವೀತ್ ।
ಗಂತವ್ಯಂ ಯದಿ ತದ್ಯಾವೋ ಯಂತ್ರೇಣ ವ್ಯೋಮಗಾಮಿನಾ ॥ ೫
ಕಿಂತು ಸರ್ವಂ ಗೃಹಾಣ ತ್ವಂ ನಿಜಂ ಪರಿಕರಂ ಯತಃ ।
ದೃಷ್ಟ್ವಾ ವತ್ಸೇಶ್ವರಂ ಭೂಯೋ ನಾಗಂತುಮಿಹ ಶಕ್ಷ್ಯಸಿ ॥ ೬

೭–೮. ಅಪ್ಪ ಅಮ್ಮನನ್ನೂ ನೋಡುವುದೂ ಇಲ್ಲ, ಸ್ಮರಿಸುವುದೂ ಇಲ್ಲ. ಗಂಡನನ್ನು ಪಡೆದ ನೀನು ದೂರದಲ್ಲಿರುವ ನನ್ನನ್ನು ಮರೆತುಬಿಡುತ್ತೀ. ಅಲ್ಲದೆ ನಾನೂ ನಿನ್ನ ಗಂಡನ ಮನೆಗೆ ಬರಲಾರೆ' ಎಂದಳು. ಅದನ್ನು ಕೇಳಿ ಕಳಿಂಗಸೇನೆಯು ಅಳುತ್ತಾ ಹೇಳಿದಳು.

೯–೧೦. 'ಗೆಳತಿ, ಹಾಗಾದರೆ ವತ್ಸರಾಜನನ್ನು ಇಲ್ಲಿಗೇ ಕರೆದುಕೊಂಡು ಬಾ. ನೀನಿಲ್ಲದೆ ಅಲ್ಲಿ ಒಂದು ಕ್ಷಣವೂ ಇರಲಾರೆ. ಹಿಂದೆ ಚಿತ್ರಲೇಖೆಯು ಉಪಾಯದಿಂದ ಅನಿರುದ್ಧನನ್ನು ಕರೆತರಲಿಲ್ಲವೆ ? ನಿನಗೆ ಆ ಕಥೆ ಗೊತ್ತಿದ್ದರೂ ಮತ್ತೆ ಹೇಳುತ್ತೇನೆ ಕೇಳು.

೧೧–೧೨. ಬಾಣಾಸುರನಿಗೆ ಉಷಾ ಎಂಬ ಮಗಳಿದ್ದಳು. ಅವಳು ಒಳ್ಳೆಯ ವರನನ್ನು ಪಡೆಯಲು ಗೌರಿಯ ಪೂಜೆಯನ್ನು ಮಾಡಿದಳು. ಗೌರಿಯು ಬಂದು ಸ್ವಪ್ನದಲ್ಲಿ ಯಾವನ ಸಮಾಗಮವನ್ನು ಹೊಂದುತ್ತೀಯೋ ಅವನೇ ನಿನ್ನ ಗಂಡನಾಗುವನು ಎಂದು ವರವನ್ನು ನೀಡಿದಳು. ಆಮೇಲೆ ಉಷೆಯು ಸ್ವಪ್ನದಲ್ಲಿ ದೇವಕುಮಾರನಂತಹವನನ್ನು ಕಂಡಳು.

೧೩. ಗಾಂಧರ್ವ ವಿಧಿಯಂತೆ ಅವನನ್ನು ವಿವಾಹವಾಗಿ ಅವನೊಡನೆ ಸಂಭೋಗವನ್ನು ಅನುಭವಿಸುತ್ತಿದ್ದಂತೆಯೇ ಬೆಳಗಿನ ಜಾವ ನಿದ್ದೆಯಿಂದ ಎಚ್ಚರಗೊಂಡಳು.

---

ನ ಚ ತ್ವಂ ದ್ರಕ್ಷ್ಯಸಿ ಪುನಃ ಪಿತರೌ ನ ಸ್ಮರಿಷ್ಯಸಿ ।
ದೂರಸ್ಥಾಂ ಪ್ರಾಪ್ತದಯಿತಾ ವಿಸ್ಮರಿಷ್ಯಸಿ ಮಾಮಪಿ ॥ ೭
ನಹ್ಯೇವಮಹಮೇಷ್ಯಾಮಿ ಭರ್ತೃವೇಶ್ಮನಿ ತೇ ಸಖಿ ।
ತಚ್ಛ್ರುತ್ವಾ ರಾಜಕನ್ಯಾ ಸಾ ರುದತೀ ತಾಮಭಾಷತ ॥ ೮
ತರ್ಹಿ ವತ್ಸೇಶ್ವರಂ ತಂ ತ್ವಮಿಹೈವಾನಯ ಮೇ ಸಖಿ ।
ನೋತ್ಸಹೇ ತತ್ರ ಹಿ ಸ್ಥಾತುಂ ಕ್ಷಣಮೇವಂ ತ್ವಯಾ ವಿನಾ ॥ ೯
ನಾನಿನ್ಯೇ ಚಾನಿರುದ್ಧಃ ಕಿಂ ಉಪಾಯಾಚ್ಚಿತ್ರಲೇಖಯಾ ।
ಜಾನತ್ಯಪಿ ತಥಾಚೈತಾಂ ಮತ್ತಸ್ತ್ವಂ ತತ್ಕಥಾಂ ಶೃಣು ॥ ೧೦
ಬಾಣಾಸುರಸ್ಯ ತನಯಾ ಬಭೂವೋಷೇತಿ ವಿಶ್ರುತಾ ।
ತಸ್ಯಾಶ್ಚಾರಾಧಿತಾ ಗೌರೀ ಪತಿಪ್ರಾಪ್ತ್ಯೈ ವರಂ ದದೌ ॥ ೧೧
ಸ್ವಪ್ನೇ ಪ್ರಾಪ್ಸ್ಯಸಿ ಯತ್ಸಂಗಂ ಸ ಮೇ ಭರ್ತಾ ಭವೇದಿತಿ ।
ತತೋ ದೇವಕುಮಾರಾಭಂ ಕಂಚಿತ್ ಸ್ವಪ್ನೇ ದದರ್ಶ ಸಾ ॥ ೧೨
ಗಾಂಧರ್ವವಿಧಿನಾ ತೇನ ಪರಿಣೀತಾ ತಥೈವ ಚ ।
ಪ್ರಾಪ್ತತತ್ಸಂಭೋಗಾ ಪ್ರಾಬುಧ್ಯತ ನಿಶಾಕ್ಷಯೇ ॥ ೧೩

೧೪–೧೫. ಅವನನ್ನು ಕಾಣದೆ, ಆದರೆ ಸಂಭೋಗದ ಲಕ್ಷಣಗಳನ್ನು ಕಂಡು ಗೌರಿಯ ವರವನ್ನೂ ಜ್ಞಾಪಿಸಿಕೊಳ್ಳುತ್ತಾ ಅವಳು ಗಾಬರಿಗೊಂಡಳು. ಆತಂಕದಿಂದ ಕೊರಗುತ್ತಿದ್ದ ಅವಳು ಕನಸಿನಲ್ಲಿ ಕಂಡ ಪ್ರಿಯಕರನ ವಿಷಯವನ್ನು ಪ್ರಿಯ ಸಖಿಯಾದ ಚಿತ್ರಲೇಖೆಗೆ ಅವಳು ಕೇಳದಿದ್ದರೂ ಅವಳಿಗೆ ಹೇಳಿದಳು.

೧೬. ಅವನ ಹೆಸರು ಮುಂತಾದ ಗುರುತನ್ನು ಸ್ವಲ್ಪವೂ ತಿಳಿಯದ ಯೋಗೇಶ್ವರಿಯಾದ ಚಿತ್ರಲೇಖೆಯು ಉಷೆಗೆ ಹೇಳಿದಳು.

೧೭–೧೯. "ದೇವಿಯ ವರದ ಪ್ರಭಾವದ ಬಗ್ಗೆ ಏನು ಹೇಳಲು ಸಾಧ್ಯ ? ಆದರೆ ಗುರುತು ಇಲ್ಲದೆ ನಿನ್ನ ಪ್ರಿಯನನ್ನು ಹುಡುಕುವುದಾದರೂ ಹೇಗೆ ? ನಾನು ಜಗತ್ತಿನ ಚಿತ್ರವನ್ನು ಬರೆದು ದೇವತೆಗಳು ರಾಕ್ಷಸರು ಮನುಷ್ಯರು ಎಲ್ಲರನ್ನೂ ಚಿತ್ರಿಸುತ್ತೇನೆ. ನೀನು ಅವನನ್ನು ನನಗೆ ತೋರಿಸು. ಆಗ ನಾನು ಅವನನ್ನು ಕರೆದುಕೊಂಡು ಬರುತ್ತೇನೆ ಎಂದು ಹೇಳಿ ವಿವಿಧ ಬಣ್ಣಗಳಿಂದ ಜಗತ್ತಿನ ಚಿತ್ರವನ್ನು ಬರೆದಳು.'

೨೦. ಆ ಚಿತ್ರವನ್ನು ನೋಡಿ ಉಷೆಯು ಹರ್ಷದಿಂದ ಕಂಪಿಸುತ್ತಿರುವ ಬೆರಳಿನಿಂದ ದ್ವಾರಕೆಯ ಯದುವರನಾದ ಅನಿರುದ್ಧನನ್ನು ತೋರಿಸಿದಳು.

---

ಅದೃಷ್ಟ್ವಾ ತಂ ಪತಿಂ ದೃಷ್ಟ್ವಾ ದೃಷ್ಟ್ವಾ ಸಂಭೋಗಲಕ್ಷಣಮ್ ।
ಸ್ಮೃತ್ವಾ ಗೌರೀವರಂ ಸಾಭೂತ್ ಸಾತಂಕಭಯವಿಸ್ಮಯಾ ॥ ೧೪
ತಾಮ್ಯಂತೀ ಚ ತತಃ ಸಾ ತಂ ಸ್ವಪ್ನೇ ದೃಷ್ಟಂ ಪ್ರಿಯಂ ವಿನಾ ।
ಪೃಚ್ಛಂತ್ಯೈ ಚಿತ್ರಲೇಖಾಯೈ ಸಖ್ಯೈ ಸರ್ವಂ ಶಶಂಸ ತತ್ ॥ ೧೫
ಸಾಪಿ ನಾಮಾದ್ಯಭಿಜ್ಞಾನಂ ನ ಕಿಂಚಿತ್ತಸ್ಯ ಜಾನತೀ ।
ಯೋಗೇಶ್ವರೀ ಚಿತ್ರಲೇಖಾ ತಾಮುಷಾಮೇವಮಬ್ರವೀತ್ ॥ ೧೬
ಸಖಿ ದೇವೀವರಸ್ಯಾಯಂ ಪ್ರಭಾವೋಽತ್ರ ಕಿಮುಚ್ಯತೇ ।
ಕಿಂ ತ್ವಭಿಜ್ಞಾನಶೂನ್ಯಸ್ತೇ ಸೋಽನ್ವೇಷ್ಟವ್ಯಃ ಪ್ರಿಯಃ ಕಥಮ್ ॥ ೧೭
ಪರಿಜಾನಾಸಿ ಚೇತ್ತಂ ತೇ ಸಸುರಾಸುರಮಾನುಷಮ್ ।
ಜಗಲ್ಲಿಖಾಮಿ ತನ್ಮಧ್ಯೇ ತಂ ಮೇ ದರ್ಶಯ ಯೇನ ಸಃ ॥ ೧೮
ಆನೀಯತೇ ಮಯೇತ್ಯುಕ್ತಾ ಸಾ ತಥೇತ್ಯುದಿತೇ ತಯಾ ।
ಚಿತ್ರಲೇಖಾ ಕ್ರಮಾದ್ವಿಶ್ವಂ ಲೇಲಿಖದ್ವರ್ಣವರ್ತಿಭಿಃ ॥ ೧೯
ತತ್ರೋಷಾ ಸೋಽಯಮಿತ್ಯಸ್ಯಾ ಹೃಷ್ಟಾಂಗುಲ್ಯಾ ಸಕಂಪಯಾ ।
ದ್ವಾರವತ್ಯಾಂ ಯದುಕುಲಾದನಿರುದ್ಧಮದರ್ಶಯತ್ ॥ ೨೦

೨೧–೨೨. ಆಗ ಚಿತ್ರಲೇಖೆಯು ಹೇಳಿದಳು. "ಸಖಿ ನೀನು ಪುಣ್ಯ ಮಾಡಿರುವೆ. ಏಕೆಂದರೆ ಯಾರನ್ನು ನೀನು ಪತಿಯನ್ನಾಗಿ ಪಡೆದಿರುವೆಯೋ ಅವನು ಭಗವಾನ್ ಶ್ರೀ ಕೃಷ್ಣನ ಮೊಮ್ಮಗನು. ಅವನು ಇಲ್ಲಿಂದ ಅರವತ್ತು ಸಾವಿರ ಯೋಜನಗಳಷ್ಟು ದೂರದಲ್ಲಿ ಇದ್ದಾನೆ' ಎಂದಳು. ಅದನ್ನು ಕೇಳಿ ಮತ್ತಷ್ಟು ಕೆರಳಿದ ಉಷೆಯು ಹೀಗೆ ಹೇಳಿದಳು.

೨೩. "ಗೆಳತಿ, ಚಂದನದಂತೆ ತಂಪಾಗಿರುವ ಅವನ ತೊಡೆಯ ಮೇಲೆ ನಾನು ಕೂರಲಾಗದಿದ್ದರೆ ತೀವ್ರವಾದ ವಿರಹಾಗ್ನಿಯಲ್ಲಿ ನಾನು ಸುಟ್ಟು ಸತ್ತುಹೋದೆ ಎಂದೇ ತಿಳಿದುಕೋ.

೨೪. ಈ ಮಾತನ್ನು ಕೇಳಿ ಚಿತ್ರಲೇಖೆಯು ಅವಳಿಗೆ ಸಮಾಧಾನ ಹೇಳಿ ಕೂಡಲೇ ಆಕಾಶಕ್ಕೆ ನೆಗೆದು ದ್ವಾರಕೆಯನ್ನು ತಲುಪಿದಳು.

೨೫–೨೬. ಸಮುದ್ರದ ಮಧ್ಯದಲ್ಲಿ ಎತ್ತರವಾದ ಅರಮನೆಗಳಿಂದ ಕಂಗೊಳಿಸುತ್ತಿದ್ದು ಸಮುದ್ರಕ್ಕೆ ಮತ್ತೆ ಎಸೆದ ಮಂದರಪರ್ವತದ ಶಿಖರದಂತೆ ಶೋಭಿಸುತ್ತಿದ್ದ ದ್ವಾರಾವತಿಯನ್ನು ನೋಡಿದಳು. ಅಲ್ಲಿ ರಾತ್ರಿಯಲ್ಲಿ ಅನಿರುದ್ಧನ ಬಳಿ ಹೋಗಿ ಅವನನ್ನು ಎಬ್ಬಿಸಿ ಉಷೆಯು ಅವನನ್ನು ಕನಸಿನಲ್ಲಿ ಕಂಡು ಪ್ರೀತಿಸುತ್ತಿರುವುದನ್ನು ತಿಳಿಸಿದಳು.

೨೭ ಅವನೂ ಕನಸಿನಲ್ಲಿ ಅವಳನ್ನು ಕಂಡು ಉತ್ಸುಕನಾಗಿದ್ದನು. ಚಿತ್ರಲೇಖೆಯು ಅವನನ್ನು ಕರೆದುಕೊಂಡು ತನ್ನ ಸಿದ್ಧಿಪ್ರಭಾವದಿಂದ ಹಿಂದಿರುಗಿ ಬಂದಳು.

---

ಚಿತ್ರಲೇಖಾ ತತೋಽವಾದೀತ್ ಸಖಿ ಧನ್ಯಾಸಿ ಯತ್ ತ್ವಯಾ ।
ಭರ್ತಾನಿರುದ್ಧಃ ಪ್ರಾಪ್ತೋಽಯಂ ಪೌತ್ರೋ ಭಗವತೋ ಹರೇಃ ॥ ೨೧
ಯೋಜನಾನಾಂ ಸಹಸ್ರೇಷು ಷಷ್ಟೌ ವಸತಿ ಸ ಸ್ಥಿತಃ ।
ತತ್ಶ್ರುತ್ವಾ ಸಾಧಿಕೌತುಕ್ಯವಶಾತ್ತಾಮಬ್ರವೀದುಷಾ ॥ ೨೨
ನಾದ್ಯ ಚೇತ್ಸಖಿ ತಸ್ಯಾಂಕಂ ಶ್ರಯೇ ಶ್ರೀಖಂಡಶೀತಲಮ್ ।
ತದತ್ಯುದ್ದಾಮಕಾಮಾಗ್ನಿನಿರ್ದಗ್ಧಾಂ ವಿದ್ಧಿ ಮಾಂ ಮೃತಾಮ್ ॥ ೨೩
ಶ್ರುತ್ವೈತಚ್ಚಿತ್ರಲೇಖಾ ಸಾ ತಾಮಾಶ್ವಾಸ್ಯ ಪ್ರಿಯಾಂ ಸಖೀಮ್ ।
ತದೈವೋತ್ಪತ್ಯ ನಭಸಾ ಯಯೌ ದ್ವಾರವತೀಂ ಪುರೀಮ್ ॥ ೨೪
ದದರ್ಶ ಚ ಪೃಥೂತ್ತುಂಗೈಃ ಮಂದಿರೈರಬ್ಧಿಮಧ್ಯಗಾಮ್ ।
ಕುರ್ವತೀ ತಂ ಪುನಃ ಕ್ಷಿಪ್ತಮಂಥಾದ್ರಿಶಿಖರಭ್ರಮಮ್ ॥ ೨೫
ತಸ್ಯಾಂ ಸುಪ್ತಂ ನಿಶಿ ಪ್ರಾಪ್ಯ ಸಾನಿರುದ್ಧಂ ವಿಬೋಧ್ಯ ಚ ।
ಉಷಾನುರಾಗಂ ತಂ ತಸ್ಮೈ ಶಶಂಸ ಸ್ವಪ್ನದರ್ಶನಾತ್ ॥ ೨೬
ಆದಾಯ ಚಾತ್ತತದ್ರೂಪಸ್ವಪ್ನವೃತ್ತಾಂತಮೇವ ತಮ್ ।
ಸೋತ್ಕಂ ಸಿದ್ಧಿಪ್ರಭಾವೇಣ ಕ್ಷಣೇನೈವಾಯಯೌ ತತಃ ॥ ೨೭

೨೮. ಉಷೆಯು ನೋಡುತ್ತಿದ್ದಂತೆಯೇ ಆಕಾಶಮಾರ್ಗದಿಂದ ಅವನನ್ನು ರಹಸ್ಯವಾಗಿ ಅವಳ ಅಂತಃಪುರಕ್ಕೆ ಕರೆತಂದಳು.

೨೯. ಸಾಕ್ಷಾತ್ತಾಗಿ ಅವನನ್ನು ನೋಡುತ್ತಿದ್ದಂತೆಯೇ ಉಷೆಯು ಸಮುದ್ರವು ಚಂದ್ರನನ್ನು ನೋಡಿದಾಗ ಕ್ಷೋಭೆಗೊಳ್ಳುವಂತೆ ತನ್ನನ್ನು ತಾನು ತಡೆದುಕೊಳ್ಳಲಾರದಾದಳು.

೩೦. ಅನಂತರ ಸಖಿಯು ಕರೆತಂದ ತನ್ನ ಜೀವಿತಸರ್ವಸ್ವನಾದ ಆ ಪ್ರಿಯಕರನೊಡನೆ ಅವಳು ಸುಖವಾಗಿ ಇದ್ದಳು.

೩೧. ಈ ವಿಷಯವನ್ನು ತಿಳಿದು ಕೋಪಗೊಂಡ ಬಾಣಾಸುರನನ್ನು ಅನಿರುದ್ಧನು ತನ್ನ ಹಾಗೂ ತಾತನಾದ ಶ್ರೀ ಕೃಷ್ಣನ ಸೈನ್ಯದ ಬಲದಿಂದ ಸೋಲಿಸಿದನು.

೩೨–೩೪. ಆಮೇಲೆ ಉಷಾ ಅನಿರುದ್ಧರು ದ್ವಾರಕೆಗೆ ಹೋಗಿ ಪಾರ್ವತೀಪರಮೇಶ್ವರರಂತೆ ಸುಖವಾಗಿದ್ದರು. ಹೀಗೆ ಚಿತ್ರಲೇಖೆಯು ಉಷೆಗೆ ಪ್ರಿಯಕರನನ್ನು ದೊರಕಿಸಿದಳು. ನೀನು ಅವಳಿಗಿಂತಲೂ ಹೆಚ್ಚು ಪ್ರಭಾವಶಾಲಿ ಎಂದು ನನ್ನ ಅಭಿಪ್ರಾಯ. ಆದ್ದರಿಂದ ನೀನು ವತ್ಸರಾಜನನ್ನು ನನ್ನ ಹತ್ತಿರಕ್ಕೆ ಕರೆದುಕೊಂಡು ಬಾ ತಡಮಾಡಬೇಡ' ಎಂದು ಕಳಿಂಗ ಸೇನೆಯು ಹೇಳಿದ್ದನ್ನು ಕೇಳಿ ಸೋಮಪ್ರಭೆಯು ಉತ್ತರಿಸಿದಳು.

---

ಏತ್ಯ ಚಾವೇಕ್ಷಮಾಣಾಯಾಸ್ತಸ್ಯಾಃ ಸಖ್ಯಾಃ ಖವರ್ತ್ಮನಾ ।
ಪ್ರಾವೇಶಯದುಷಾಯಾಸ್ತಂ ಗುಪ್ತಮಂತಃಪುರಂ ಪ್ರಿಯಮ್ ॥ ೨೮

ಸಾ ದೃಷ್ಟ್ವೈವಾ ನಿರುದ್ಧಂ ತಮುಷಾ ಸಾಕ್ಷಾದುಪಾಗತಮ್ ।
ಅಮೃಂತಾಶುಮಿವಾಂಬೋಧಿವೇಲಾ ನಾಂಗೇಷ್ವವರ್ತತ ॥ ೨೯

ತತಸ್ತೇನ ಸಮಂ ತಸ್ಥೌ ಸಖೀದತ್ತೇನ ತತ್ರ ಸಾ ।
ಜೀವಿತೇನೇವ ಮೂರ್ತೇನ ವಲ್ಲಭೇನ ಯಥಾಸುಖಮ್ ॥ ೩೦

ತಜ್ಜ್ಞಾತ್ವಾತ್ತಿತರಂ ಚಾಸ್ಯಾಃ ಕ್ರುದ್ಧಂ ಬಾಣಂ ಜಿಗಾಯ ಸಃ ।
ಅನಿರುದ್ಧಃ ಸ್ವವೀರ್ಯೇಣ ಪಿತಾಮಹಬಲೇನ ಚ ॥ ೩೧

ತತೋ ದ್ವಾರವತೀಂ ಗತ್ವಾ ತಾವಭಿನ್ನತನೂ ಉಭೌ ।
ಉಷಾನಿರುದ್ಧೌ ಜಜ್ಞಾತೇ ಗಿರಿಜಾಶಂಕರಾವಿವ ॥ ೩೨

ಇತ್ಯುಷಾಯಾಃ ಪ್ರಿಯೋಽಹ್ನೈವ ಮೇಲಿತಶ್ಚಿತ್ರಲೇಖಯಾ ।
ತ್ವಂ ಸುಪ್ರಭಾವಾಪ್ಯಧಿಕಾ ತತೋಽಪಿ ಸಖಿ ಮೇ ಮತಾ ॥ ೩೩

ತನ್ಮಮಾನಯ ವತ್ಸೇಶಮಿಹ ಮಾ ಸ್ಮ ಚಿರಂ ಕೃಥಾಃ ।
ಏವಂ ಕಲಿಂಗಸೇನಾತಃ ಶ್ರುತ್ವಾ ಸೋಮಪ್ರಭಾಬ್ರವೀತ್ ॥ ೩೪

೩೫. "ಸುರಸ್ತ್ರೀಯಾದ ಆ ಚಿತ್ರಲೇಖೆಯು ಬೇರೆಯವರನ್ನು ಮೇಲಕ್ಕೆ ಎತ್ತಿ (ಆಕಾಶಮಾರ್ಗದಲ್ಲಿ) ಕರೆದುಕೊಂಡು ಬಂದಳು. ಆದರೆ ಬೇರೆಯವರನ್ನು ಮುಟ್ಟದೆ ನನ್ನಂಥವರು ಹಾಗೆ ಮಾಡಲಾರರು.

೩೬. ಆದ್ದರಿಂದ ನಿನ್ನನ್ನು ಬೇಡುತ್ತಿರುವ ಪ್ರಸೇನಜಿತನನ್ನು ನಿನಗೆ ತೋರಿಸಿ ಆಮೇಲೆ ವತ್ಸರಾಜನು ಇರುವ ಕಡೆಗೆ ನಿನ್ನನ್ನು ಕರೆದೊಯ್ಯುತ್ತೇನೆ.'

೩೭–೩೮. ಸೋಮಪ್ರಭೆಯು ಹೀಗೆ ಹೇಳಿದುದಕ್ಕೆ ಒಪ್ಪಿಗೆಯನ್ನು ಸೂಚಿಸಿದ ಕಳಿಂಗಸೇನೆಯು ಮಾಯಾ ವಿಮಾನಯಂತ್ರವನ್ನು ಹತ್ತಿ ಕೋಷ ಮತ್ತು ಪರಿಕರಗಳೊಡನೆ ತಂದೆತಾಯಿಗಳಿಗೂ ತಿಳಿಸದೆ ಹೊರಟುಹೋದಳು.

೩೯. ಸಾರಥಿಯು ಓಡಿಸುವ ಕುದುರೆಯು ಗುರಿಯನ್ನು ಮಾತ್ರ ನೋಡುವಂತೆ ಮನ್ಮಥನಿಂದ (ಅನುರಾಗದಿಂದ) ಒಯ್ಯಲ್ಪಡುತ್ತಿರುವ ಸ್ತ್ರೀಯರು ಮುಂದೆ ಸಿಗುವ ಉಬ್ಬು ತಗ್ಗುಗಳನ್ನು (ಶುಭಾಶುಭಗಳನ್ನು) ಗಮನಿಸುವುದೇ ಇಲ್ಲ.

೪೦. ಕಳಿಂಗಸೇನೆಯು ಮೊದಲು ಶ್ರಾವಸ್ತಿಗೆ ಹೋಗಿ ಅಲ್ಲಿ ಬೇಟೆಯಿಂದ ಹಿಂತಿರುಗಿ ಬಂದ ಮುಪ್ಪಿನಿಂದ ಬಿಳಿಚಿಕೊಂಡಿರುವ ಪ್ರಸೇನಜಿತನನ್ನು ದೂರದಿಂದಲೇ ನೋಡಿದಳು.

೪೧. ಅವನಿಗೆ ಬೀಸಲಾಗುತ್ತಿದ್ದ ಚಾಮರವು ಈ ವೃದ್ಧನಿಂದ ದೂರ ಹೋಗು ಎಂದು ದೂರದಿಂದಲೇ ಸೂಚಿಸುತ್ತಿದೆಯೋ ಎಂಬಂತಿತ್ತು.

---

ಚಿತ್ರಲೇಖಾ ಸುರಸ್ತ್ರೀ ಸಾ ಸಮುತ್ಕ್ಷಿಪ್ಯಾನಯತ್ ಪರಮ್ ।
ಮಾದೃಶೀ ಕಿಂ ವಿದಧ್ಯಾತ್ತು ಪರಸ್ಪರ್ಶಾದ್ಯಕುರ್ವತೀ ॥ ೩೫
ತತ್ತ್ವಾಂ ನಯಾಮಿ ತತ್ರೈವ ಯತ್ರ ವತ್ಸೇಶ್ವರಃ ಸಖಿ ।
ಪ್ರಾಕ್ ಪ್ರಸೇನಜಿತಂ ತಂ ತೇ ದರ್ಶಯಿತ್ವಾ ತ್ವದರ್ಥಿನಮ್ ॥ ೩೬
ಇತಿ ಸೋಮಪ್ರಭೋಕ್ತಾ ಸಾ ತಥೇತ್ಯುಕ್ತ್ವಾ ತಯಾ ಸಹ ।
ಕಲಿಂಗಸೇನಾ ತತ್ ಕ್ಲೃಪ್ತಂ ಮಾಯಾಯಂತ್ರವಿಮಾನಕಮ್ ॥ ೩೭
ತದೈವಾರುಹ್ಯ ನಭಸಾ ಸಕೋಷಾ ಸಪರಿಚ್ಛದಾ ।
ಕೃತಪ್ರಾಸ್ಥಾನಿಕಾ ಪ್ರಾಯಾತ್ ಪಿತ್ರೋರವಿದಿತಾ ತತಃ ॥ ೩೮
ನಹಿ ಪಶ್ಯತಿ ತುಂಗಂ ವಾ ಶ್ವಭ್ರಂ ವಾ ಸ್ತ್ರೀಜನೋಽಗ್ರತಃ ।
ಸ್ಮರೇಣ ನೀತಃ ಪರಮಾಂ ಧಾರಾಂ ವಾಜೀವ ಸಾದಿನಾ ॥ ೩೯
ಶ್ರಾವಸ್ತೀಂ ಪ್ರಾಪ್ಯ ಪೂರ್ವಂ ಚ ತಂ ಪ್ರಸೇನಜಿತಂ ನೃಪಮ್ ।
ಮೃಗಯಾನಿರ್ಗತಂ ದೂರಾತ್ ಜರಾಪಾಂಡುಂ ದದರ್ಶ ಸಾ ॥ ೪೦
ವೃದ್ಧಾತ್ ವ್ರಜಾಸ್ಮಾದಿತಿ ತಾಂ ದೂರಾದಿವ ನಿಷೇಧತಾ ।
ಉದ್ಧೂಯಮಾನೇನ ಮುಹುಶ್ಚಾಮರೇಣೋಪಲಕ್ಷಿತಮ್ ॥ ೪೧

೪೨. "ನಿನ್ನ ತಂದೆಯು ನಿನ್ನನ್ನು ಕೊಡಬೇಕೆಂದಿರುವ ಈ ಪ್ರಸೇನಜಿತ್ ರಾಜನನ್ನು ನೋಡು’ ಎಂದು ಸೋಮಪ್ರಭೆಯು ನಗುತ್ತಾ ತೋರಿಸಿದಳು.

೪೩–೪೪. "ಮುದುಕನಾದ ಇವನನ್ನು ಯಾರು ಮದುವೆಯಾಗುತ್ತಾರೆ ? ಬೇಗನೆ ವತ್ಸರಾಜನ ಹತ್ತಿರಕ್ಕೆ ನನ್ನನ್ನು ಕರೆದುಕೊಂಡು ಹೋಗು’ ಎಂದು ಸೋಮಪ್ರಭೆಗೆ ಹೇಳಿದ ಕಳಿಂಗಸೇನೆಯು ಅವಳೊಡನೆ ಆಕಾಶಮಾರ್ಗದಲ್ಲಿ ಕೌಶಾಂಬಿಗೆ ಹೋದಳು.

೪೫ ಅಲ್ಲಿ ಉದ್ಯಾನದಲ್ಲಿದ್ದ ವತ್ಸರಾಜನನ್ನು ಸೋಮಪ್ರಭೆಯು ತೋರಿಸಿದಳು. ಚಕೋರಪಕ್ಷಿಯು ಚಂದ್ರಕಿರಣಗಳ ಚಂದ್ರನನ್ನು ನೋಡುವಂತೆ ಕಳಿಂಗಸೇನೆಯು ತವಕದಿಂದ ಅವನನ್ನು ದೂರದಿಂದಲೇ ನೋಡಿದಳು.

೪೬–೪೭ ‘ಇವನು ನನ್ನನ್ನು ಇಲ್ಲಿ ಪ್ರವೇಶಿಸಿದ್ದಾನೆ’ ಎಂದು ಹೇಳುವಂತೆ ಹೃದಯದ ಮೇಲೆ ಕೈಯಿಟ್ಟುಕೊಂಡ ಕಳಿಂಗಸೇನೆಯು ಕಣ್ಣುಗಳನ್ನು ಅರಳಿಸಿಕೊಂಡು ಸೋಮಪ್ರಭೆಗೆ ಹೇಳಿದಳು. ‘ಸಖಿ! ಈ ದಿನವೇ ನನ್ನನ್ನು ವತ್ಸರಾಜನೊಡನೆ ಕೂಡಿಸು. ಇವನನ್ನು ನೋಡಿ ಒಂದು ಕ್ಷಣವೂ ನನಗೆ ಸುಮ್ಮನಿರಲು ಸಾಧ್ಯವಿಲ್ಲ’ ಎಂದಳು.

---

ಸೋಽಯಂ ಪ್ರಸೇನಜಿದ್ರಾಜಾ ಪಿತ್ರಾಸ್ಮೈ ತ್ವಂ ಪ್ರದಿತ್ಸಿತಾ ।
ಪಶ್ಯೇತಿ ಸೋಮಪ್ರಭಯಾ ದರ್ಶಿತಂ ಸೋಪಹಾಸಯಾ ॥ ೪೨
ಜರಯಾಯಂ ವೃತೋ ರಾಜಾ ಕಾ ವೃಣೀತೇಽಪರಾ ತ್ವಮುಮ್ ।
ತದಿತಃ ಸಖಿ ಶೀಘ್ರಂ ಮಾಂ ನಯ ವತ್ಸೇಶ್ವರಂ ಪ್ರತಿ ॥ ೪೩
ಇತಿ ಸೋಮಪ್ರಭಾಂ ಚೋಕ್ತ್ವಾ ತತ್ಕ್ಷಣಂ ಸಾ ತಯಾ ಸಹ ।
ಕಲಿಂಗಸೇನಾ ವ್ಯೋಮ್ನೈವ ಕೌಶಾಂಬೀನಗರೀಂ ಯಯೌ ॥ ೪೪
ತತ್ರೋದ್ಯಾನಗತಂ ಸಾ ತಂ ವತ್ಸೇಶಂ ಸಖ್ಯುದೀರಿತಮ್ ।
ದದರ್ಶ ದೂರಾತ್ ಸೋತ್ಕಂಠಾ ಚಕೋರೀವಾಮೃತತ್ವಿಷಮ್ ॥ ೪೫
ಸಾ ತದುತ್ಫುಲ್ಲಯಾ ದೃಷ್ಟ್ವಾ ಹೃನ್‌ನ್ಯಸ್ತೇನ ಚ ಪಾಣಿನಾ ।
ಪ್ರವಿಷ್ಟೋಽಯಂ ಪಥಾನೇನ ಮಾಮತ್ರೇತ್ಯಬ್ರವೀದಿವ ॥ ೪೬
ಸಖಿ ಸಂಗಮಯಾದ್ಯೈವ ವತ್ಸರಾಜೇನ ಮಾಮಿಹ ।
ಏನಂ ವಿಲೋಕ್ಯ ಹಿ ಸ್ಥಾತುಂ ನ ಶಕ್ತಾ ಕ್ಷಣಮಪ್ಯಹಮ್ ॥ ೪೭

೪೮–೫೦. ಹೀಗೆ ಹೇಳಿದ ಅವಳನ್ನು ಕುರಿತು ಸೋಮಪ್ರಭೆಯು ಹೇಳಿದಳು. "ಇಂದು ನಾನು ಯಾವುದೋ ಅಪಶಕುನವನ್ನು ಕಂಡೆ. ಆದ್ದರಿಂದ ನೀನು ಇಲ್ಲೇ ಉದ್ಯಾನದಲ್ಲಿ ಯಾರ ಕಣ್ಣಿಗೂ ಬೀಳದೇ ಇರು. ಬೆಳಿಗ್ಗೆ ಬಂದು ನಿಮ್ಮಿಬ್ಬರ ಸಮಾಗಮವನ್ನು ಏರ್ಪಡಿಸುತ್ತೇನೆ. ಈಗ ನಾನು ಗಂಡನ ಮನೆಗೆ ಹೋಗುತ್ತೇನೆ.'

೫೧. ಎಂದು ಹೇಳಿ ಸೋಮಪ್ರಭೆಯು ಹೊರಟುಹೋದಳು. ವತ್ಸರಾಜನೂ ಉದ್ಯಾನದಿಂದ ತನ್ನ ಮನೆಗೆ ಹೋದನು.

೫೨–೫೩. ಆಮೇಲೆ ಕಳಿಂಗಸೇನೆಯು ತನ್ನ ಮಹತ್ತರನ ಮೂಲಕ (ವೃದ್ಧಸಹಾಯಕ) ವತ್ಸರಾಜನಿಗೆ ವಾಸ್ತವ ವಿಷಯದ ಸಂದೇಶವನ್ನು ಕಳಿಸಿದಳು. ಅಪಶಕುನವನ್ನು ಅರಿತಿದ್ದ ಸೋಮಪ್ರಭೆಯು ಬೇಡವೆಂದು ಹೇಳಿದ್ದರೂ ಲೆಕ್ಕಿಸಲಿಲ್ಲ. ಯುವತಿಯರ ನೂತನ ಪ್ರೇಮವು ಸ್ವತಂತ್ರ ನಡೆಯುಳ್ಳದ್ದಾಗಿರುತ್ತದೆ.

೫೪. ಆ ಮಹತ್ತರನು ಒಳಗೆ ಹೋಗಿ ಬಾಗಿಲು ಕಾಯುವವನ ಮೂಲಕ ವತ್ಸರಾಜನಿಗೆ ಹೀಗೆ ವಿಜ್ಞಾಪನೆ ಮಾಡಿಕೊಂಡನು.

---

ಇತಿ ಚೋಕ್ತವತೀಂ ತಾಂ ಸಾ ಸಖೀ ಸೋಮಪ್ರಭಾಬ್ರವೀತ್ ।
ಅದ್ಯಾಶುಭಂ ಮಯಾ ಕಿಂಚಿನ್ನಿಮಿತ್ತಮುಪಲಕ್ಷಿತಮ್ ॥ ೪೮
ತದಿದಂ ದಿವಸಂ ತೂಷ್ಣೀಂ ಉದ್ಯಾನೋಽಸ್ಮಿನ್ನಲಕ್ಷಿತಾ ।
ಅಧಿತಿಷ್ಠಸ್ವ ಮಾಕಾರ್ಷೀಃ ಸಖಿ ದೂರಂ ಗತಾಗತಮ್ ॥ ೪೯
ಪ್ರಾತರಾಗತ್ಯ ಯುಕ್ತಿಂ ವಾಂ ಘಟಯಿಷ್ಯಾಮಿ ಸಂಗಮೇ ।
ಅಧುನಾ ಗಂತುಮಿಚ್ಛಾಮಿ ಭರ್ತುಶ್ಚಿತ್ತಗೃಹೇ ಗೃಹಮ್ ॥ ೫೦
ಇತ್ಯುಕ್ತ್ವಾ ತಾಮವಸ್ಥಾಪ್ಯ ಯಯೌ ಸೋಮಪ್ರಭಾ ತತಃ ।
ವತ್ಸರಾಜೋಽಪಿ ಚೋದ್ಯಾನಾತ್ ಸ್ವಮಂದಿರಮಥಾವಿಶತ್ ॥ ೫೧
ತತಃ ಕಲಿಂಗಸೇನಾ ಸಾ ತತ್ರಸ್ಥಾ ಸ್ವಮಹತ್ತರಮ್ ।
ಯಥಾತತ್ತ್ವಂ ಸ್ವಸಂದೇಶಂ ದತ್ವಾ ವತ್ಸೇಶ್ವರಂ ಪ್ರತಿ ॥ ೫೨
ಪ್ರಾಹಿಣೋತ್ ಪ್ರಾಕ್ ನಿಷಿದ್ಧಾಪಿ ಸ್ವಸಖ್ಯಾ ಶಕುನಜ್ಞಯಾ ।
ಸ್ವತಂತ್ರಾಭಿನವಾರೂಢೋ ಯುವತೀನಾಂ ಮನೋಭವಃ ॥ ೫೩
ಸ ಚ ಗತ್ವಾ ಪ್ರತೀಹಾರಮುಖೇನಾವೇದ್ಯ ತತ್ಕ್ಷಣಮ್ ।
ಮಹತ್ತರಃ ಪ್ರವಿಶ್ಯೈವಂ ವತ್ಸರಾಜಂ ವ್ಯಜಿಜ್ಞಪತ್ ॥ ೫೪

೫೫–೫೭. "ಎಲೈ ರಾಜನೆ, ತಕ್ಷ ಶಿಲೆಯ ರಾಜನಾದ ಕಳಿಂಗದತ್ತನ ಮಗಳು ಕಳಿಂಗಸೇನೆಯು ನೀನು ರೂಪವಂತನೆಂದು ತಿಳಿದು ಬಂಧುಗಳನ್ನೆಲ್ಲ ಬಿಟ್ಟು ಸ್ವಯಂವರಕ್ಕಾಗಿ ಇಲ್ಲಿಗೆ ಬಂದಿದ್ದಾಳೆ. ಮಯಾಸುರನ ಮಗಳೂ ನಲಕೂಬರನ ಪತ್ನಿಯೂ ಆದ ಸೋಮಪ್ರಭೆಯು ಆಕಾಶಮಾರ್ಗದಲ್ಲಿ ಯಂತ್ರ ವಿಮಾನದಲ್ಲಿ ಅವಳನ್ನು ಇಲ್ಲಿಗೆ ಕರೆತಂದಿದ್ದಾಳೆ.

೫೮. ಈ ವಿಷಯವನ್ನು ನಿನ್ನಲ್ಲಿ ವಿನಂತಿಸಿಕೊಳ್ಳಲು ಅವಳು ನನ್ನನ್ನು ಕಳಿಸಿದ್ದಾಳೆ. ಅವಳನ್ನು ಸ್ವೀಕರಿಸು. ಚಂದ್ರ ಮತ್ತು ಬೆಳದಿಂಗಳಿನಂತೆ ನಿಮ್ಮಿಬ್ಬರ ಸಮಾಗಮವು ಆಗಲಿ'.

೫೯. ಮಹತ್ತರನ ಮಾತನ್ನು ಕೇಳಿ ಹಾಗೆಯೇ ಆಗಲಿ ಎಂದು ಅಭಿನಂದಿಸಿದ ರಾಜನು ಹರ್ಷದಿಂದ ಸುವರ್ಣ, ವಸ್ತ್ರ ಮೊದಲಾದವುಗಳನ್ನು ಕೊಟ್ಟು ಅವನನ್ನು ಗೌರವಿಸಿದನು.

೬೦–೬೧. ಅನಂತರ ಪ್ರಧಾನಮಂತ್ರಿಯಾದ ಯೌಗಂಧರಾಯಣನನ್ನು ಕರೆದು "ಭೂಮಿಯಲ್ಲೇ ಸೌಂದರ್ಯದಿಂದ ಪ್ರಸಿದ್ಧಳಾದ ಕಳಿಂಗದತ್ತನ ಮಗಳು ಕಳಿಂಗಸೇನೆಯು ನನ್ನನ್ನು ಮದುವೆಯಾಗಲು ತಾನೇ ಬಂದಿದ್ದಾಳೆ. ಎಷ್ಟು ಬೇಗ ಅವಳನ್ನು ಮದುವೆಯಾಗಬಹುದು ಎಂಬುದನ್ನು ಹೇಳು' ಎಂದನು.

---

ರಾಜನ್ ಕಲಿಂಗದತ್ತಸ್ಯ ರಾಜ್ಞಸ್ತಕ್ಷಶಿಲಾಪತೇಃ ।
ಸುತಾ ಕಲಿಂಗಸೇನಾಖ್ಯಾ ಶ್ರುತ್ವಾ ತ್ವಾಂ ರೂಪವತ್ತರಮ್ ॥ ೫೫
ಸ್ವಯಂವರಾರ್ಥಮಿಹ ತೇ ಸಂಪ್ರಾಪ್ತಾ ತ್ಯಕ್ತಬಾಂಧವಾ ।
ಮಾಯಾಯಂತ್ರವಿಮಾನೇನ ಸಾನುಗಾ ವ್ಯೋಮಗಾಮಿನಾ ॥ ೫೬
ಆನೀತಾ ಗುಹ್ಯಚಾರಿಣ್ಯಾ ಸಖ್ಯಾ ಸೋಮಪ್ರಭಾಖ್ಯಯಾ ।
ಮಯಾಸುರಸ್ಯಾತ್ಮಜಯಾ ನಲಕೂಬರಭಾರ್ಯಯಾ ॥ ೫೭
ತಯಾ ವಿಜ್ಞಾಪನಾಯಾಹಂ ಪ್ರೇಷಿತಃ ಸ್ವೀಕುರುಷ್ವ ತಾಮ್ ।
ಯುವಯೋರಸ್ತು ಯೋಗೋಽಯಂ ಕೌಮುದೀಚಂದ್ರಯೋರಿವ ॥ ೫೮
ಏವಂ ಮಹತ್ತರಾತ್ ಶ್ರುತ್ವಾ ತಂ ತಥೇತ್ಯಭಿನಂದ್ಯ ಚ ।
ಪ್ರಹೃಷ್ಟೋ ಹೇಮವಸ್ತ್ರಾದ್ಯೈಃ ವತ್ಸರಾಜೋಽಭ್ಯಪೂಜಯತ್ ॥ ೫೯
ಆಹೂಯ ಚಾಬ್ರವೀನ್ಮಂತ್ರಿಮುಖ್ಯಂ ಯೌಗಂಧರಾಯಣಮ್ ।
ರಾಜ್ಞಃ ಕಲಿಂಗದತ್ತಸ್ಯ ಖ್ಯಾತರೂಪಾ ಕ್ಷಿತೌ ಸುತಾ ॥ ೬೦
ಸ್ವಯಂ ಕಲಿಂಗಸೇನಾಖ್ಯಾ ವರಣಾಯ ಮಮಾಗತಾ ।
ತದ್‌ಬ್ರೂಹಿ ಶೀಘ್ರಮುತ್ಯಾಜ್ಯಾಂ ಕದಾ ಪರಿಣಯಾಮಿ ತಾಮ್ ॥ ೬೧

೬೨. ವತ್ಸರಾಜನು ಹೀಗೆ ಹೇಳಿದ್ದನ್ನು ಕೇಳಿ ಅವನ ದೀರ್ಘಕಾಲದ ಹಿತಾಕಾಂಕ್ಷಿಯಾದ ಯೌಗಂಧರಾಯಣನು ಒಂದು ಕ್ಷಣ ಚಿಂತಿಸಿದನು.

೬೩–೬೮. "ಕಳಿಂಗಸೇನೆಯು ಮೂರು ಲೋಕಗಳಲ್ಲೂ ಪ್ರಸಿದ್ಧಳಾದ ಸುಂದರಿ. ಅವಳಂತಹವಳು ಬೇರೆ ಇಲ್ಲ. ದೇವತೆಗಳೂ ಅವಳಿಗಾಗಿ ಆಸೆಪಟ್ಟಿದ್ದಾರೆ. ಅವಳನ್ನು ಪಡೆದು ವತ್ಸರಾಜನು ಬೇರೆ ಎಲ್ಲವನ್ನೂ ಬಿಟ್ಟುಬಿಡುತ್ತಾನೆ. ಆಮೇಲೆ ರಾಣಿ ವಾಸವದತ್ತೆಯು ಪ್ರಾಣ ಬಿಡುತ್ತಾಳೆ. ರಾಜಕುಮಾರನಾದ ನರವಾಹನದತ್ತನೂ ನಾಶವಾಗುವನು. ಪದ್ಮಾವತೀದೇವಿಯೂ ಬದುಕುವುದು ಕಷ್ಟವಾದೀತು. ಆಮೇಲೆ ಚಂಡಮಹಾಸೇನ ಪ್ರದ್ಯೋತರೂ ಪ್ರಾಣವನ್ನು ಬಿಡುತ್ತಾರೆ. ಇಬ್ಬರು ದೇವಿಯರ ತಂದೆತಾಯಂದಿರೂ ಅಷ್ಟೇ. ಅಥವಾ ಅವರಿಗೆ ಹುಚ್ಚು ಹಿಡಿದೀತು. ಹೀಗೆ ಸರ್ವನಾಶವು ಆದೀತು. ಹೀಗೆಂದು ರಾಜನ ಅಪೇಕ್ಷೆಯನ್ನೂ ಉದಾಸೀನ ಮಾಡುವಂತಿಲ್ಲ. ಈ ಹುಚ್ಚು ತಡೆದಷ್ಟೂ ಹೆಚ್ಚಾಗುತ್ತದೆ. ಆದ್ದರಿಂದ ಇದರಲ್ಲಿ ಅಪೇಕ್ಷೆಯನ್ನು ಈಡೇರಿಸಲು ಸ್ವಲ್ಪ ಸ್ವಲ್ಪ ಸಮಯ ಬೇಕೆಂದು ಕಾಲಹರಣ ಮಾಡುತ್ತೇನೆ' ಎಂದು ಯೋಚಿಸಿ ಯೌಗಂಧರಾಯಣನು ವತ್ಸರಾಜನಿಗೆ ಹೇಳಿದನು.

---

ಇತ್ಯುಕ್ತೋ ವತ್ಸರಾಜೇನ ಮಂತ್ರೀ ಯೌಗಂಧರಾಯಣಃ ।
ಅಸ್ಯಾಯತಿ ಹಿತಾಪೇಕ್ಷೀ ಕ್ಷಣಮೇವಮಚಿಂತಯತ್ ॥ ೬೨
ಕಲಿಂಗಸೇನಾ ಸಾ ತಾವತ್ ಖ್ಯಾತರೂಪಾ ಜಗತ್ತ್ರಯೇ ।
ನಾಸ್ತ್ಯನ್ಯಾ ತಾದೃಶೀ ತಸ್ಯೈ ಸ್ಪೃಹಯಂತಿ ಸುರಾ ಅಪಿ ॥ ೬೩
ತಾಂ ಲಬ್ಧ್ವಾ ವತ್ಸರಾಜೋಽಯಂ ಸರ್ವಮನ್ಯತ್ ಪರಿತ್ಯಜೇತ್ ।
ದೇವೀ ವಾಸವದತ್ತಾ ಚ ತತಃ ಪ್ರಾಣೈರ್ವಿಯುಜ್ಯತೇ ॥ ೬೪
ನರವಾಹನದತ್ತೋಽಪಿ ನಶ್ಯೇದ್ರಾಜಸುತಸ್ತತಃ ।
ಪದ್ಮಾವತ್ಯಪಿ ತತ್ಸ್ನೇಹಾದ್ದೇವೀ ಜೀವತಿ ದುಷ್ಕರಮ್ ॥ ೬೫
ತತಶ್ಚಂಡಮಹಾಸೇನಪ್ರದ್ಯೋತೌ ಪಿತರೌ ದ್ವಯೋಃ ।
ದೇವ್ಯೋರ್ವಿಮುಂಚತಃ ಪ್ರಾಣಾನ್ ವಿಕೃತಿಂ ವಾಪಿ ಗಚ್ಛತಃ ॥ ೬೬
ಏವಂ ಚ ಸರ್ವನಾಶಃ ಸ್ಯಾತ್ ನ ಚ ಯುಕ್ತಂ ನಿಷೇಧನಮ್ ।
ರಾಜ್ಞೋಽಸ್ಯ ವ್ಯಸನಂ ಯಸ್ಮಾತ್ ವಾರಿತಸ್ಯಾಧಿಕೀಭವೇತ್ ॥ ೬೭
ತಸ್ಮಾದನುಪ್ರವೇಶಸ್ಯ ಸಿದ್ಧ್ಯೈ ಕಾಲಂ ಹರಾಮ್ಯಹಮ್ ।
ಇತ್ಯಾಲೋಚ್ಯ ಸ ವತ್ಸೇಶಂ ಪ್ರಾಹ ಯೌಗಂಧರಾಯಣಃ ॥ ೬೮

೧೯–೨೧. 'ರಾಜನೇ, ಕಳಿಂಗಸೇನೆಯು ತಾನಾಗಿಯೇ ನಿಮ್ಮ ಮನೆಗೆ ಬಂದಿರುವುದರಿಂದ ನೀವು ಧನ್ಯರಾಗಿದ್ದೀರಿ. ಅವಳ ತಂದೆಯೂ ನಿಮಗೆ ಅಧೀನರಾಗುತ್ತಾರೆ. ಇವಳು ದೊಡ್ಡರಾಜನ ಮಗಳಾದ್ದರಿಂದ ಜ್ಯೋತಿಷಿಗಳನ್ನು ಕೇಳಿ ವಿವಾಹಕ್ಕೆ ಮುಹೂರ್ತವನ್ನು ಗೊತ್ತುಪಡಿಸಬೇಕು. ಈಗ ಅವಳಿಗೆ ವಾಸಕ್ಕೆ ಯೋಗ್ಯವಾದ ಪ್ರತ್ಯೇಕ ಮನೆಯನ್ನು ವ್ಯವಸ್ಥೆಮಾಡೋಣ. ವಸ್ತ್ರಗಳನ್ನೂ ಆಭರಣಗಳನ್ನೂ ಸೇವಕರನ್ನೂ ಕೊಡೋಣ' ಎಂದನು.

೨೨. ಪ್ರಧಾನಮಂತ್ರಿಯ ಮಾತನ್ನು ಕೇಳಿ ಒಪ್ಪಿಗೆ ಸೂಚಿಸಿದ ರಾಜನು ಸಂತೋಷಗೊಂಡು ಎಲ್ಲ ವ್ಯವಸ್ಥೆಯನ್ನೂ ಮಾಡಿಸಿದನು.

೨೩. ಕಳಿಂಗಸೇನೆಯು ತನ್ನ ವಾಸಸ್ಥಳಕ್ಕೆ ಬಂದು ತನ್ನ ಆಸೆಯು ಈಡೇರುತ್ತಿರುವುದನ್ನು ಕಂಡು ಅತೀವ ಸಂತೋಷಪಟ್ಟಳು.

೨೪. ಬುದ್ಧಿವಂತನಾದ ಯೌಗಂಧರಾಯಣನು ಕೂಡಲೇ ಅರಮನೆಯಿಂದ ಹೊರಟು ತನ್ನ ಮನೆಗೆ ಬಂದು ಹೀಗೆ ಯೋಚಿಸಿದನು.

---

ದೇವ ಧನ್ಯೋಽಸಿ ಯಸ್ಯೈಷಾ ಸ್ವಯಂ ತೇ ಗೃಹಮಾಗತಾ ।
ಕಲಿಂಗಸೇನಾ ಭೃತ್ಯತ್ವಂ ಪ್ರಾಪ್ತಶ್ಚೈತತ್‌ಪಿತಾ ನೃಪಃ ॥ ೧೯
ತತ್‌ತ್ವಯಾ ಗಣಕಾನ್ ಪೃಷ್ಟ್ವಾ ಸುಲಗ್ನೇಽಸ್ಯಾ ಯಥಾವಿಧಿ ।
ಕಾರ್ಯಃ ಪಾಣಿಗ್ರಹೋ ರಾಜ್ಞೋ ಬೃಹತೋ ದುಹಿತಾ ಹ್ಯಸೌ ॥ ೨೦
ಅದ್ಯಾಸ್ಯಾ ದೀಯತಾಂ ತಾವತ್ ಯೋಗ್ಯಂ ವಾಸಗೃಹಂ ಪೃಥಕ್ ।
ದಾಸೀದಾಸಾ ವಿಸೃಜ್ಯಂತಾಂ ವಸ್ತ್ರಾಣ್ಯಾಭರಣಾನಿ ಚ ॥ ೨೧
ಇತ್ಯುಕ್ತೋ ಮಂತ್ರಿಮುಖ್ಯೇನ ವತ್ಸರಾಜಸ್ತಥೇತಿ ತತ್ ।
ಪ್ರಹೃಷ್ಟಹೃದಯಃ ಸರ್ವಂ ಸವಿಶೇಷಂ ಚಕಾರ ಸಃ ॥ ೨೨
ಕಲಿಂಗಸೇನಾ ಚ ತತಃ ಪ್ರವಿಷ್ಟಾ ವಾಸವೇಶ್ಮ ತತ್ ।
ಸ್ವಮನೋರಥಮಾಸನ್ನಂ ಮತ್ವಾ ಪ್ರಾಪ ಪರಾಂ ಮುದಮ್ ॥ ೨೩
ಯೌಗಂಧರಾಯಣಃ ಸೋಽಪಿ ಕ್ಷಣಾದ್ರಾಜಕುಲಾತ್ತತಃ ।
ನಿರ್ಗತ್ಯ ಸ್ವಗೃಹಂ ಗತ್ವಾ ಧೀಮಾನೇವಮಚಿಂತಯತ್ ॥ ೨೪

೭೫–೭೮. ಸಾಮಾನ್ಯವಾಗಿ ಕೆಟ್ಟಕೆಲಸಕ್ಕೆ ಕಾಲಹರಣಮಾಡುವುದೇ ಪರಿಹಾರ. ಹಿಂದೆ ಬ್ರಹ್ಮಹತ್ಯೆಯನ್ನು ಮಾಡಿ ಇಂದ್ರನು ಓಡಿಹೋಗಿದ್ದಾಗ ನಹುಷನು ದೇವಲೋಕಕ್ಕೆ ಹೋಗಿ ಶಚೀದೇವಿ ಬೇಕೆಂದು ಹಠತೊಟ್ಟಾಗ ಅವಳು ಬೃಹಸ್ಪತಿಗೆ ಶರಣಾಗಿ ಅವನ ಆಶ್ರಯವನ್ನು ಪಡೆದಳು, ಬೃಹಸ್ಪತಿಯು ಬೆಳಿಗ್ಗೆ ನಿನ್ನ ಹತ್ತಿರಕ್ಕೆ ಬರುವಳು ಎಂದು ನಹುಷನಿಗೆ ಹೇಳಿ ಕಾಲ ಕಳೆದನು. ಅಷ್ಟರೊಳಗೆ ಬ್ರಹ್ಮಋಷಿಯ ಶಾಪದಿಂದ ಹುಂಕಾರದಿಂದಲೇ ಅವನು ನಾಶವಾದನು. ಇಂದ್ರನು ಪುನಃ ದೇವಲೋಕದ ರಾಜ್ಯವನ್ನು ಪಡೆದನು. ಅದೇ ರೀತಿಯಲ್ಲಿ ಕಳಿಂಗ ಸೇನೆಯ ವಿಷಯದಲ್ಲೂ ರಾಜನ ಸಮಯವನ್ನು ನಾನು ಮುಂದೂಡಬೇಕು ಎಂದು ಯೋಚಿಸಿ ಮಂತ್ರಿಯು ಜ್ಯೋತಿಷಿಯನ್ನು ರಹಸ್ಯದಲ್ಲಿ ಕರೆದು ವಿವಾಹಕ್ಕೆ ದೂರದ ಮುಹೂರ್ತವನ್ನು ನಿಗದಿಪಡಿಸುವಂತೆ ಹೇಳಿದನು.

೮೦. ಈ ವಿಷಯವನ್ನು ತಿಳಿದ ವಾಸವದತ್ತೆಯು ಮಂತ್ರಿಯನ್ನು ತನ್ನ ಮನೆಗೆ ಕರೆಸಿಕೊಂಡಳು.

---

ಪ್ರಾಯೋಽಶುಭಸ್ಯ ಕಾರ್ಯಸ್ಯ ಕಾಲಹಾರಃ ಪ್ರತಿಕ್ರಿಯಾ ।
ತ ಥಾ ಚ ವೃತ್ರಶತ್ರೌ ಪ್ರಾಕ್ ಬ್ರಹ್ಮಹತ್ಯಾಪಲಾಯಿತೇ ॥ ೭೫
ದೇವರಾಜ್ಯಮವಾಪ್ತೇನ ನಹುಷೇಣಾಭಿವಾಂಛಿತಾ ।
ರಕ್ಷಿತಾ ದೇವಗುರುಣಾ ಶಚೀ ಶರಣಮಾಶ್ರಿತಾ ॥ ೭೬
ಅದ್ಯ ಪ್ರಾತರುಪೈತಿ ತ್ವಾಮಿತ್ಯುಕ್ತ್ವಾ ಕಾಲಹಾರತಃ ।
ಯಾವತ್ಸ ನಷ್ಟೋ ನಹುಷಃ ಹುಂಕಾರಾದ್ ಬ್ರಹ್ಮಶಾಪತಃ ॥ ೭೭
ಪ್ರಾಪ್ತಶ್ಚ ಪೂರ್ವವಚ್ಛಕ್ರಃ ಸ ಪುನರ್ದೇವರಾಜತಾಮ್ ।
ಏವಂ ಕಲಿಂಗಸೇನಾರ್ಥೇ ಕಾಲಃ ಕ್ಷೇಪ್ಯೋ ಮಯಾ ಪ್ರಭೋಃ ॥ ೭೮
ಇತಿ ಸಂಚಿಂತ್ಯ ಸರ್ವೇಷಾಂ ಗಣಕಾನಾಂ ಚ ಸಂವಿದಮ್ ।
ದೂರಲಗ್ನಪ್ರದಾನಾಯ ಮಂತ್ರೀ ಗುಪ್ತಂ ವ್ಯಧಾತ್ತದಾ ॥ ೭೯
ಅಥ ವಿಜ್ಞಾಯ ವೃತ್ತಾಂತಂ ದೇವ್ಯಾ ವಾಸವದತ್ತಯಾ ।
ಆಹೂಯ ಸ ಮಹಾಮಂತ್ರೀ ಸ್ವಮಂದಿರಮನೀಯತ ॥ ೮೦

೮೧–೮೩. ಅವನು ಬಂದು ನಮಸ್ಕಾರ ಮಾಡುತ್ತಿದ್ದಂತೆಯೇ ಅವಳು ಅಳುತ್ತಾ ಹೇಳಿದಳು. "ಆರ್ಯನೆ, ಹಿಂದೆ ನೀನು ನನಗೆ ಹೇಳಿದ್ದಿ. ""ನಾನು ಇರುವಾಗ ಪದ್ಮಾವತಿಯೊಬ್ಬಳನ್ನು ಬಿಟ್ಟು ಬೇರೆ ಯಾವಳೂ ನಿನಗೆ ಸವತಿಯಾಗುವುದಿಲ್ಲ." ಎಂದು. ಆದರೆ ಈಗ ನೋಡು. ಕಳಿಂಗಸೇನೆಯು ರಾಜನನ್ನು ಮದುವೆಯಾಗಲಿರುವಳು. ಅವಳು ಸುಂದರಿ. ರಾಜನು ಅವಳಲ್ಲೇ ಆಸಕ್ತನಾಗುವನು. ಅಂದರೆ ನೀನು ಸುಳ್ಳು ಹೇಳಿದಂತೆ ಆಯಿತು. ನಾನು ಈಗ ಸತ್ತೆ ಎಂದಳು.

೮೪–೮೬. ಅವಳ ಮಾತನ್ನು ಕೇಳಿ ಯೌಗಂಧರಾಯಣನು ಹೇಳಿದನು. "ದೇವಿ, ಧೈರ್ಯದಿಂದ ಇರು. ನಾನು ಬದುಕಿರುವಾಗ ಇದು ಹೇಗೆ ಸಾಧ್ಯ? ನೀವು ಮಾತ್ರ ರಾಜನಿಗೆ ವಿರುದ್ಧವಾಗಿ ನಡೆದುಕೊಳ್ಳಬಾರದು. ಅದಕ್ಕೆ ಬದಲು ಒಳ್ಳೆಯವಳಂತೆ ತೋರಿಸಿಕೊಳ್ಳಿ. ವೈದ್ಯನು ರೋಗಿಗೆ ವಿರುದ್ಧವಾಗಿ ಮಾತನಾಡಿದರೆ ರೋಗಿಯು ಅವನಿಗೆ ವಶವಾಗುವುದಿಲ್ಲ. ಒಳ್ಳೆಯ ಮಾತನಾಡುತ್ತಾ ತನ್ನ ಕೆಲಸವನ್ನು ಮಾಡಬೇಕು. ಹೊಳೆಯನ್ನು ದಾಟುವಾಗ ಪ್ರವಾಹಕ್ಕೆ ಎದುರಾಗಿ ಈಜಬಾರದು.

---

ತತ್ರ ಪ್ರವಿಷ್ಟಂ ಪ್ರಣತಂ ರುದತೀ ಸಾ ಜಗಾದ ತಮ್ ।
ಆರ್ಯ ಪೂರ್ವಂ ತ್ವಯೋಕ್ತಂ ಮೇ ಯಥಾ ದೇವಿ ಮಯಿ ಸ್ಥಿತೇ ॥ ೮೧
ಪದ್ಮಾವತ್ಯಾ ಋತೇ ನಾನ್ಯಾ ಸಪತ್ನೀ ತೇ ಭವಿಷ್ಯತಿ ।
ಕಲಿಂಗಸೇನಾಪ್ಯದ್ಯೈಷಾ ಪತ್ಯೇಹ ಪರಿಣೇಷ್ಯತೇ ॥ ೮೨
ಸಾ ಚ ರೂಪವತೀ ತಸ್ಯಾಮಾರ್ಯಪುತ್ರಶ್ಚ ರಜ್ಯತಿ ।
ಅತೋ ವಿತಥವಾದೀ ತ್ವಂ ಜಾತೋऽಹಂ ಚ ಮೃತಾಧುನಾ ॥ ೮೩
ತಚ್ಛ್ರುತ್ವಾ ತಾಮವೋಚತ್ ಸ ಮಂತ್ರೀ ಯೌಗಂಧರಾಯಣಃ ।
ಧೀರಾ ಭವ ಕಥಂ ಹ್ಯೇತದ್ದೇವಿ ಸ್ಯಾನ್ಮಮ ಜೀವತಃ ॥ ೮೪
ತ್ವಯಾ ತು ನಾತ್ರ ಕರ್ತವ್ಯಾ ರಾಜ್ಞೋऽಸ್ಯ ಪ್ರತಿಕೂಲತಾ ।
ಪ್ರತ್ಯುತಾಲಂಬ್ಯ ಧೀರತ್ವಂ ದರ್ಶನೀಯಾನುಕೂಲತಾ ॥ ೮೫
ನಾತುರಃ ಪ್ರತಿಕೂಲೋಕ್ತ್ಯೈರ್ವಶೇ ವೈದ್ಯಸ್ಯ ವರ್ತತೇ ।
ವರ್ತತೇ ತ್ವನುಕೂಲೋಕ್ತ್ಯೈಃ ಸಾಮ್ನೈವಾಚರತಃ ಕ್ರಿಯಾಮ್ ॥ ೮೬

೮೭–೮೯. ಆದ್ದರಿಂದ ರಾಜನು ಹತ್ತಿರ ಬಂದಾಗ ಅಸಮಾಧಾನವನ್ನು ತೋರದೆ ಸೂಕ್ತವಾಗಿ ಉಪಚರಿಸಿ ಕಳಿಂಗಸೇನೆಯ ಸ್ವೀಕಾರವನ್ನು ಸದ್ಯಕ್ಕೆ ಒಪ್ಪಿದಂತೆ ತೋರಿಸಿ. ಅದರಿಂದ ಅವಳ ತಂದೆಯ ಸಹಾಯವೂ ದೊರೆಯುತ್ತದೆ. ನೀವು ಅಭಿವೃದ್ಧಿಗೆ ಬರುತ್ತೀರಿ. ನಿಮ್ಮ ಒಳ್ಳೆಯ ಗುಣವನ್ನು ನೋಡಿ ರಾಜನು ನಿಮ್ಮ ಬಗ್ಗೆ ಸ್ನೇಹ ದಾಕ್ಷಿಣ್ಯಗಳನ್ನು ತೋರುವನು.

೯೦. ಕಳಿಂಗಸೇನೆಯು ತನ್ನವಳಾಗುವಳೆಂದು ತಿಳಿದಾಗ ಅವನ ಉದ್ವೇಗ ಹೋಗುತ್ತದೆ. ಇಚ್ಛೆಯನ್ನು ತಡೆದಷ್ಟು ಅದು ಅಧಿಕಗೊಳ್ಳುತ್ತದೆ.

೯೧–೯೪. ಈ ವಿಷಯವನ್ನು ಪದ್ಮಾವತೀ ದೇವಿಯವರಿಗೂ ತಿಳಿಸಿ. ಹೀಗೆ ಮಾಡಿದರೆ ರಾಜನು ವಿಳಂಬವನ್ನು ಸಹಿಸುವನು. ಮುಂದಿನದನ್ನು ನಾನು ಮಾಡುತ್ತೇನೆ. ನನ್ನ ಚಮತ್ಕಾರವನ್ನು ನೋಡುತ್ತಿರಿ. ಬುದ್ಧಿವಂತರನ್ನು ಕಷ್ಟಕಾಲದಲ್ಲೂ ಶೂರರನ್ನು ಯುದ್ಧದ ಸಮಯದಲ್ಲೂ ಪರೀಕ್ಷಿಸಬೇಕು. ಆದ್ದರಿಂದ ನೀವು ದುಃಖಿಸಬೇಡಿ' ಎಂದು ಅವಳಿಗೆ ತಿಳಿವಳಿಕೆ ಹೇಳಿ ಯೌಗಂಧರಾಯಣನು ಹೊರಟು ಹೋದನು.

---

ಪ್ರತೀಪಂ ಕೃಷ್ಯಮಾಣೋ ಹಿ ನೋತ್ತರೇದುತ್ತರೇನ್ನರಃ ।
ವಾಹ್ಯಮಾನೋಽನುಕೂಲಂ ತು ನೋದ್ಯೋಗಾತ್ ವ್ಯಸನಾತ್ತಥಾ ॥ ೮೭
ಅತಃ ಸಮೀಪಮಾಯಾಂತಂ ರಾಜಾನಂ ತ್ವಮವಿಕ್ರಿಯಾ ।
ಉಪಚಾರೈರುಪಚರೇಃ ಸಂವೃತ್ಯಾಕಾರಮಾತ್ಮನಃ ॥ ೮೮
ಕಲಿಂಗಸೇನಾಸ್ವೀಕಾರಂ ಶ್ರದ್ಧಧ್ಯಾಸ್ತಸ್ಯ ಸಾಂಪ್ರತಮ್ ।
ವೃದ್ಧಿಂ ಬ್ರುವಾಣಾ ರಾಜ್ಯಸ್ಯ ಸಹಾಯೇ ತತ್ಪಿತರ್ಯಪಿ ॥ ೮೯
ಏವಂ ಕೃತೇ ಚ ಮಾಹಾತ್ಮ್ಯಗುಣಂ ದೃಷ್ಟ್ವಾ ಪರಂ ತವ ।
ಪ್ರವೃದ್ಧಸ್ನೇಹದಾಕ್ಷಿಣ್ಯೋ ರಾಜಾಸೌ ಭವತಿ ತ್ವಯಿ ॥ ೯೦
ಮತ್ವಾ ಕಲಿಂಗಸೇನಾಂ ಚ ಸ್ವಾಧೀನಾಂ ನೋತ್ಸುಕೋ ಭವೇತ್ ।
ವಾರ್ಯಮಾಣಸ್ಯ ವಾಂಛಾ ಹಿ ವಿಷಯೇಷ್ವಭಿವರ್ಧತೇ ॥ ೯೧
ದೇವೀ ಪದ್ಮಾವತೀ ಚೈತತ್ ಶಿಕ್ಷಣೀಯಾ ತ್ವಯಾನಘೇ ।
ಏವಂ ಸ ರಾಜಾ ಕಾರ್ಯೇಽಸ್ಮಿನ್ ಕಾಲಕ್ಷೇಪಂ ಸಹೇತ ನಃ ॥ ೯೨
ಅತಃಪರಂ ಚ ಜಾನೇಽಹಂ ಪಶ್ಯೇರ್ಯುಕ್ತಿಬಲಂ ಮಮ ।
ಸಂಕಟೇ ಹಿ ಪರೀಕ್ಷ್ಯಂತೇ ಪ್ರಾಜ್ಞಾಃ ಶೂರಾಶ್ಚ ಸಂಗರೇ ॥ ೯೩
ತದ್ದೇವಿ ಮಾ ವಿಷಣ್ಣಾ ಭೂರಿತಿ ದೇವೀಂ ಪ್ರಬೋಧ್ಯ ತಾಮ್ ।
ತಯಾದೃತೋಕ್ತಿಃ ಸ ಯಯೌ ತತೋ ಯೌಗಂಧರಾಯಣಃ ॥ ೯೪

೮೫. ವತ್ಸರಾಜನು ಅಂದಿನ ಹಗಲಾಗಲಿ ರಾತ್ರಿಯಾಗಲಿ ಇಬ್ಬರು ರಾಣಿಯರ ಮನೆಗೂ ಹೋಗಲಿಲ್ಲ. ತನ್ನ ಸ್ವಯಂವರವನ್ನು ಬಯಸಿರುವ ಕಳಿಂಗಸೇನೆಯ ನೂತನ ಸಮಾಗಮನದ ಆಸೆಯಲ್ಲೇ ಕಾಲವನ್ನು ಕಳೆದನು.

೮೬. ದುರ್ಲಭವಾದ ಸುಖದ ಆಸೆಯ ಬಗ್ಗೆ ಗಾಢವಾಗಿ ಚಿಂತಿಸುತ್ತಾ ಯೋಚನೆಯ ಸಂಭ್ರಮದಿಂದ ತುಂಬಿಕೊಂಡಂತಿದ್ದ ರಾತ್ರಿಯನ್ನು ದೇವಿಯರು, ವತ್ಸರಾಜನು, ಪ್ರಧಾನಮಂತ್ರಿಯು ಮತ್ತು ಕಳಿಂಗಸೇನೆಯು ಬೇರೆ ಬೇರೆಯಾಗಿ ತಮ್ಮ ತಮ್ಮ ಮನೆಗಳಲ್ಲಿ ಕಳೆದರು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ ‘ಮದನಮಂಚುಕಾ’ಲಂಬಕದಲ್ಲಿ**

**ಐದನೆಯ ತರಂಗವು ಮುಗಿಯಿತು.**

---

ವತ್ಸೇಶ್ವರಶ್ಚ ತದಹರ್ನ ದಿವಾ ನ ರಾತ್ರೌ
ದೇವ್ಯೋರ್ದ್ವಯೋರಪಿ ಸ ವಾಸಗೃಹಂ ಜಗಾಮ ।
ತಾದೃಕ್ಸ್ವಯಂವರರಸೋಪನಮತ್ಕಲಿಂಗ
–ಸೇನಾಸಮಾನನವಸಂಗಮಸೋತ್ಕಚೇತಾಃ ॥ ೮೫

ರಾತ್ರಿಂ ಚ ದುರ್ಲಭರಸೋತ್ಸುಕತಾತಿಗಾಢ–
ಚಿಂತಾ ಮಹೋತ್ಸವಮಯೀಮಿವ ತಾಂ ತತಸ್ತೇ ।
ನಿನ್ಯುಃ ಸ್ವ ಸದ್ಮಸು ಪೃಥಕ್ ಪೃಥಗೇವ ದೇವೀ–
ವತ್ಸೇಶತತ್ಸಚಿವಮುಖ್ಯಕಲಿಂಗಸೇನಾಃ ॥ ೮೬

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**‘ಮದನಮಂಚುಕಾ’ಲಂಬಕೇ ಪಂಚಮಸ್ತರಂಗಃ ।**

---

## ಆರನೆಯ ತರಂಗ

೧-೩. ಮಾರನೆಯ ದಿನ ಬೆಳಿಗ್ಗೆ ಚತುರನಾದ ಮಂತ್ರಿಯೌಗಂಧರಾಯಣನು ತನಗಾಗಿ ಕಾಯುತ್ತಿದ್ದ ವತ್ಸರಾಜನ ಹತ್ತಿರಹೋಗಿ ಮಹಾರಾಜನು ಕಳಿಂಗಸೇನೆಯೊಡನೆ ವಿವಾಹಕ್ಕೆ ಲಗ್ನವನ್ನು ಈಗಲೇ ಏಕೆ ನೋಡಿಸಿಲ್ಲ ಎಂದು ಕೇಳಿದನು. ಅದನ್ನು ಕೇಳಿ ರಾಜನು ತನ್ನ ಮನದಲ್ಲೂ ಅದೇ ಇರುವುದೆಂದೂ ಅವಳಿಲ್ಲದೆ ಮನಸ್ಸಿಗೆ ಒಂದು ಕ್ಷಣವೂ ನೆಮ್ಮದಿ ಇಲ್ಲವೆಂದೂ ಹೇಳಿದನು.

೪. ಕೂಡಲೇ ಅಲ್ಲೇ ಮುಂದೆ ಇದ್ದ ದ್ವಾರಪಾಲಕನಿಗೆ ಆಜ್ಞೆಮಾಡಿ ಜೋತಿಷಿಗಳನ್ನು ಕರೆತರಿಸಿದನು.

---

## ಷಷ್ಠಸ್ತರಂಗಃ

ತತಃ ಪ್ರತೀಕ್ಷಮಾಣಂ ತಂ ವತ್ಸರಾಜಮುಪೇತ್ಯ ಸಃ ।
ಯೌಗಂಧರಾಯಣೋ ಧೂರ್ತಃ ಪ್ರಾತರ್ಮಂತ್ರೀ ವ್ಯಜಿಜ್ಞಪತ್ ॥ ೧
ಲಗ್ನಃ ಕಲಿಂಗಸೇನಾಯಾ ದೇವಸ್ಯ ಚ ಶುಭಾವಹಃ ।
ವಿವಾಹಮಂಗಲಾಯೇಹ ಕಿಂ ನಾದ್ಯೈವ ವಿಲೋಕ್ಯತೇ ॥ ೨
ತಚ್ಛ್ರುತ್ವಾ ಸೋಽಬ್ರವೀದ್ರಾಜಾ ಮಮಾಪ್ಯೇವಂ ಹೃದಿ ಸ್ಥಿತಮ್ ।
ತಾಂ ವಿನಾ ಹಿ ಮುಹೂರ್ತಂ ಮೇ ಸ್ಥಾತುಂ ನ ಸಹತೇ ಮನಃ ॥ ೩
ಇತ್ಯುಕ್ತ್ವೈವ ಸ ತತ್ಕಾಲಂ ಪ್ರತೀಹಾರಂ ಪುರಃಸ್ಥಿತಮ್ ।
ಆದಿಶ್ಯಾನಾಯಯಾಮಾಸ ಗಣಕಾನ್ ಸರಲಾಶಯಃ ॥ ೪

೫-೭. ಮೊದಲೇ ಮಹಾಮಂತ್ರಿಯು ಹೇಳಿಕೊಟ್ಟಂತೆ ಜೋಯಿಸರು ಇನ್ನು ಆರು ತಿಂಗಳ ನಂತರ ಅನುಕೂಲವಾದ ಮುಹೂರ್ತವಿದೆ ಎಂದರು. ಅದನ್ನು ಕೇಳಿ ಹುಸಿಕೋಪಗೊಂಡ ನಿಪುಣನಾದ ಯೌಗಂಧರಾಯಣನು ಈ ಜೋಯಿಸರು ತಿಳಿವಳಿಕೆ ಇಲ್ಲದವರು. ರಾಜನ ವಿಶ್ವಾಸವನ್ನು ಗಳಿಸಿರುವ ಜೋಯಿಸರು ಬಂದಿಲ್ಲ. ಅವರನ್ನು ಕರೆಸಿ. ರಾಜನು ಅವನು ಹೇಳಿದಂತೆ ಮಾಡಲಿ ಎಂದನು.

೮-೯. ಮಂತ್ರಿಯ ಮಾತನ್ನು ಕೇಳಿ ಡೋಲಾಯಮಾನ ಸ್ಥಿತಿಯನ್ನು ಹೊಂದಿದ ರಾಜನು ಆ ಜ್ಯೋತಿಷಿಯನ್ನೇ ಕರೆಸಿದನು. ಅವನೂ ಕೂಡ ಕಾಲಹರಣ ಮಾಡಬೇಕೆಂಬ ವಿಷಯವನ್ನು ತಿಳಿದವನಾಗಿ ಇನ್ನು ಆರು ತಿಂಗಳವರೆಗೆ ಮುಹೂರ್ತವಿಲ್ಲ ಎಂದನು.

೧೦-೧೧. ಆಗ ಆತಂಕಗೊಂಡವನಂತೆ ನಟಿಸಿದ ಯೌಗಂಧರಾಯಣನು "ಸ್ವಾಮಿ, ಈಗ ಏನು ಮಾಡೋಣ’ ಎಂದು ಕೇಳಿದನು. ಒಳ್ಳೆಯ ಮುಹೂರ್ತವನ್ನೇ ಬಯಸಿರುವ ರಾಜನು "ಕಳಿಂಗ ಸೇನೆಯನ್ನು ಕೇಳಿ. ಅವಳು ಏನು ಹೇಳುತ್ತಾಳೆ ನೋಡಿ’ ಎಂದನು.

---

ತೇನ ಪೃಷ್ಟಾ ಮಹಾಮಂತ್ರಿಪೂರ್ವಸ್ಥಾಪಿತಸಂವಿದಃ ।
ಊಚುರ್ಲಗ್ನೋಽನುಕೂಲೋಽಸ್ತಿ ರಾಜ್ಞೋ ಮಾಸೇಷು ಷಟ್ಸ್ವಿತಃ ॥ ೫
ತತ್ ಶ್ರುತ್ವೈವ ಮೃಷಾಕೋಪಂ ಕೃತ್ವಾ ಯೌಗಂಧರಾಯಣಃ ।
ಅಜ್ಞಾ ಇಮೇ ಧಿಗಿತ್ಯುಕ್ತ್ವಾ ರಾಜಾನಂ ನಿಪುಣೋಽಬ್ರವೀತ್ ॥ ೬
ಯೋಽಸೌ ಜ್ಞಾನೀತಿ ದೇವೇನ ಪೂಜಿತೋ ಗಣಕಃ ಪುರಾ ।
ಸ ನಾಗತೋಽದ್ಯ ತಂ ಪೃಷ್ಟ್ವಾ ಯಥಾಯುಕ್ತಂ ವಿಧೀಯತಾಮ್ ॥ ೭
ಏತನ್ಮಂತ್ರಿವಚಃ ಶ್ರುತ್ವಾ ವತ್ಸೇಶೋ ಗಣಕಂ ತದಾ ।
ತಮಪ್ಯಾನಾಯಯಾಮಾಸ ದೋಲಾರೂಢೇನ ಚೇತಸಾ ॥ ೮
ಸೋಽಪ್ಯಸ್ಯ ಕಾಲಹಾರಾಯ ಸ್ಥಿತಸಂವಿತ್ತಥೈವ ತಮ್ ।
ಲಗ್ನಂ ಪೃಷ್ಟೋಽಬ್ರವೀತ್ ಧ್ಯಾತ್ವಾ ಷಣ್ಮಾಸಾಂತೇ ವ್ಯವಸ್ಥಿತಮ್ ॥ ೯
ತತೋ ರಾಜಾನಮುದ್ವಿಗ್ನ ಇವ ಯೌಗಂಧರಾಯಣಃ ।
ಜಗಾದ ದೇವ ಕರ್ತವ್ಯಂ ಕಿಮತ್ರಾದಿಶ್ಯತಾಮಿತಿ ॥ ೧೦
ರಾಜಾಪ್ಯುತ್ಕಃ ಸುಲಗ್ನೈಷೀ ಸ ವಿಮೃಶ್ಯ ತತೋಽಭ್ಯಧಾತ್ ।
ಕಲಿಂಗಸೇನಾ ಪ್ರಷ್ಟವ್ಯಾ ಸಾ ಕಿಮಾಹೇತ್ಯವೇಕ್ಷ್ಯತಾಮ್ ॥ ೧೧

೧೨. ಅದನ್ನು ಕೇಳಿ ಯೌಗಂಧರಾಯಣನು ಹಾಗೆಯೇ ಆಗಲಿ ಎಂದು ಹೇಳಿ ಇಬ್ಬರು ಜ್ಯೋತಿಷಿಗಳೊಡನೆ ಕಳಿಂಗಸೇನೆಯ ಹತ್ತಿರ ಹೋದನು.

೧೩. ಅವಳಿಂದ ಆದರ ಪೂರ್ವಕವಾಗಿ ಗೌರವವನ್ನು ಪಡೆದು ಅವಳ ರೂಪವನ್ನು ನೋಡಿದ ಮಂತ್ರಿಯು ಇವಳನ್ನು ಪಡೆದು ರಾಜನು ಇಡೀ ರಾಜ್ಯವನ್ನೇ ತ್ಯಜಿಸಿ ಬಿಡುವನು ಎಂದು ಆತಂಕಗೊಂಡು ಅವಳಿಗೆ ಹೇಳಿದನು.

೧೪. ವಿವಾಹದ ಮುಹೂರ್ತವನ್ನು ನಿಷ್ಕರ್ಷೆಮಾಡಲು ಇವರೊಡನೆ ಬಂದಿದ್ದೇನೆ. ಇವರಿಗೆ ನಿನ್ನ ಜನ್ಮನಕ್ಷತ್ರವನ್ನು ತಿಳಿಸು ಎಂದನು.

೧೫-೧೬. ಅವಳ ಪರಿವಾರದವರಿಂದ ನಕ್ಷತ್ರವನ್ನು ತಿಳಿದು ಜೋಯಿಸರು ಮಂತ್ರಿಯ ಸಲಹೆಯಂತೆ ಸುಳ್ಳು ಲೆಕ್ಕವನ್ನು ಹಾಕಿ ಇನ್ನು ಆರು ತಿಂಗಳವರೆಗೆ ಮುಹೂರ್ತವಿಲ್ಲ ಎಂದು ಬಿಟ್ಟರು.

೧೭-೧೮. ಲಗ್ನವು ಬಹಳ ದೂರವಿರುವುದನ್ನು ಕೇಳಿ ಕಳವಳಗೊಂಡ ಕಳಿಂಗಸೇನೆಯನ್ನು ನೋಡಿ ಅವಳ ಮಹತ್ತರನು ಹೇಳಿದನು. "ಎಂದಿದ್ದರೂ ಗಂಡಹೆಂಡಿರಾಗುವವರಿಗೆ ದೂರವೇನು, ಹತ್ತಿರವೇನು ? ಸರಿಯಾದ ಮುಹೂರ್ತವನ್ನು ನೋಡಬೇಕು' ಎಂದನು.

---

ತತ್‌ಶ್ರುತ್ವಾ ಸ ತಥೇತ್ಯುಕ್ತ್ವಾ ಗೃಹೀತ್ವಾ ಗಣಕದ್ವಯಮ್ ।
ಪಾರ್ಶ್ವಂ ಕಲಿಂಗಸೇನಾಯಾ ಯಯೌ ಯೌಗಂಧರಾಯಣಃ ॥ ೧೨
ತಯಾ ಕೃತಾದರೋ ದೃಷ್ಟ್ವಾ ತದ್ರೂಪಂ ಸ ವ್ಯಚಿಂತಯತ್ ।
ಪ್ರಾಪ್ಯೇಮಾಂ ವ್ಯಸನಾದ್ರಾಜಾ ಸರ್ವಂ ರಾಜ್ಯಂ ತ್ಯಜೇದಿತಿ ॥ ೧೩
ಉವಾಚ ಚೈನಾಮುದ್ವಾಹಲಗ್ನಂ ತೇ ಗಣಕೈಃ ಸಹ ।
ನಿಶ್ಚೇತುಮಾಗತೋಽಸ್ಮ್ಯೇತೈರ್ಜನ್ಮರ್ಕ್ಷಂ ತನ್ನಿವೇದ್ಯತಾಮ್ ॥ ೧೪
ತತ್ ಶ್ರುತ್ವಾ ಜನ್ಮನಕ್ಷತ್ರಂ ತಸ್ಯಾಃ ಪರಿಜನೋದಿತಮ್ ।
ಗಣಕಸ್ತೇ ಮೃಷಾ ಕೃತ್ವಾ ವಿಚಾರಂ ಮಂತ್ರಿಸಂವಿದಾ ॥ ೧೫
ಲಗ್ನಂ ತಮೇವ ತತ್ರಾಪಿ ಮಾಸಷಟ್ಕಾಂತವರ್ತಿನಮ್ ।
ನಾರ್ವಾಗತಃ ಪುರೋಽಸ್ತೀತಿ ವದಂತಃ ಪುನರಭ್ಯಧುಃ ॥ ೧೬
ಶ್ರುತ್ವಾ ದೂರತರಂ ತಂ ಚ ಲಗ್ನಮಾವಿಗ್ನಚೇತಸಿ ।
ತತಃ ಕಲಿಂಗಸೇನಾಯಾಂ ತನ್ಮಹತ್ತರಕೋಽಭ್ಯಧಾತ್ ॥ ೧೭
ಪ್ರೇಕ್ಷ್ಯೋ ಯೇ ಲಗ್ನೋಽನುಕೂಲಃ ಪ್ರಾಗ್ಯೇನ ಸ್ಯಾದೇತಯೋಃ ಶುಭಮ್ ।
ಯಾವತ್ಕಾಲಂ ಹಿ ದಂಪತ್ಯೋಃ ಕಿಂ ಚಿರೇಣಾಚಿರೇಣ ವಾ ॥ ೧೮

೧೯. ಅವನ ಮಾತನ್ನು ಕೇಳಿ ಎಲ್ಲರೂ ಸರಿಯಾಗಿ ಹೇಳಿದಿರಿ ಎಂದು ಸಮರ್ಥಿಸಿದರು.

೨೦–೨೧. ಯೌಗಂಧರಾಯಣನು ಕೂಡ ಕೆಟ್ಟ ಲಗ್ನವನ್ನು ಇಟ್ಟರೆ ಕಳಿಂಗದತ್ತರಾಜನೂ ನೊಂದುಕೊಳ್ಳುವನು ಎಂದು ಹೇಳಿದಾಗ ಕಳಿಂಗಸೇನೆಯು ಎಲ್ಲರಿಗೂ ಯಾವುದು ಸೂಕ್ತವೆನಿಸುವುದೋ ಅದನ್ನೇ ಮಾಡಿ ಎಂದಳು.

೨೨–೨೩. ಅವಳ ಮಾತನ್ನು ಕೇಳಿ ಯೌಗಂಧರಾಯಣನು ಅವಳಿಂದ ಬೀಳ್ಕೊಂಡು ಜೋಯಿಸರೊಡನೆ ರಾಜನ ಹತ್ತಿರ ಹೋದನು. ಉಪಾಯದಿಂದ ರಾಜನಿಗೆ ವಿಷಯವನ್ನು ತಿಳಿಸಿ ಒಪ್ಪಿಸಿ ತನ್ನ ಮನೆಗೆ ಹೋದನು.

೨೪–೨೫. ತಾನು ಬಯಸಿದಂತೆ ನಡೆದ ಮೇಲೆ ಮುಂದಿನ ಕೆಲಸವನ್ನು ಮಾಡಲು ತನ್ನ ಸ್ನೇಹಿತನಾದ ಯೋಗೇಶ್ವರ ಎಂಬ ಬ್ರಹ್ಮರಾಕ್ಷಸನನ್ನು ನೆನೆದನು. ಅವನೂ ಕೂಡಲೇ ಬಂದು ಮಂತ್ರಿಗೆ ನಮಸ್ಕರಿಸಿ ನೆನೆದುದಕ್ಕೆ ಕಾರಣವೇನೆಂದು ಕೇಳಿದನು.

೨೬. ಆಗ ಆ ಮಂತ್ರಿಯು ರಾಜನಿಗೆ ಸಂತಾಪವನ್ನು ಕೊಡುತ್ತಿರುವ ಕಳಿಂಗಸೇನಾ ವೃತ್ತಾಂತವನ್ನು ಸಂಪೂರ್ಣವಾಗಿ ವಿವರಿಸಿ ಮತ್ತೆ ಹೇಳಿದನು.

---

ಏತನ್ಮಹತ್ತರವಚಃ ಶ್ರುತ್ವಾ ಸರ್ವೇಽಪಿ ತತ್‌ಕ್ಷಣಮ್ ।
ಸದುಕ್ತಮೇವಮೇವೈತದಿತಿ ತತ್ರ ಬಭಾಷಿರೇ ॥ ೧೯
ಯೌಗಂಧರಾಯಣೋಽಪ್ಯಾಹ ಹಾ ಕುಲಗ್ನೇ ಕೃತೇ ಚ ನಃ ।
ಕಲಿಂಗದತ್ತಃ ಸಂಬಂಧೀ ರಾಜಾ ಖೇದಂ ವ್ರಜೇದಿತಿ ॥ ೨೦
ತತಃ ಕಲಿಂಗಸೇನಾಪಿ ಸರ್ವಾಂಸ್ತಾನವಶಾ ಸತೀ ।
ಯಥಾ ಭವಂತೋ ಜಾನಂತೀತ್ಯುಕ್ತ್ವಾ ತೂಷ್ಣೀಂ ಬಭೂವ ಸಾ ॥ ೨೧
ತದೇವ ಚ ವಚಸ್ತಸ್ಯಾ ಗೃಹೀತ್ವಾಮಂತ್ರ್ಯ ತಾಂ ತತಃ ।
ಯೌಗಂಧರಾಯಣೋ ರಾಜ್ಞಃ ಪಾರ್ಶ್ವಂ ಸಗಣಕೋ ಯಯೌ ॥ ೨೨
ತತ್ರ ತಸ್ಮೈ ತದಾವೇದ್ಯ ವತ್ಸೇಶಾಯ ತಥೈವ ಸಃ ।
ಯುಕ್ತ್ಯಾ ಚ ತಮವಸ್ಥಾಪ್ಯ ಸ ಜಗಾಮ ನಿಜಂ ಗೃಹಮ್ ॥ ೨೩
ಸಿದ್ಧಕಾಲಾತಿಪಾತಶ್ಚ ಕಾರ್ಯಶೇಷಾಯ ತತ್ರ ಸಃ ।
ಯೋಗೇಶ್ವರಾಖ್ಯಂ ಸುಹೃದಂ ಸಸ್ಮಾರ ಬ್ರಹ್ಮರಾಕ್ಷಸಮ್ ॥ ೨೪
ಸಪೂರ್ವಪ್ರತಿಪನ್ನಸ್ತಂ ಸ್ಮೈರಂ ಧ್ಯಾನಾದುಪಸ್ಥಿತಃ ।
ರಾಕ್ಷಸೋ ಮಂತ್ರಿಣಂ ನತ್ವಾ ಕಿಂ ಸ್ಮೃತೋಽಸ್ಮೀತ್ಯವೋಚತ್ ॥ ೨೫
ತತಃ ಸ ಮಂತ್ರೀ ತಸ್ಮೈ ತಂ ಕೃತ್ಸ್ನಂ ವ್ಯಸನದಂ ಪ್ರಭೋಃ ।
ಕಲಿಂಗಸೇನಾವೃತ್ತಾಂತಂ ಉಕ್ತ್ವಾ ಭೂಯೋ ಜಗಾದ ತಮ್ ॥ ೨೬

೨೭–೩೧. ಗೆಳೆಯನೆ, ನಾನು ನನ್ನ ಯುಕ್ತಿಯಿಂದ ಮುಹೂರ್ತವನ್ನು ಮುಂದೂಡಿಸಿದ್ದೇನೆ. ನೀನು ಕಳಿಂಗಸೇನೆಯ ಹತ್ತಿರ ಅಗೋಚರನಾಗಿ ಇದ್ದುಕೊಂಡು ಅವಳನ್ನು ಗಮನಿಸುತ್ತಿರು. ವಿದ್ಯಾಧರರು ಮೊದಲಾದವರು ಖಂಡಿತವಾಗಿಯೂ ಒಳಗೊಳಗೇ ಅವಳನ್ನು ಬಯಸುತ್ತಾರೆ. ಏಕೆಂದರೆ ಮೂರು ಲೋಕಗಳಲ್ಲೂ ಅವಳಂಥ ಸುಂದರಿಯು ಮತ್ತೊಬ್ಬಳಿಲ್ಲ. ಯಾವನಾದರೂ ಸಿದ್ಧನೊಡನೆಯೋ ವಿದ್ಯಾಧರನೊಡನೆಯೋ ಅವಳು ಇರುವುದನ್ನು ನೀನು ಕಂಡರೆ ಅದು ಒಳ್ಳೆಯದೇ ಆಗುವುದು. ದಿವ್ಯಲೋಕದ ಆ ಕಾಮುಕರು ಬೇರೆ ರೂಪದಲ್ಲಿ ಬಂದರೂ ರಾತ್ರಿ ತಮ್ಮ ನೈಜರೂಪದಲ್ಲೇ ಇರುವುದು ನಿನಗೆ ಗೋಚರವಾಗುತ್ತದೆ. ಹೀಗೆ ಅವಳ ದೋಷವನ್ನು ನಿನ್ನಿಂದ ನಾವು ತಿಳಿದು ರಾಜನಿಗೆ ಹೇಳಿದರೆ ಅವನು ಅವಳ ಆಸೆಯನ್ನು ಬಿಡುವನು. ಆಗ ನಮ್ಮ ಕಾರ್ಯವು ನೆರವೇರುತ್ತದೆ ಎಂದನು.

೩೨. ಮಂತ್ರಿಯ ಮಾತನ್ನು ಕೇಳಿ ಬ್ರಹ್ಮರಾಕ್ಷಸನು ತಾನೇ ಅವಳನ್ನು ಏಕೆ ಕೆಡಿಸಬಾರದು ಅಥವಾ ಕೊಂದುಬಿಡಬಾರದು ಎಂದನು.

---

ಕಾಲೋ ಮಯಾ ಹೃತೋ ಮಿತ್ರ ತನ್ಮಧ್ಯೇ ತ್ವಂ ಸ್ವಯುಕ್ತಿತಃ ।
ವೃತ್ತಂ ಕಲಿಂಗಸೇನಾಯಾಃ ಪ್ರಚ್ಛನ್ನೋಽಸ್ಯಾಃ ನಿರೂಪಯೇಃ ॥ ೨೭
ವಿದ್ಯಾಧರಾದಯಸ್ತಾಂ ಹಿ ಛನ್ನಂ ವಾಂಛಂತಿ ನಿಶ್ಚಿತಮ್ ।
ಯತೋಽನ್ಯಾ ತಾದೃಶೀ ನಾಸ್ತಿ ರೂಪೇಣಾಸ್ಮಿನ್ ಜಗತ್ತ್ರಯೇ ॥ ೨೮
ಅತಃ ಕೇನಾಪಿ ಸಿದ್ಧೇನ ಸಂಗಂ ವಿದ್ಯಾಧರೇಣ ವಾ ।
ಗಚ್ಛೇತ್ ಸಾ ಯದಿ ತಚ್ಚ ತ್ವಂ ಪಶ್ಯೇಸ್ತದ್‌ಭದ್ರಕಂ ಭವೇತ್ ॥ ೨೯
ಅನ್ಯರೂಪಾಗತಶ್ಚಾತ್ರ ಲಕ್ಷ್ಯಸ್ತೇ ದಿವ್ಯಕಾಮುಕಃ ।
ಸ್ವಾಪಕಾಲೇ ಯತೋ ದೇವ್ಯಾಃ ಸುಪ್ತಾಃ ಸ್ವೇ ರೂಪ ಆಸತೇ ॥ ೩೦
ಏವಂ ತ್ವದ್‌ದೃಷ್ಟಿತಃ ತಸ್ಯಾ ದೋಷೋಽಸ್ಮಾಭಿರ್ವಿಲೋಕ್ಯತೇ ।
ತಸ್ಯಾಂ ರಾಜಾ ವಿರಜ್ಯೇಚ್ಚ ತತ್ಕಾರ್ಯಂ ನಿರ್ವಹೇಚ್ಚ ನಃ ॥ ೩೧
ಇತ್ಯುಕ್ತೋ ಮಂತ್ರಿಣಾ ತೇನ ಸೋಽಬ್ರವೀದ್ ಬ್ರಹ್ಮರಾಕ್ಷಸಃ ।
ಯುಕ್ತ್ಯಾಹಮೇವ ಕಿಂ ನೈತಾಂ ಧ್ವಂಸಯಾಮಿ ನಿಹನ್ಮಿ ವಾ ॥ ೩೨

೩೩-೩೫. ಅದನ್ನು ಕೇಳಿ ಯೌಗಂಧರಾಯಣನು "ಹಾಗೆ ಮಾಡುವುದು ಅಧರ್ಮವಾಗುತ್ತದೆ. ಧರ್ಮಕ್ಕೆ ವಿರುದ್ಧವಾಗದ ಹಾಗೆ ನಡೆದುಕೊಂಡರೆ ಧರ್ಮವೇ ನಮ್ಮ ಮನೋಭಿಲಾಷೆಗಳನ್ನು ಈಡೇರಿಸುವುದು. ಆದ್ದರಿಂದ,ಗೆಳೆಯನೆ, ಅವಳು ಮಾಡುವ ತಪ್ಪನ್ನು ನೀನು ಗಮನಿಸುತ್ತಿರು. ಅದರಿಂದ ನನ್ನ ರಾಜಕಾರ್ಯವು ನೆರವೇರುವುದು.'

೩೬. ಈ ರೀತಿಯಾಗಿ ಮಂತ್ರಿಯು ಆದೇಶಿಸಿದಂತೆ ಆ ಬ್ರಹ್ಮರಾಕ್ಷಸನು ಕಳಿಂಗಸೇನೆಯ ಮನೆಗೆ ಅದೃಶ್ಯನಾಗಿ ಹೋದನು.

೩೭. ಅಷ್ಟುಹೊತ್ತಿಗೆ ಕಳಿಂಗಸೇನೆಯ ಗೆಳತಿಯಾದ ಮಯಾಸುರಪುತ್ರಿ ಸೋಮಪ್ರಭೆಯು ಅಲ್ಲಿಗೆ ಬಂದಳು.

೩೮. ರಾತ್ರಿಯಲ್ಲಿ ನಡೆದುದನ್ನು ಕೇಳಿ ಸೋಮಪ್ರಭೆಯು ಅವಳಿಗೆ ಹೇಳಿದಳು. ರಾಕ್ಷಸನೂ ಆ ಮಾತನ್ನು ಕೇಳಿಸಿಕೊಳ್ಳುತ್ತಿದ್ದನು.

---

ತತ್ಶ್ರುತ್ವೈವ ಮಹಾಮಂತ್ರೀ ತಂ ಸ ಯೌಗಂಧರಾಯಣಃ ।
ಉವಾಚ ನೈತತ್ ಕರ್ತವ್ಯಮಧರ್ಮೋ ಹಿ ಮಹಾನ್ ಭವೇತ್ ॥ ೩೩
ಯಶ್ಚ ಧರ್ಮಮಬಾಧಿತ್ವಾ ಸ್ವೇನ ಸಂಸರತೇ ಪಥಾ ।
ತಸ್ಯೋಪಯಾತಿ ಸಾಹಾಯ್ಯಂ ಸ ಏವಾಭೀಷ್ಟಸಿದ್ಧಿಷು ॥ ೩೪
ತತ್ತಸ್ಯಾಃ ಸ್ವೋತ್ಥಿತೋ ದೋಷಃ ಪ್ರೇಕ್ಷಣೀಯಸ್ತ್ವಯಾ ಸಖೇ ।
ಯೇನಾಸ್ಮಾಭಿರ್ಭವನ್ಮೈತ್ರ್ಯಾ ರಾಜಕಾರ್ಯಂ ಕೃತಂ ಭವೇತ್ ॥ ೩೫
ಇತಿ ಮಂತ್ರಿವರಾದಿಷ್ಟಃ ಸ ಗತ್ವಾ ಬ್ರಹ್ಮರಾಕ್ಷಸಃ ।
ಗೃಹಂ ಕಲಿಂಗಸೇನಾಯಾ ಯೋಗಚ್ಛನ್ನಃ ಪ್ರವಿಷ್ಟವಾನ್ ॥ ೩೬
ಅತ್ರಾಂತರೇ ಸಖೀ ತಸ್ಯಾಃ ಸಾ ಮಯಾಸುರ ಪುತ್ರಿಕಾ ।
ಆಗಾತ್ ಕಲಿಂಗಸೇನಾಯಾಃ ಪಾರ್ಶ್ವಂ ಸೋಮಪ್ರಭಾ ಪುನಃ ॥ ೩೭
ಸಾ ಪೃಷ್ಟ್ವಾ ರಾತ್ರಿವಾರ್ತಾಂ ತಾಂ ಯುಕ್ತುಂಧುಂ ಮಯಾತ್ಮಜಾ ।
ರಾಜಪುತ್ರೀಮುವಾಚೈವಂ ತಸ್ಮಿನ್ ಶೃಣ್ವತಿ ರಾಕ್ಷಸೇ ॥ ೩೮

೫–೪೧. ""ಇಂದು ಬೆಳಿಗ್ಗೆ ನಾನು ನಿನ್ನನ್ನು ಹುಡುಕಿಕೊಂಡು ಇಲ್ಲಿಗೆ ಬಂದೆ. ನಿನ್ನ ಪಕ್ಕದಲ್ಲೇ ನಿಂತು ಯೌಗಂಧರಾಯಣನೊಡನೆ ನಡೆದ ನಿನ್ನ ಮಾತುಕತೆಯನ್ನು ಕೇಳಿದೆನು. ನಾನು ಬೇಡವೆಂದಿದ್ದರೂ ನೀನು ಏಕೆ ಹೀಗೆ ಮಾಡಿದೆ ? ಅಪಶಕುನದ ಕೆಲಸಕ್ಕೆ ಕಾರಣವಿಲ್ಲದೆ ಕೈ ಹಾಕಿದರೆ ಅದು ಕೆಟ್ಟದ್ದನ್ನೇ ಮಾಡುವುದು. ಈ ಕಥೆಯನ್ನು ಕೇಳು" ಎಂದಳು.

೪೨. ಹಿಂದೆ ಅಂತರ್ವೇದಿ ಎಂಬ ಊರಿನಲ್ಲಿ ವಸುದತ್ತ ಎಂಬ ಬ್ರಾಹ್ಮಣನಿದ್ದನು. ಅವನಿಗೆ ವಿಷ್ಣುದತ್ತ ಎಂಬ ಮಗನಿದ್ದನು.

೪೩. ವಿಷ್ಣುದತ್ತನು ಹದಿನಾರುವರ್ಷದವನಾದ ಮೇಲೆ ವಿದ್ಯಾಭ್ಯಾಸಕ್ಕಾಗಿ ವಲಭೀ ಎಂಬ ಊರಿಗೆ ಹೊರಟನು.

೪೪–೪೫. ಅವನ ವಯಸ್ಸಿನ ಇನ್ನೂ ಏಳು ಜನ ಬ್ರಾಹ್ಮಣಪುತ್ರರು ಅವನ ಜೊತೆ ಸೇರಿದರು. ಆದರೆ ಅವರು ಅವನಂತೆ ಬುದ್ಧಿವಂತರಲ್ಲ, ದಡ್ಡರು. ಪರಸ್ಪರ ಅಗಲಬಾರದೆಂದು ಶಪಥಮಾಡಿಕೊಂಡು ವಿಷ್ಣುದತ್ತನು ತಂದೆತಾಯಿಯರಿಗೆ ತಿಳಿಯದಂತೆ ರಾತ್ರಿಯಲ್ಲಿ ಹೊರಟನು.

---

ಅದ್ಯ ಪೂರ್ವಾಹ್ಣ ಏವಾಹಂ ವಿಚಿತ್ಯ ತ್ವಾಮಿಹಾಗತಾ ।
ಛನ್ನಾತ್ತಿಷ್ಠಂ ತ್ವತ್ಪಾರ್ಶ್ವೇ ದೃಷ್ಟ್ವಾ ಯೌಗಂಧರಾಯಣಮ್ ॥ ೫
ಶ್ರುತಶ್ಚ ಯುಷ್ಮದಾಲಾಪಃ ಸರ್ವಂ ಚಾವಗತಂ ಮಯಾ ।
ತತ್ಕಿಂ ತ್ವಯಾ ಹ್ಯ ಏವೈತದಾರಬ್ಧಂ ಮನ್ನಿಷಿದ್ಧಯಾ ॥ ೪೦
ಅಪ್ಯಪ್ರೋಹ್ಯಾನಿಮಿತ್ತಂ ಹಿ ಕಾರ್ಯಂ ಯತ್ಕ್ರಿಯತೇ ಸಖಿ ।
ತದನಿಷ್ಟಾಯ ಕಲ್ಪೇತ ತಥಾ ಚೇಮಾಂ ಕಥಾಂ ಶೃಣು ॥ ೪೧
ಅಂತರ್ವೇದ್ಯಾಮಭೂತ್ ಪೂರ್ವಂ ವಸುದತ್ತ ಇತಿ ದ್ವಿಜಃ ।
ವಿಷ್ಣುದತ್ತಾಭಿಧಾನಶ್ಚ ಪುತ್ರಸ್ತಸ್ಯೋದಪದ್ಯತ ॥ ೪೨
ಸ ವಿಷ್ಣುದತ್ತೋ ವಯಸಾ ಪೂರ್ಣಷೋಡಶವತ್ಸರಃ ।
ಗಂತುಂ ಪ್ರವವೃತೇ ವಿದ್ಯಾಪ್ರಾಪ್ತಯೇ ವಲಭೀಂ ಪುರೀಮ್ ॥ ೪೩
ಮಿಲಂತಿ ಸ್ಮ ಚ ತಸ್ಯಾನ್ಯೇ ಸಪ್ತ ವಿಪ್ರಸುತಾಃ ಸಮಾಃ ।
ಸಪ್ತಾಪಿ ತೇ ಪುನರ್ಮೂರ್ಖಾಃ ಸ ವಿದ್ವಾನ್ ಸತ್ಕುಲೋದ್ಗತಃ ॥ ೪೪
ಕೃತ್ವಾನ್ಯೋನ್ಯಾಪರಿತ್ಯಾಗಶಪಥಂ ತೈಃ ಸಮಂ ತತಃ ।
ವಿಷ್ಣುದತ್ತಃ ಪ್ರತಸ್ಥೇ ಸ ಪಿತ್ರೋರವಿದಿತೋ ನಿಶಿ ॥ ೪೫

೪೬. ಹೀಗೆ ಹೊರಟಾಗ ಅಪಶಕುನವು ಎದುರಾಗಿದ್ದುದನ್ನು ಕಂಡು ಅವನು ತನ್ನ ಜೊತೆಗಾರರಿಗೆ ಹೇಳಿದನು.

೪೭. "ಗೆಳೆಯರೆ, ಅಪಶಕುನವಾದ್ದರಿಂದ ಈಗ ಹಿಂತಿರುಗುವುದು ಲೇಸು ಮುಂದೆ ಶುಭಶಕುನವಾದಾಗ ಮತ್ತೆ ಹೋಗೋಣ' ಎಂದನು.

೪೮–೪೯. ಅದನ್ನು ಕೇಳಿ ಮೂರ್ಖ ಗೆಳೆಯರು ಹೇಳಿದರು : "ಸುಮ್ಮನೆ ಶಂಕಿಸಬೇಡ. ನಾವು ಇದಕ್ಕೆಲ್ಲ ಹೆದರುವುದಿಲ್ಲ. ನಿನಗೆ ಭಯವಾದರೆ ಬರಬೇಡ. ನಾವು ಇಂದೇ ಹೊರಡುತ್ತೇವೆ. ಬೆಳಗಾದರೆ ಬಂಧುಗಳು ಈ ವಿಷಯವನ್ನು ತಿಳಿದು ನಾವು ಹೋಗಲು ಬಿಡುವುದಿಲ್ಲ.'

೫೦. ಹೀಗೆ ಮೂರ್ಖರಾದ ಅವರು ಹೇಳಿದಾಗ ಅವರೊಡನೆ ಮಾಡಿಕೊಂಡ ಒಪ್ಪಂದಕ್ಕೆ ಕಟ್ಟುಬಿದ್ದು ವಿಷ್ಣುದತ್ತನು ಪಾಪನಿವಾರಕ ಹರಿಯನ್ನು ಸ್ಮರಿಸುತ್ತಾ ಹೊರಟನು.

೫೧–೫೩. ರಾತ್ರಿಯ ಕೊನೆಯಲ್ಲಿ ಮತ್ತೊಂದು ಅಪಶಕುನವನ್ನು ಕಂಡು ಅವನು ಹೇಳಿದಾಗ ಅವರು ಗದರಿದರು. "ಅಡಿಗಡಿಗೆ ಕಾಗೆಗೂ ಹೆದರುವ ನಿನ್ನಂತಹ ಅಂಜುಬುರುಕನನ್ನು ಕರೆದುಕೊಂಡು ಬಂದದ್ದೇ ನಮಗೆ ಅಪಶಕುನ. ಬೇರೆ ಅಪಶಕುನ ಬೇಕೇ?' ಎಂದು ಅವನನ್ನು ಹಳಿದರು. ಆಗ ಅವನು ಪರಾಧೀನನಾಗಿ ಏನೂ ಮಾತನಾಡದೆ ಸುಮ್ಮನೆ ಹೊರಟನು.

---

ಪ್ರಸ್ಥಿತಶ್ಚಾಗ್ರತೋಽಸ್ಮಾದನಿಮಿತ್ತಮುಪಸ್ಥಿತಮ್ ।
ದೃಷ್ಟ್ವಾ ಸೋಽತ್ರ ವಯಸ್ಯಾಂಸ್ತಾನ್ ಸಹಪ್ರಸ್ಥಾಯಿನೋಽಭ್ಯಧಾತ್ ॥ ೪೬
ಅನಿಮಿತ್ತಮಿದಂ ಹಂತ ಯುಕ್ತಮದ್ಯ ನಿವರ್ತಿತುಮ್ ।
ಪುನರೇವ ಪ್ರಯಾಸ್ಯಾಮಃ ಸಿದ್ಧಯೇ ಶಕುನಾನ್ವಿತಾಃ ॥ ೪೭
ತತ್ ಶ್ರುತ್ವೈವ ಸಖಾಯಸ್ತಂ ಮೂರ್ಖಾಃ ಸಪ್ತಾಪಿ ತೇಽಬ್ರುವನ್ ।
ಮೃಷಾ ಮಾಜೀಗಣಃ ಶಂಕಾಂ ನಹ್ಯತೋ ಬಿಭಿಮೋ ವಯಮ್ ॥ ೪೮
ತ್ವಂ ಚೇದ್ಬಿಭೇಷಿ ತನ್ಮಾ ಗಾ ವಯಂ ಯಾಮೋಽಧುನೈವ ತು ।
ಪ್ರಾತರ್ವಿದಿತವೃತ್ತಾಂತಾ ನಾಸ್ಮಾಂಸ್ತ್ಯಕ್ಷ್ಯಂತಿ ಬಾಂಧವಾಃ ॥ ೪೯
ಇತ್ಯುಕ್ತವದ್ಭಿರಜ್ಞೈಸ್ತೈಃ ಸಾಕಂ ಶಪಥಯಂತ್ರಿತಃ ।
ವಿಷ್ಣುದತ್ತೋ ಯಯಾವೇವ ಸ ಸ್ಮೃತ್ವಾಘಹರಂ ಹರಿಮ್ ॥ ೫೦
ರಾತ್ರ್ಯಂತೇ ಚ ವಿಲೋಕ್ಯಾನ್ಯದನಿಮಿತ್ತಂ ಪುನರ್ವದನ್ ।
ಮೂರ್ಖೈಸ್ತೈಃ ಸಖಿಭಿಃ ಸರ್ವೈಃ ಸ ಏವಂ ನಿರಭರ್ತ್ಸ್ಯತ ॥ ೫೧
ಏತದೇವಾನಿಮಿತ್ತಂ ನಃ ಕಿಮನ್ಯೇನಾಧ್ವಭೀಲುಕ ।
ಯತ್ ತ್ವಮಸ್ಮಾಭಿರಾನೀತಃ ಕಾಕಶಂಕೀ ಪದೇ ಪದೇ ॥ ೫೨
ಇತ್ಯಾದಿ ಭರ್ತ್ಸನಾಂ ಕೃತ್ವಾ ಗಚ್ಛದ್ಭಿಃ ತೈಃಸಮಂ ಚ ಸಃ ।
ವಿವಶಃ ಪ್ರಯಯೌ ವಿಷ್ಣುದತ್ತಸ್ತೂಷ್ಣೀಂ ಬಭೂವ ಚ ॥ ೫೩

೫೪. ತನ್ನ ಇಷ್ಟಬಂದಂತೆ ವರ್ತಿಸುವವನಿಗೆ ಉಪದೇಶಮಾಡಬಾರದು. ಕೊಳಕು ಮನುಷ್ಯನಿಗೆ ಮಾಡುವ ಸಂಸ್ಕಾರದಂತೆ ಅದು ತಿರಸ್ಕಾರಕ್ಕೆ ಕಾರಣವಾಗುತ್ತದೆ.

೫೫–೫೬. ಅನೇಕ ಜನ ಮೂರ್ಖರ ಮಧ್ಯೆ ಸಿಕ್ಕಿಕೊಂಡ ಜ್ಞಾನಿಯು ಅಲೆಗಳ ಹೊಡೆತಕ್ಕೆ ಸಿಕ್ಕ ಆನೆಯಂತೆ (ಪದ್ಮಃ=ಆನೆ) ಒದ್ದಾಡುತ್ತಾನೆ. ಆದ್ದರಿಂದ ನಾನು ಇನ್ನೊಮ್ಮೆ ಇವರಿಗೆ ಬುದ್ಧಿವಾದವನ್ನು ಹೇಳಬಾರದು. ಸುಮ್ಮನೆ ಹೋಗಬೇಕು. ವಿಧಿಯು ಶ್ರೇಯಸ್ಸನ್ನು ಉಂಟುಮಾಡುವುದು.

೫೭ ಹೀಗೆಲ್ಲಾ ಯೋಚನೆ ಮಾಡಿ ವಿಷ್ಣುದತ್ತನು ಆ ಮೂರ್ಖರೊಡನೆ ಹೋಗುತ್ತಾ ಸಂಜೆ ವೇಳೆಗೆ ಒಂದು ಬೇಡರಹಳ್ಳಿಯನ್ನು ಸೇರಿದನು.

೫೮–೫೯. ಅಲ್ಲಿ ಸುತ್ತಾಡಿ ರಾತ್ರಿ ವೇಳೆ ಒಂದು ಮನೆಯಲ್ಲಿ ವಾಸಕ್ಕೆ ಅವಕಾಶವನ್ನು ಬೇಡಿದನು. ಅದು ಒಬ್ಬ ತರುಣಿಯ ಮನೆಯಾಗಿತ್ತು. ಅವಳು ಅವಕಾಶವನ್ನು ನೀಡಿದಳು. ವಿಷ್ಣುದತ್ತನು ತನ್ನ ಗೆಳೆಯರೊಡನೆ ಆ ಮನೆಗೆ ಹೋದನು. ಆ ಏಳು ಜನರು ಒಂದು ಕ್ಷಣದಲ್ಲೇ ನಿದ್ದೆ ಮಾಡಿದರು.

೬೦. ಅವನು ಮಾತ್ರ ಎಚ್ಚರವಾಗೇ ಇದ್ದನು. ಏಕೆಂದರೆ ಅದು ಪುರುಷನ ಮನೆಯಾಗಿರಲಿಲ್ಲ. ಮೂರ್ಖರು ಸುಖವಾಗಿ ಅಂತಹ ಸ್ಥಳದಲ್ಲೂ ನಿದ್ರಿಸುತ್ತಾರೆ. ವಿವೇಕಿಗಳಿಗೆ ನಿದ್ರೆ ಎಲ್ಲಿ?

---

ನೋಪದೇಶೋ ವಿಧಾತವ್ಯೋ ಮೂರ್ಖಸ್ಯ ಸ್ವಾಭಿಚಾರಿಣಃ ।
ಸಂಸ್ಕಾರೋಽವಸ್ಕರಸ್ಯೇವ ತಿರಸ್ಕಾರಕರೋ ಹಿ ಸಃ ॥ ೫೪
ಏಕೋ ಬಹೂನಾಂ ಮೂರ್ಖಾಣಾಂ ಮಧ್ಯೇ ನಿಪತಿತೋ ಬುಧಃ ।
ಪದ್ಮಃ ಪಾಥಸ್ತುರಂಗಾಣಾಮಿವ ವಿಪ್ಲವತೇ ಧ್ರುವಮ್ ॥ ೫೫
ತಸ್ಮಾದೇಷಾಂ ನ ವಕ್ತವ್ಯಂ ಮಯಾ ಭೂಯೋ ಹಿತಾಹಿತಮ್ ।
ತೂಷ್ಣೀಮೇವ ಪ್ರಯಾತವ್ಯಂ ವಿಧಿಃ ಶ್ರೇಯೋ ವಿಧಾಸ್ಯತಿ ॥ ೫೬
ಇತ್ಯಾದ್ಯಾಕಲಯನ್ ಮೂರ್ಖೈಃ ಪ್ರಕ್ರಮಂಸ್ತೈಃ ಸಮಂ ಪಥಿ ।
ವಿಷ್ಣುದತ್ತೋ ದಿನಸ್ಯಾಂತೇ ಶಬರಗ್ರಾಮಮಾಪ ಸಃ ॥ ೫೭
ತತ್ರ ಭ್ರಾಂತ್ವಾ ನಿಶಿ ಪ್ರಾಪ ತರುಣ್ಯಾಧಿಷ್ಠಿತಂ ಸ್ತ್ರಿಯಾ ।
ಗೃಹಮೇಕಂ ಯಯಾಚೇ ಚ ನಿವಾಸಂ ಸೋಽಥ ತಾಂ ಸ್ತ್ರಿಯಮ್ ॥ ೫೮
ತಯಾ ದತ್ತೇಽಪವರಕೇ ಸಹಾನ್ಯೈಸ್ತೈರ್ವಿವೇಶ ಸಃ ।
ಸಖಿಭಿಸ್ತೇ ಚ ಸಪ್ತಾಪಿ ತತ್ರ ನಿದ್ರಾಂ ಕ್ಷಣಂ ಯಯುಃ ॥ ೫೯
ಸ ಏಕೋ ಜಾಗ್ರದೇವಾಸೀತ್ ಅಮನುಷ್ಯಗೃಹಾಶ್ರಯಾತ್ ।
ಸ್ವಪಂತ್ಯಜ್ಞಾ ಹಿ ನಿಶ್ಚೇಷ್ಟಾಃ ಕುತೋ ನಿದ್ರಾ ವಿವೇಕಿನಾಮ್ ॥ ೬೦

೬೧-೬೨. ಅಷ್ಟರಲ್ಲಿ ಒಬ್ಬ ತರುಣನು ಆ ಮನೆಗೆ ಬಂದು ತರುಣಿಯ ಕೋಣೆಯೊಳಗೆ ಹೋಗಿ ಅವಳೊಡನೆ ರಹಸ್ಯವಾಗಿ ಮಾತನಾಡುತ್ತಾ ಸುಖಿಸಿದನು. ಸಂಭೋಗದಿಂದ ಆಯಾಸಗೊಂಡ ಅವರಿಬ್ಬರೂ ನಿದ್ರಿಸಿದರು.

೬೩. ವಿಷ್ಣುದತ್ತನು ಅದೆಲ್ಲವನ್ನೂ ದೀಪದ ಬೆಳಕಿನಲ್ಲಿ ನೋಡಿ ಜಿಗುಪ್ಸೆಯಿಂದ ಚಿಂತಿಸಿದನು.

೬೪-೬೬. ಇಂತಹ ದುರ್ನಡತೆಯವಳ ಮನೆಗೆ ಬಂದೆವಲ್ಲಾ! ಇವಳ ಗಂಡನು ಇಷ್ಟು ಚಿಕ್ಕ ವಯಸ್ಸಿನವನು ಆಗಿರಲಾರನು. ಇಲ್ಲದಿದ್ದರೆ ಈ ತರಹದ ನಡತೆ ಇರುತ್ತಿರಲಿಲ್ಲ. ಇವಳು ಚಪಲದವಳು ಎಂದು ನನಗೆ ಮೊದಲೇ ಅನುಮಾನ ಬಂದಿತ್ತು. ಬೇರೆ ದಾರಿಯಿಲ್ಲದೆ ಇಲ್ಲಿಗೆ ಬಂದೆವು. ಆದರೆ ಪರಸ್ಪರ ಸಾಕ್ಷಿಗಳು ಆದೆವಲ್ಲ ಎಂದು ಚಿಂತಿಸುತ್ತಿರುವಾಗಲೇ ಜನರು ಹೊರಗಡೆ ಗಲಾಟೆ ಮಾಡುತ್ತಿರುವುದು ಇವನಿಗೆ ಕೇಳಿಸಿತು.

೬೭-೬೮. ಒಬ್ಬ ತರುಣ ಬೇಡನು ಕೈಯಲ್ಲಿ ಖಡ್ಗವನ್ನು ಹಿಡಿದು ಒಳಗೆ ನುಮ್ಮ ಬಳಿಗೆ ಬಂದು 'ನೀವು ಯಾರು' ಎಂದು ಕೇಳಿದನು. ಭಯಗೊಂಡ ವಿಷ್ಣುದತ್ತನು ಅವನೇ ಆ ಮನೆಯೊಡೆಯನೆಂದು ತಿಳಿದು ನಾವು ಪ್ರಯಾಣಿಕರು ಎಂದು ಹೇಳಿದನು.

---

ತಾವಚ್ಚ ತತ್ರ ಪುರುಷಃ ಕೋಽಪ್ಯೇಕೋ ನಿಭೃತಂ ಯುವಾ ।
ಅಭ್ಯಂತರಗೃಹಂ ತಸ್ಯಾಃ ಪ್ರವಿವೇಶಾಂತಿಕಂ ಸ್ತ್ರಿಯಾಃ ॥ ೬೧
ತೇನ ಸಾಕಂ ಚ ಸಾ ರೇಮೇ ಚಿರಂ ಗುಪ್ತಾಭಿಭಾಷಿಣೀ ।
ರತಿಶ್ರಾಂತೌ ಚ ತೌ ದೈವಾನ್ನಿದ್ರಾಂ ದ್ವಾವಪಿ ಜಗ್ಮತುಃ ॥ ೬೨
ತಚ್ಚ ದೀಪಪ್ರಕಾಶೇನ ಸರ್ವಂ ದ್ವಾರಾಂತರೇಣ ಸಃ ।
ವಿಷ್ಣುದತ್ತೋ ವಿಲೋಕ್ಯೈವಂ ಸನಿರ್ವೇದಮಚಿಂತಯತ್ ॥ ೬೩
ಕಷ್ಟಂ ಕಥಂ ಪ್ರವಿಷ್ಟಾಃ ಸ್ಮ ದುಶ್ಚಾರಿಣ್ಯಾಃ ಸ್ತ್ರಿಯಾ ಗೃಹಮ್ ।
ಧ್ರುವಂ ಜ್ಞಾತೋಽಯಮೇತಸ್ಯಾ ನ ಕೌಮಾರಃ ಪತಿಃ ಪುನಃ ॥ ೬೪
ನಾನ್ಯಥಾ ಹಿ ಭವತ್ಯೇಷಾ ಸಶಂಕನಿಭೃತಾ ಗತಿಃ ।
ಮಯಾ ಚಪಲಚಿತ್ತೇಯಮಾದಾವೇವ ಚ ಲಕ್ಷಿತಾ ॥ ೬೫
ಅನ್ಯಾಲಾಭಾತ್ ಪ್ರವಿಷ್ಟಾಃ ಸ್ಮ ಕಿಂ ತ್ವತ್ರಾನ್ಯೋನ್ಯಸಾಕ್ಷಿಣಃ ।
ಇತ್ಯೇವಂ ಚಿಂತಯನ್ ಶಬ್ದಂ ಜನಾನಾಂ ಸೋಽಶೃಣೋದ್ಬಹಿಃ ॥ ೬೬
ದದರ್ಶ ಪ್ರವಿಶಂತಂ ಚ ಸ್ವಸ್ಥಾನಸ್ಥಿತಾನುಗಮ್ ।
ಯುವಾನಮಭಿಪಶ್ಯಂತಂ ಸಖಡ್ಗಂ ಶಬರಾಧಿಪಮ್ ॥ ೬೭
ಕೇ ಯೂಯಮಿತಿ ಪೃಚ್ಛಂತಂ ಮತ್ವಾ ಗೃಹಪತಿಂ ಸ ತಮ್ ।
ಭೀತಃ ಪಾಂಥಾಃ ಸ್ಮ ಇತ್ಯಾಹ ವಿಷ್ಣುದತ್ತಃ ಪುಲಿಂದಪಮ್ ॥ ೬೮

೧೯–೨೦. ಆ ಬೇಡನು ಒಳಗೆ ಹೋಗಿ ಆ ಸ್ಥಿತಿಯಲ್ಲಿದ್ದ ತನ್ನ ಹೆಂಡತಿಯನ್ನು ನೋಡಿ ಅವಳ ಜೊತೆಯಲ್ಲಿ ಮಲಗಿದ್ದ ತರುಣನ ತಲೆಯನ್ನು ಕತ್ತಿಯಿಂದ ಕತ್ತರಿಸಿಹಾಕಿದನು. ತನ್ನ ಹೆಂಡತಿಯನ್ನು ಶಿಕ್ಷಿಸದೆ ಖಡ್ಗವನ್ನು ಒಂದು ಕಡೆ ಇಟ್ಟು ಮಂಚದ ಮೇಲೆ ನಿದ್ರಿಸಿದನು.

೨೧–೨೨. ಅದನ್ನು ದೀಪದ ಬೆಳಕಿನಲ್ಲಿ ನೋಡಿ ವಿಷ್ಣುದತ್ತನು ಚಿಂತಿಸಿದನು. ಅವನು ಹೆಂಡತಿಯನ್ನು ಹೆಂಗಸೆಂದು ಕೊಲ್ಲದೆ ತರುಣನನ್ನು ಕೊಂದನು. ಇದೇನೋ ಸರಿಯೇ. ಆದರೆ ಇಂತಹ ಕೆಲಸಮಾಡಿದ ಮೇಲೂ ಇವನು ಸುಖವಾಗಿ ನಿದ್ರಿಸುತ್ತಿದ್ದಾನಲ್ಲ! ಉದ್ರಿಕ್ತರಾದವರ ಪರಾಕ್ರಮ ವಿಚಿತ್ರವಾದುದೇ ಸರಿ.

೨೩–೨೪. ಎಂದು ವಿಷ್ಣುದತ್ತನು ಚಿಂತಿಸುತ್ತಿರುವಂತೆಯೇ ಆ ದುಷ್ಟ ಹೆಂಗಸು ಎಚ್ಚರಗೊಂಡು ತನ್ನ ಜಾರನು ಸತ್ತಿರುವುದನ್ನೂ ಗಂಡನು ನಿದ್ರಿಸುತ್ತಿರುವುದನ್ನೂ ಕಂಡಳು. ಅವಳು ಮೇಲೆದ್ದು ಆ ಜಾರನ ದೇಹವನ್ನು ಹೆಗಲಮೇಲೆ ಹಾಕಿಕೊಂಡು ಒಂದು ಕೈಯಲ್ಲಿ ಅವನ ತಲೆಯನ್ನು ಹಿಡಿದುಕೊಂಡು ಹೊರಗೆ ಹೋದಳು.

೨೫ ಹೊರಗೆ ಹೋಗಿ ಬೂದಿಯ ರಾಶಿಯಲ್ಲಿ ರುಂಡಮುಂಡಗಳನ್ನು ಹೂತಿಟ್ಟು ನಿಶ್ಚಿಂತೆಯಿಂದ ಹಿಂತಿರುಗಿ ಬಂದಳು.

---

ಸ ಚಾಂತಃ ಶಬರೋ ಗತ್ವಾ ದೃಷ್ಟ್ವಾ ಭಾರ್ಯಾಂ ತಥಾಸ್ಥಿತಾಮ್ ।
ಚಿಚ್ಛೇದ ತಸ್ಯ ಸುಪ್ತಸ್ಯ ತಜ್ಜಾರಸ್ಯಾಸಿನಾ ಶಿರಃ ॥ ೧೯
ಭಾರ್ಯಾ ತು ನಿಗೃಹೀತಾ ನ ತೇನ ಸಾ ನಾಪಿ ಬೋಧಿತಾ ।
ಭುವಿನ್ಯಸ್ತಾಸಿನಾನ್ಯತ್ರ ಪರ್ಯಂಕೇ ಸುಪ್ತಮೇವ ತು ॥ ೨೦
ತದ್‌ದೃಷ್ಟ್ವಾ ಸಪ್ರದೀಪೇಽತ್ರ ವಿಷ್ಣುದತ್ತೋ ವ್ಯಚಿಂತಯತ್ ।
ಯುಕ್ತಂ ಸ್ತ್ರೀತಿ ನ ಯದ್ಭಾರ್ಯಾ ಹತಾ ದಾರಹತೋ ಹತಃ ॥ ೨೧
ಕಿಂತು ಕೃತ್ವೇದೃಶಂ ಕರ್ಮ ಯದನೇನಾತ್ರ ಸುಪ್ಯತೇ ।
ವಿಸ್ರಬ್ಧಂ ತದಹೋ ಚಿತ್ರಂ ವೀರ್ಯಮುದ್ರಿಕ್ತಚೇತಸಾಮ್ ॥ ೨೨
ಇತ್ಯತ್ರ ಚಿಂತಯತ್ಯತ್ರ ವಿಷ್ಣುದತ್ತೇ ಪ್ರಬುಧ್ಯ ಸಾ ।
ಕುಸ್ತ್ರೀ ದದರ್ಶ ಜಾರಂ ಸ್ವಂ ಹತಂ ಸುಪ್ತಂ ಚ ತಂ ಪತಿಮ್ ॥ ೨೩
ಉತ್ಥಾಯ ಚ ಗೃಹೀತ್ವಾ ತತ್‌ಸ್ಕಂಧೇ ಜಾರಕಬಂಧಕಮ್ ।
ಹಸ್ತೇನೈಕೇನ ಚಾದಾಯ ತಚ್ಛಿರಃ ಸಾ ವಿನಿರ್ಯಯೌ ॥ ೨೪
ಗತ್ವಾ ಬಹಿಶ್ಚ ನಿಕ್ಷಿಪ್ಯ ಭಸ್ಮಕೂಟಾಂತರೇ ದ್ರುತಮ್ ।
ಕಬಂಧಂ ಸಶಿರಸ್ಕಂ ತಮಾಯಯೌ ನಿಭೃತಂ ತತಃ ॥ ೨೫

೭೭–೭೮. ವಿಷ್ಣುದತ್ತನೂ ಕೂಡ ಹೊರಗೆಹೋಗಿ ದೂರದಿಂದಲೇ ಅದೆಲ್ಲವನ್ನೂ ಕಂಡು ಒಳಗೆ ಬಂದು ಗೆಳೆಯರ ಮಧ್ಯದಲ್ಲಿ ತಾನೂ ಮಲಗಿದನು. ಆ ದುಷ್ಟ ಹೆಂಗಸೂ ಒಳಗೆ ಬಂದು ಅದೇ ಕತ್ತಿಯಿಂದ ಮಲಗಿರುವ ತನ್ನ ಗಂಡನ ತಲೆಯನ್ನು ಕತ್ತರಿಸಿಹಾಕಿದಳು. ಹೊರಗೆ ಬಂದು ಜೋರಾಗಿ ಬಡಿದುಕೊಳ್ಳುತ್ತಾ ಈ ಪ್ರಯಾಣಿಕರು ನನ್ನ ಗಂಡನನ್ನು ಕೊಂದುಹಾಕಿದ್ದಾರೆ ಎಂದು ತನ್ನ ಸೇವಕರನ್ನು ಕರೆದಳು.

೭೯–೮೦. ಆಗ ಅದನ್ನು ಕೇಳಿ ಸೇವಕರು ಓಡಿ ಬಂದು ತಮ್ಮ ಒಡೆಯನು ಸತ್ತುಹೋಗಿರುವುದನ್ನು ನೋಡಿ ಆಯುಧಗಳನ್ನು ಹಿಡಿದು ವಿಷ್ಣುದತ್ತ ಮೊದಲಾದವರನ್ನು ಹೊಡೆಯಲು ಓಡಿಬಂದರು. ಆಗ ವಿಷ್ಣುದತ್ತನ ಗೆಳೆಯರು ಭಯದಿಂದ ಎಚ್ಚರಗೊಂಡು ಇನ್ನೇನು ಏಟು ತಿನ್ನುವ ಸ್ಥಿತಿಯಲ್ಲಿದ್ದಾಗ ವಿಷ್ಣುದತ್ತನು ತಡಮಾಡದೆ ಆ ಸೇವಕರಿಗೆ ಹೇಳಿದನು.

---

ವಿಷ್ಣುದತ್ತಶ್ಚ ನಿರ್ಗತ್ಯ ಸರ್ವಂ ದೂರಾದ್ವಿಲೋಕ್ಯ ತತ್ ।
ಮಧ್ಯೇ ಸಖೀನಾಂ ಸುಪ್ತಾನಾಂ ಪ್ರವಿಶ್ಯಾಸೀತ್ತಥೈವ ಸಃ ॥ ೭೬
ಸಾ ಚಾಗತ್ಯ ಪ್ರವಿಶ್ಯಾಂತಃ ಪತ್ಯುಃ ಸುಪ್ತಸ್ಯ ದುರ್ಜನೀ ।
ತೇನೈವ ತತ್ಕೃಪಾಣೇನ ತಸ್ಯ ಮೂರ್ಧಾನಮಚ್ಛಿನತ್ ॥ ೭೭
ನಿರ್ಗತ್ಯ ಶ್ರಾವಯಂತೀ ಚ ಭೃತ್ಯಾನ್ ಶಬ್ದಂ ಚಕಾರ ಸಾ ।
ಹಾ ಹತಾಸ್ಮಿ ಹತೋ ಭರ್ತಾ ಮಮೈಭಿಃ ಪಥಿಕೈರಿತಿ ॥ ೭೮
ತತಃ ಪರಿಜನಾಃ ಶ್ರುತ್ವಾ ಪ್ರಧಾವ್ಯಾಲೋಕ್ಯ ತಂ ಪ್ರಭುಮ್ ।
ಹತಂ ತಾನ್ ವಿಷ್ಣುದತ್ತಾದೀನ್ ಅಭ್ಯಧಾವನ್ನುದಾಯುಧಾಃ ॥ ೭೯
ಏತೈಶ್ಚಾಹನ್ಯಮಾನೇಷು ತೇಷು ತ್ರಸ್ತೋತ್ಥಿತೇಷ್ವಥ ।
ಅನ್ಯೇಷು ತತ್ಸಹಾಯೇಷು ವಿಷ್ಣುದತ್ತೋಽಬ್ರವೀತ್ ದ್ರುತಮ್ ॥ ೮೦

೮೧–೮೫. "ಸಾಕು ನಿಲ್ಲಿಸಿ. ನಮ್ಮನ್ನು ಕೊಂದು ನೀವು ಬ್ರಹ್ಮಹತ್ಯಾಪಾತಕಿಗಳಾಗಬೇಡಿ. ಈ ಕೆಲಸ ನಾವು ಮಾಡಿದ್ದಲ್ಲ. ಈ ದುಷ್ಟಹೆಂಗಸು ಬೇರೆಯವನೊಡನೆ ಸೇರಿದ್ದರಿಂದ ತನ್ನ ಗಂಡನನ್ನು ಕೊಂದಿದ್ದಾಳೆ. ನಾನು ಸ್ವಲ್ಪ ತೆರೆದಿದ್ದ ಬಾಗಿಲಿನ ಸಂದಿನಿಂದ ನಡೆದುದೆಲ್ಲವನ್ನೂ ನೋಡಿದ್ದೇನೆ. ನೀವು ಕ್ಷಮಿಸುವುದಾದರೆ ಹೇಳುತ್ತೇನೆ ಎಂದು ನುಡಿದು ವಿಷ್ಣುದತ್ತನು ಶಬರರಿಗೆ ಎಲ್ಲ ವಿಷಯವನ್ನೂ ತಿಳಿಸಿ ಹೊರಗೆ ಕರೆದುಕೊಂಡು ಹೋಗಿ ಆಗ ತಾನೇ ಕೊಂದು ಅವಳು ಬೂದಿಯ ರಾಶಿಯಲ್ಲಿ ಹೂತು ಹಾಕಿದ್ದ ರುಂಡಮುಂಡಗಳನ್ನು ತೋರಿಸಿದನು.

೮೫–೮೭. ಇದರಿಂದ ಅವಳ ಮುಖವು ವಿವರ್ಣವಾಗಿ ಅವಳು ತನ್ನ ತಪ್ಪನ್ನು ಒಪ್ಪಿಕೊಂಡಳು. ಆ ದುಷ್ಟೆಯನ್ನು ತಿರಸ್ಕರಿಸಿ ಅವರು ಹೀಗೆಂದರು : 'ಕಾಮಾಂಧಳಾದ ಹೆಣ್ಣು ನಿಸ್ಸಂಕೋಚದಿಂದ ಇಂತಹ ದುಸ್ಸಾಹಸ ಕಾರ್ಯವನ್ನು ಮಾಡುತ್ತಾಳೆ. ಪರಪುರುಷನ ಸಹವಾಸ ಮಾಡಿದವಳು ಯಾರನ್ನು ತಾನೇ ಕೊಲ್ಲುವುದಿಲ್ಲ ಎಂದು ಭಾವಿಸಿ ಆ ಪರಿಜನರು ವಿಷ್ಣುದತ್ತ ಮೊದಲಾದವರನ್ನು ಬಿಡುಗಡೆ ಮಾಡಿದರು. ಉಳಿದ ಏಳು ಜನರು ವಿಷ್ಣುದತ್ತನನ್ನು ಹೊಗಳಿದರು.

---

ಅಲಂ ವೋ ಬ್ರಹ್ಮಹತ್ಯಾಭಿಃ ನೈವಾಸ್ಮಾಭಿರಿದಂ ಕೃತಮ್ ।
ಏತಯೈವ ಕೃತಂ ಹ್ಯೇತತ್ ಕುಸ್ತ್ರಿಯಾನ್ಯಪ್ರಸಕ್ತಯಾ ॥ ೮೧
ಮಯಾ ಚಾಪಾವೃತದ್ವಾರಮಾರ್ಗೇಣಾಮೂಲಮೀಕ್ಷಿತಮ್ ।
ನಿರ್ಗತ್ಯ ಚ ಬಹಿರ್ದೃಷ್ಟಂ ಕ್ಷಮಧ್ವಂ ಯದಿ ವಚ್ಮಿ ತತ್ ॥ ೮೨
ಇತ್ಯುಕ್ತ್ವಾ ತಾನ್ ಸ ಶಬರಾನ್ ವಿಷ್ಣುದತ್ತೋ ನಿವಾರ್ಯ ಚ ।
ತೇಭ್ಯೋ ನಿಃಶೇಷಮಾಮೂಲಾತ್ ವೃತ್ತಾಂತಂ ತಮವರ್ಣಯತ್ ॥ ೮೩
ನೀತ್ವಾ ಚಾದರ್ಶಯತ್ತೇಷಾಂ ಕಬಂಧಂ ಚ ಶಿರೋಽನ್ವಿತಮ್ ।
ಸದ್ಯೋ ಹತಂ ತಯಾ ಕ್ಷಿಪ್ತಂ ಸ್ತ್ರಿಯಾ ತಸ್ಮಿನ್ನವಸ್ಕರೇ ॥ ೮೪
ತತಃ ಸ್ವೇನ ವಿವರ್ಣೇನ ಮುಖೇನಾಂಗೀಕೃತೇ ತಯಾ ।
ಕುಲಟಾಂ ತಾಂ ತಿರಸ್ಕೃತ್ಯ ಸರ್ವೇ ತತ್ರೈವಮಬ್ರುವನ್ ॥ ೮೫
ಸ್ಮರಾಕೃಷ್ಟಾ ತನೋತ್ಯೇವ ಯಾ ಸಾಹಸಮಶಂಕಿತಾ ।
ಸಾ ಪರಸ್ವೀಕೃತಾ ಕುಸ್ತ್ರೀ ಕೃಪಾಣೀವ ನ ಹಂತಿ ಕಮ್ ॥ ೮೬
ಇತ್ಯುಕ್ತ್ವಾ ವಿಷ್ಣುದತ್ತಾದೀನ್ ಸರ್ವಾಂಸ್ತೇ ಮುಮುಚುಸ್ತತಃ ।
ವಿಷ್ಣುದತ್ತಂ ಚ ಸಪ್ತಾನ್ಯೇ ಸಹಾಯಾಸ್ತೇಽಥ ತುಷ್ಟುವುಃ ॥ ೮೭

೮೮-೮೯. ನಾವು ಮಲಗಿದ್ದಾಗ ನೀನು ರಕ್ಷಣೆಯ ದೀಪದಂತೆ ಇದ್ದುಬಿಟ್ಟೆ. ನಿನ್ನ ಅನುಗ್ರಹದಿಂದ ನಾವು ಅಕಾಲಮರಣದಿಂದ ಪಾರಾದೆವು ಎಂದು ಪ್ರಶಂಸೆ ಮಾಡಿ ಅವನಿಗೆ ಕೆಟ್ಟ ಮಾತನ್ನು ಆಡದೆ ನಮಸ್ಕಾರವನ್ನೂ ಮಾಡಿ ಮಾರನೆಯ ದಿನ ಬೆಳಿಗ್ಗೆ ತಮ್ಮ ಕೆಲಸಮಾಡಲು ಹೊರಟರು.

೯೦. ಹೀಗೆ ಕೌಶಾಂಬಿಯಲ್ಲಿ ಸೋಮಪ್ರಭೆಯು ಕಳಿಂಗಸೇನೆಗೆ ಹೇಳಿ ಮತ್ತೆ ಹೀಗೆ ನುಡಿದಳು.

---

ರಕ್ಷಾರತ್ನಪ್ರದೀಪಸ್ತ್ವಂ ಜಾತೋ ನಃ ಸ್ವಪತಾಂ ನಿಶಿ ।
ತ್ವತ್ಪ್ರಸಾದೇನ ತೀರ್ಣಾಃ ಸ್ಮೋ ಮೃತ್ಯುಮದ್ಯಾನಿಮಿತ್ತಜಮ್ ॥ ೮೮
ಸ್ತುತ್ವೈವಂ ವಿಷ್ಣುದತ್ತಂ ತಂ ಶಮಯಿತ್ವಾ ಚ ದುರ್ವಚಃ ।
ಪ್ರಣತಾಸ್ತೇ ಯಯುಃ ಪ್ರಾತಃ ಸ್ವಕಾರ್ಯಾಯೈವ ತದ್ಯುತಾಃ ॥ ೮೯
ಇತ್ಥಂ ಕಲಿಂಗಸೇನಾಯಾಃ ಕಥಯಿತ್ವಾ ಕಥಾಂ ಮಿಥಃ ।
ಸೋಮಪ್ರಭಾ ಸಾ ಕೌಶಾಂಬ್ಯಾಂ ಸಖೀ ಪುನರುವಾಚ ತಾಮ್ ॥ ೯೦

೯೧–೯೭. ಸಖಿಯೇ, ಹೀಗೆ ಕೆಲಸದಲ್ಲಿ ತೊಡಗಿದವರಿಗೆ ಅಪಶಕುನವು ಅದನ್ನು ವಿಳಂಬಮಾಡುವುದು ಮುಂತಾದ ಉಪಾಯಗಳಿಂದ ಅದನ್ನು ತಡೆಯದಿದ್ದರೆ ಅದು ಅನಿಷ್ಟಕ್ಕೆ ಕಾರಣವಾಗುತ್ತದೆ. ತಿಳಿದವರ ಮಾತನ್ನು ತಿರಸ್ಕರಿಸಿ ರಭಸದಿಂದ ಮುನ್ನುಗ್ಗುವ ಮಂದಮತಿಗಳು ಅನಂತರ ಪಶ್ಚಾತ್ತಾಪ ಪಡುತ್ತಾರೆ. ಆದ್ದರಿಂದ ಅಪಶಕುನವಾದಾಗ ನೀನು ವತ್ಸರಾಜನ ಬಳಿಗೆ ನಿನ್ನ ಪರವಾಗಿ ದೂತನ್ನು ಕಳಿಸಿದುದು ಸರಿಯಲ್ಲ. ವಿಧಿಯು ನಿನ್ನ ವಿವಾಹವನ್ನು ನಿರ್ವಿಘ್ನವಾಗಿ ನೆರವೇರಿಸಲಿ. ಮನೆಯಿಂದ ಕೆಟ್ಟ ಲಗ್ನದಲ್ಲಿ ಹೊರಬಂದುದರಿಂದ ವಿವಾಹವೂ ಮುಂದಕ್ಕೆ ಹೋಯಿತು. ದೇವತೆಗಳೂ ನಿನ್ನಲ್ಲಿ ಮನಸ್ಸಿಡಬಹುದು. ಈ ವಿಷಯವನ್ನು ನಿನ್ನಲ್ಲೇ ಇಟ್ಟುಕೋ. ನೀತಿನಿಪುಣನಾದ ಮಂತ್ರಿ ಯೌಗಂಧರಾಯಣನು ರಾಜನಿಗೆ ನಿನ್ನಲ್ಲಿ ಅತ್ಯಂತ ಮೋಹವುಂಟಾಗಬಹುದೆಂದು ಶಂಕಿಸಿ ವಿವಾಹಕ್ಕೆ ಅಡ್ಡಿ ಮಾಡಬಹುದು. ಮದುವೆಯಾದ ಮೇಲೂ ನಿನ್ನಲ್ಲಿ ಯಾವುದಾದರೂ ತಪ್ಪನ್ನು ಅವನು ತೋರಿಸಬಹುದು. ಧಾರ್ಮಿಕನಾಗಿರುವುದರಿಂದ ಅವನು ಆ ತಪ್ಪನ್ನು ಮಾಡಲಾರ. ಆದರೆ ನೀನು ಸವತಿಯ ಬಗ್ಗೆಯೂ ಯೋಚನೆ ಮಾಡಬೇಕು. ಈ ಸಂದರ್ಭದಲ್ಲಿ ಒಂದು ಕಥೆ ಹೇಳುತ್ತೇನೆ ಕೇಳು.

---

ಏವಂ ಕಾರ್ಯಪ್ರವೃತ್ತಾನಾಮನಿಮಿತ್ತಮುಪಸ್ಥಿತಮ್ ।
ವಿಲಂಬಾದ್ಯಪ್ರತಿಹತಂ ಸಖ್ಯನಿಷ್ಟಂ ಪ್ರಯಚ್ಛತಿ ॥ ೯೧
ತತಶ್ಚಾತ್ತಾನುತಪ್ಯಂತೇ ಪ್ರಾಜ್ಞವಾಕ್ಯಾವಮಾನಿನಃ ।
ಪ್ರವರ್ತಮಾನಾ ರಭಸಾತ್ ಪರ್ಯಂತೇ ಮಂದಬುದ್ಧಯಃ ॥ ೯೨
ಅತೋಽಶುಭೇ ನಿಮಿತ್ತೇ ಹ್ಯೋ ವತ್ಸೇಶಂ ಪ್ರತಿ ಯತ್ತ್ವಯಾ ।
ಆತ್ಮಗ್ರಹಾಯ ಪ್ರಹಿತೋ ದೂತೋ ಯುಕ್ತಂ ನ ತತ್ಕೃತಮ್ ॥ ೯೩
ತದವಿಘ್ನಂ ವಿವಾಹಂ ಚ ವಿದಧಾತು ವಿಧಿಸ್ತವ ।
ಕುಲಗ್ನೇನಾಗತಾ ಗೇಹಾದ್ವಿವಾಹಸ್ತೇನ ದೂರತಃ ॥ ೯೪
ದೇವಾ ಅಪಿ ಚ ಲುಭ್ಯಂತಿ ತ್ವಯಿ ರಕ್ಷ್ಯಮಿದಂ ತತಃ ।
ಚಿಂತ್ಯಶ್ಚ ನೀತಿನಿಪುಣೋ ಮಂತ್ರೀ ಯೌಗಂಧರಾಯಣಃ ॥ ೯೫
ರಾಜವ್ಯಸನಶಂಕೀ ಸನ್ ಸೋಽತ್ರ ವಿಘ್ನಂ ಸಮಾಚರೇತ್ ।
ವಿಹಿತೇಽಪಿ ವಿವಾಹೇ ವಾ ದೋಷಮುತ್ಪಾದಯೇತ್ತವ ॥ ೯೬
ಧಾರ್ಮಿಕಃ ಸನ್ನ ಕುರ್ಯಾದ್ವಾ ದೋಷಂ ತದಪಿ ತೇ ಸಖಿ ।
ಸಪತ್ನೀ ಸರ್ವಥಾ ಚಿಂತ್ಯಾ ಕಥಾಂ ವಚ್ಮ್ಯತ್ರ ತೇ ಶೃಣು ॥ ೯೭

೯೮. ಇಕ್ಷುಮತೀ ಎಂಬ ಊರು ಇದೆ. ಅದರ ಪಕ್ಕದಲ್ಲಿ ಅದೇ ಹೆಸರಿನ ನದಿಯೊಂದಿದೆ. ವಿಶ್ವಾಮಿತ್ರನು ಅವೆರಡನ್ನೂ ಸೃಷ್ಟಿಸಿದನು.

೯೯. ಅದರ ಸಮೀಪದಲ್ಲಿ ಒಂದು ದೊಡ್ಡ ಕಾಡು ಇದೆ. ಅಲ್ಲಿ ಮಂಕಣಕ ಎಂಬ ಋಷಿಯು ಕಾಲುಗಳನ್ನು ಮೇಲೆ ಮಾಡಿಕೊಂಡು ತಪಸ್ಸು ಮಾಡಿದ.

೧೦೦. ಅವನು ತಪಸ್ಸು ಮಾಡುತ್ತಿದ್ದಾಗ ಆಕಾಶದಿಂದ ಮೇನಕಾ ಎಂಬ ಅಪ್ಸರೆ ಇಳಿದು ಬಂದಳು. ಗಾಳಿಯಿಂದ ಅವಳ ಬಟ್ಟೆ ಹಾರುತ್ತಿತ್ತು. ಮುನಿಯು ಅವಳನ್ನು ನೋಡಿದನು.

೧೦೧. ಕಾಮಪೀಡಿತನಾದ ಆ ಋಷಿಯ ವೀರ್ಯ ಬಾಳೇಮರದ ಒಳಭಾಗದಲ್ಲಿ (ಕದಲೀಗರ್ಭ) ಸುರಿಯಿತು.

೧೦೨. ಕೂಡಲೇ ಅಲ್ಲಿ ಒಬ್ಬ ಸರ್ವಾಂಗಸುಂದರಿಯ ಜನನವಾಯಿತು. ಮಹರ್ಷಿಗಳ ಅಮೋಘವಾದ ವೀರ್ಯವು ಕೂಡಲೇ ಫಲಿಸುತ್ತದೆ.

೧೦೩. ಕದಲೀಗರ್ಭದಲ್ಲಿ ಜನಿಸಿದ್ದರಿಂದ ತಂದೆಯಾದ ಮಂಕಣಕ ಮುನಿಯು ಅವಳಿಗೆ ಕದಳೀಗರ್ಭಾ ಎಂದೇ ಹೆಸರಿಟ್ಟನು.

೧೦೪. ಹಿಂದೆ ರಂಭೆಯ ದರ್ಶನದಿಂದ ಸುರಿದ ವೀರ್ಯದಿಂದ ಜನಿಸಿದ ದ್ರೋಣಪತ್ನೀ ಕೃಪಿಯು ಗೌತಮರ ಆಶ್ರಮದಲ್ಲಿ ಬೆಳೆದಂತೆ ಇವಳೂ ಆ ಋಷಿಯ ಆಶ್ರಮದಲ್ಲಿ ಬೆಳೆದಳು.

---

ಅಸ್ತೀಹೇಕ್ಷುಮತೀ ನಾಮ ಪುರೀ ತಸ್ಯಾಶ್ಚ ಪಾರ್ಶ್ವತಃ ।
ನದೀ ತದಭಿಧಾನೈವ ವಿಶ್ವಾಮಿತ್ರಕೃತೇ ಉಭೇ ॥ ೯೮
ತತ್ಸಮೀಪೇ ಮಹಚ್ಚಾಸ್ತಿ ವನಂ ತತ್ರ ಕೃತಾಶ್ರಮಃ ।
ಊರ್ಧ್ವಪಾದಸ್ತಪಶ್ಚಕ್ರೇ ಮುನಿರ್ಮಂಕಣಕಾಭಿಧಃ ॥ ೯೯
ತಪಸ್ಯತಾ ಚ ತೇನಾತ್ರ ಗಗನೇನಾಗತಾಪ್ಸರಾಃ ।
ಅದರ್ಶಿ ಮೇನಕಾ ನಾಮ ವಾತೇನ ಚಲಿತಾಂಬರಾ ॥ ೧೦೦
ತತೋ ಲಬ್ಧಾವಕಾಶೇನ ಕಾಮೇನ ಕ್ಷೋಭಿತಾತ್ಮನಃ ।
ನೂತನೇ ಕದಲೀಗರ್ಭೇ ವೀರ್ಯಂ ತಸ್ಯಾಪತನ್ಮುನೇಃ ॥ ೧೦೧
ಜಜ್ಞೇ ತತಶ್ಚ ಕನ್ಯಾ ಸಾ ಸದ್ಯಃ ಸರ್ವಾಂಗಸುಂದರೀ ।
ಅಮೋಘಂ ಹಿ ಮಹರ್ಷೀಣಾಂ ವೀರ್ಯಂ ಫಲತಿ ತತ್ಕ್ಷಣಮ್ ॥ ೧೦೨
ಸಂಭೂತಾ ಕದಲೀಗರ್ಭೇ ಯಸ್ಮಾತ್ ತಸ್ಮಾಚ್ಚಕಾರ ತಾಮ್ ।
ನಾಮ್ನಾ ಸ ಕದಲೀಗರ್ಭಾಂ ಪಿತಾ ಮಂಕಣಕೋ ಮುನಿಃ ॥ ೧೦೩
ತಸ್ಯಾಶ್ರಮೇ ಸಾ ವವೃಧೇ ಗೌತಮಸ್ಯ ಕೃಪೀ ಯಥಾ ।
ದ್ರೋಣಭಾರ್ಯಾ ಪುರಾ ರಂಭಾದರ್ಶನಚ್ಯುತವೀರ್ಯಜಾ ॥ ೧೦೪

೧೦೫. ಒಮ್ಮೆ ಮಧ್ಯದೇಶದ ರಾಜನಾದ ದೃಢವರ್ಮನು ಕುದುರೆಯ ಮೇಲೆ ಬೇಟೆಯಾಡುತ್ತಾ ಇದ್ದಾಗ ಕುದುರೆಯು ಅವನನ್ನು ದೂರ ಒಯ್ದಿದ್ದರಿಂದ ಈ ಆಶ್ರಮಕ್ಕೆ ಬಂದನು.

೧೦೬. ಋಷಿಕನ್ಯೆಗೆ ಉಚಿತವಾದ ನಾರು ಬಟ್ಟೆಯನ್ನುಟ್ಟು ಅತ್ಯಂತ ಶೋಭಾಯಮಾನಳಾಗಿದ್ದ ಕದಳೀಗರ್ಭೆಯನ್ನು ಅವನು ನೋಡಿದನು.

೧೦೭. ತನ್ನನ್ನು ನೋಡಿದ ರಾಜನ ಹೃದಯವನ್ನು ಅವನ ಅಂತಃಪುರದ ಯಾವ ಸ್ತ್ರೀಯೂ ಪ್ರವೇಶಿಸದ ರೀತಿಯಲ್ಲಿ ಅವಳು ಪ್ರವೇಶಿಸಿದಳು.

೧೦೮-೧೦೯. ದುಷ್ಯಂತನು ಕಣ್ವಮಹರ್ಷಿಯ ಮಗಳು ಶಕುಂತಲೆಯನ್ನು ಪಡೆದಂತೆ ನಾನೂ ಸಹ ಒಬ್ಬ ಋಷಿಯ ಮಗಳಾದ ಇವಳನ್ನು ಹೆಂಡತಿಯನ್ನಾಗಿ ಪಡೆಯಲು ಸಾಧ್ಯವೇ ಎಂದು ಯೋಚಿಸುತ್ತಿರುವಾಗ ಸಮಿತ್ತು ಮತ್ತು ದರ್ಭೆಯನ್ನು ಆರಿಸಿಕೊಂಡು ಬರುತ್ತಿದ್ದ ಮಂಕಣಕ ಋಷಿಯನ್ನು ರಾಜನು ನೋಡಿದನು.

೧೧೦. ವಾಹನದಿಂದ ಇಳಿದು ಋಷಿಯ ಪಾದಗಳಿಗೆ ವಂದಿಸಿದನು. ಮುನಿಯ ಪ್ರಶ್ನೆಗೆ ಉತ್ತರವಾಗಿ ತನ್ನ ಪರಿಚಯವನ್ನು ಹೇಳಿಕೊಂಡನು.

೧೧೧. ಆಗ ಋಷಿಯು ಕದಳೀಗರ್ಭೆಯನ್ನು ಕುರಿತು "ಅತಿಥಿಯಾಗಿ ಬಂದಿರುವ ರಾಜನಿಗೆ ಅರ್ಘ್ಯವನ್ನು ಸಿದ್ಧಪಡಿಸು' ಎಂದು ಅಪ್ಪಣೆ ಮಾಡಿದನು.

---

ಏಕದಾ ಚ ವಿವೇಶೈಕಮಾಶ್ರಮಂ ಮೃಗಯಾರಸಾತ್ ।
ದೃಢವರ್ಮಾ ಹೃತೋಽಶ್ವೇನ ಮಧ್ಯದೇಶಭವೋ ನೃಪಃ ॥ ೧೦೫
ಸತಾಂ ದದರ್ಶ ಕದಲೀಗರ್ಭಾಂ ಪ್ರಾವೃತವಲ್ಕಲಾಮ್ ।
ಮುನಿಕನ್ಯೋಚಿತೇನಾತ್ರ ವೇಷೇಣಾತ್ಯಂತಶೋಭಿತಾಮ್ ॥ ೧೦೬
ಸಾ ಚ ದೃಷ್ಟಾಸ್ಯ ನೃಪತೇಃ ಸ್ವೀಚಕ್ರೇ ಹೃದಯಂ ತಥಾ ।
ಯಥಾವಕಾಶೋಽಪಿ ಹೃತಸ್ತತ್ರಾಂತಃಪುರಯೋಷಿತಾಮ್ ॥ ೧೦೭
ಅಪೀಮಾಂ ಪ್ರಾಪ್ನುಯಾಂ ಭಾರ್ಯಾಂ ಕಸ್ಯಾಪೀಹ ಸುತಾಮೃಷೇಃ ।
ದುಷ್ಯಂತ ಇವ ಕಣ್ವಸ್ಯ ಮುನೇಃ ಕನ್ಯಾಂ ಶಕುಂತಲಾಮ್ ॥ ೧೦೮
ಇತಿ ಸಂಚಿಂತಯನ್ನೇವ ಸಂಗೃಹೀತಸಮಿತ್ಕುಶಮ್ ।
ಸೋಽತ್ರಾಪಶ್ಯತ್ ತಮಾಯಾಂತಂ ಮುನಿಂ ಮಂಕಣಕಂ ನೃಪಃ ॥ ೧೦೯
ವವಂದೇ ಚೈನಮಭ್ಯೇತ್ಯ ಪಾದಯೋರ್ಮುಕ್ತವಾಹನಃ ।
ಪೃಷ್ಟಶ್ಚಾತ್ಮಾನಮೇತಸ್ಮೈ ಮುನಯೇ ಸ ನ್ಯವೇದಯತ್ ॥ ೧೧೦
ತತಃ ಸ ಕದಲೀಗರ್ಭಾಂ ಮುನಿರಾದಿಶತಿ ಸ್ಮ ತಾಮ್ ।
ವತ್ಸೇ ರಾಜ್ಞೋಽತಿಥೇರಸ್ಯ ತ್ವಯಾರ್ಘ್ಯಂ ಕಲ್ಪ್ಯತಾಮಿತಿ ॥ ೧೧೧

೧೧೨. ವಿನಮ್ರಳಾದ ಅವಳಿಂದ ಆತಿಥ್ಯವನ್ನು ಪಡೆದ ರಾಜನು ನಿಮಗೆ ಈ ಕನ್ಯೆಯು ದೊರಕಿದ್ದು ಹೇಗೆ ಎಂದು ಋಷಿಯನ್ನು ಕೇಳಿದನು.

೧೧೩. ಆಗ ಋಷಿಯು ಅವಳು ಹುಟ್ಟಿದ ಬಗೆಯನ್ನೂ ಅನ್ವರ್ಥವಾದ ಅವಳ ಹೆಸರನ್ನೂ ರಾಜನಿಗೆ ತಿಳಿಸಿದನು.

೧೧೪. ಅದರಿಂದ ಆ ಕನ್ಯೆಯು ಮೇನಕೆಯ ಮಾನಸಜಾತಳೂ ಅಪ್ಸರೆಯೂ ಹೌದೆಂದು ಭಾವಿಸಿ ರಾಜನು ಅವಳನ್ನು ತನಗೆ ಕೊಡುವಂತೆ ಋಷಿಯನ್ನು ಬೇಡಿದನು.

೧೧೫. ಆ ಋಷಿಯು ಮಗಳಾದ ಕದಳೀಗರ್ಭೆಯನ್ನು ರಾಜನಿಗೆ ಕೊಟ್ಟನು. ಪೂರ್ವಜರ ಅಲೌಕಿಕವಾದ ನಡುವಳಿಕೆಯನ್ನು ವಿಮರ್ಶಿಸಬಾರದು.

೧೧೬. ಆ ವಿಷಯವನ್ನು ತಮ್ಮ ಪ್ರಭಾವದಿಂದ ತಿಳಿದ ಅಪ್ಸರೆಯರು ಮೇನಕೆಯ ಮೇಲಿನ ಪ್ರೀತಿಯಿಂದ ಅಲ್ಲಿಗೆ ಬಂದು ಕದಳೀಗರ್ಭೆಗೆ ಮದುಮಗಳ ಅಲಂಕಾರವನ್ನು ಮಾಡಿದರು.

೧೧೭-೧೧೮. ಅವಳ ಕೈಗೆ ಸಾಸಿವೆ ಕಾಳುಗಳನ್ನು ಕೊಟ್ಟು ಹೇಳಿದರು. "ನೀನು ದಾರಿಯಲ್ಲಿ ಹೋಗುತ್ತಾ ಗುರುತಿಗಾಗಿ ಈ ಕಾಳುಗಳನ್ನು ಚೆಲ್ಲು. ಒಂದು ವೇಳೆ ಗಂಡನ ತಿರಸ್ಕಾರದಿಂದ ನೀನು ಇಲ್ಲಿಗೆ ಬರಲು ಇಚ್ಛಿಸಿದರೆ ಹುಟ್ಟಿಕೊಂಡ ಈ ಕಾಳುಗಳಿಂದ ಮಾರ್ಗವನ್ನು ತಿಳಿಯುತ್ತೀಯೆ' ಎಂದರು.

---

ತಥೇತಿ ಕಲ್ಪಿತಾತಿಥ್ಯಸ್ತಯಾ ರಾಜಾ ಸ ನಮ್ರಯಾ ।
ಈದೃಕ್ಕುತಸ್ತೇ ಕನ್ಯೇಯಮಿತಿ ಪಪ್ರಚ್ಛ ತಂ ಮುನಿಮ್ ॥ ೧೧೨
ಮುನಿಶ್ಚ ಸ ತತಸ್ತಸ್ಯಾಃ ತಾಮುತ್ಪತ್ತಿಂ ಚ ನಾಮ ಚ ।
ಅನ್ವರ್ಥಂ ಕದಲೀಗರ್ಭೇತ್ಯಸ್ಮೈ ರಾಜ್ಞೇ ನ್ಯವೇದಯತ ॥ ೧೧೩
ತತಸ್ತಾಂ ಸ ಮುನೇಃ ಕನ್ಯಾಂ ಮೇನಕಾಭಾವನೋದ್ಭವಾಮ್ ।
ಮತ್ವಾಪ್ಸರಸಮುತ್ಪುತ್ಕೋ ರಾಜಾ ತಸ್ಮಾದಯಾಚತ ॥ ೧೧೪
ಸೋಽಪ್ಯೇತಾಂ ಕದಲೀಗರ್ಭಾಂ ದದೌ ತಸ್ಮೈ ಸುತಾಮೃಷಿಃ ।
ದಿವ್ಯಾನುಭಾವಂ ಪೂರ್ವೇಷಾಮವಿಚಾರ್ಯಂ ಹಿ ಚೇಷ್ಟಿತಮ್ ॥ ೧೧೫
ತಚ್ಚ ಬುಧ್ವಾ ಪ್ರಭಾವೇಣ ತತ್ರಾಭ್ಯೇತ್ಯ ಸುರಾಂಗನಾಃ ।
ಮೇನಕಾ ಪ್ರೀತಿತಸ್ತಸ್ಯಾಃ ಚಕ್ರುರುದ್ವಾಹಮಂಡನಮ್ ॥ ೧೧೬
ದತ್ವಾ ಚ ಸರ್ಷಪಾನ್ ಹಸ್ತೇ ಜಗದುಸ್ತಾಂ ತದೈವ ತಾಃ ।
ಯಾಂತೀ ಮಾರ್ಗೇ ವಪಸ್ವೈತಾನ್ ತ್ವಮಭಿಜ್ಞಾನಸಿದ್ಧಯೇ ॥ ೧೧೭
ಯದಿ ಭರ್ತ್ರಾ ಕೃತಾವಜ್ಞಾ ಕದಾಚಿತ್ ತ್ವಮಿಹೈಷ್ಯಸಿ ।
ತಜ್ಜಾತೈರೇಭಿರಾಯಾಂತೀ ಪಂಥಾನಂ ಪುತ್ರಿ ವೇತ್ಸ್ಯಸಿ ॥ ೧೧೮

೧೧೯-೧೨೦. ಅವರು ಹೀಗೆ ಹೇಳಿದ ಮೇಲೆ ವಿವಾಹವಾದ ಆ ಕದಳೀಗರ್ಭೆಯನ್ನು ರಾಜನು ಕುದುರೆಯ ಮೇಲೆ ಕೂರಿಸಿಕೊಂಡು ಅಲ್ಲಿಂದ ಹೊರಟನು. ಸೈನಿಕರು ಹಿಂಬಾಲಿಸುತ್ತಿದ್ದರು. ಸಾಸುವೆ ಕಾಳುಗಳನ್ನು ಚೆಲ್ಲುತ್ತಿದ್ದ ಅವಳ ಜೊತೆಯಲ್ಲಿ ರಾಜನು ತನ್ನ ರಾಜಧಾನಿಗೆ ಬಂದನು.

೧೨೧-೧೨೨. ಅಲ್ಲಿ ನಡೆದ ಘಟನೆಯನ್ನು ಮಂತ್ರಿಗಳಿಗೆ ತಿಳಿಸಿದನು. ನಂತರ ಇತರ ಪತ್ನಿಯರನ್ನು ಬಿಟ್ಟು ಕದಲೀಗರ್ಭೆಯ ಜೊತೆಯಲ್ಲೇ ಇರಲು ಪ್ರಾರಂಭಿಸಿದನು. ಇದರಿಂದ ದುಃಖಗೊಂಡ ಮಹಾರಾಣಿಯು ಮಂತ್ರಿಯನ್ನು ಗುಟ್ಟಾಗಿ ಕರೆದು ತಾನು ಅವನಿಗೆ ಉಪಕಾರ ಮಾಡಿದ್ದನ್ನು ನೆನಪಿಸಿ ಹೀಗೆಂದಳು:

೧೨೩. ""ರಾಜನು ನೂತನ ಪತ್ನಿಯಲ್ಲೇ ಆಸಕ್ತನಾಗಿ ನನ್ನನ್ನು ತ್ಯಜಿಸಿದ್ದಾನೆ. ನನ್ನ ಈ ಹೊಸ ಸವತಿಯು ಹಿಂದಿರುಗಿ ಹೋಗುವ ಹಾಗೆ ಏನಾದರೂ ಮಾಡು" ಎಂದಳು.

---

ಇತ್ಯುಕ್ತಾಂ ತಾಭಿರಾರೋಪ್ಯ ಕೃತೋದ್ವಾಹಾಂ ಸ್ವವಾಜಿನಿ ।
ಸ ರಾಜಾ ಕದಲೀಗರ್ಭಾಂ ದೃಢವರ್ಮಾ ಯಯೌ ತತಃ ॥ ೧೧೯
ಪ್ರಾಪ್ತಾನ್ವಾಗತಸೈನ್ಯೋಽಥ ವಪಂತ್ಯಾ ಸರ್ಷಪಾನ್ ಪಥಿ ।
ವಧ್ವಾ ತಯಾ ಸಹ ಪ್ರಾಪ ರಾಜಧಾನೀಂ ನಿಜಾಂ ಚ ಸಃ ॥ ೧೨೦
ತತ್ರಾನ್ಯಪತ್ನೀವಿಮುಖಃ ಕದಲೀಗರ್ಭಯಾ ತಯಾ ।
ಸಮಂ ಸ ತಸ್ಥಾವಾಖ್ಯಾತತದ್‌ವೃತ್ತಾಂತಃ ಸ್ವಮಂತ್ರಿಷು ॥ ೧೨೧
ತತಸ್ತಸ್ಯ ಮಹಾದೇವೀ ತದೀಯಂ ಮಂತ್ರಿಣಂ ರಹಃ ।
ಸ್ಮಾರಯಿತ್ವೋಪಕಾರಾನ್ ಸ್ವಾನ್ ಜಗಾದಾತ್ಯಂತದುಃಖಿತಾ ॥ ೧೨೨
ರಾಜ್ಞಾ ನೂತನಭಾರ್ಯೈಕಸಕ್ತೇನಾದ್ಯಾಹಮುಜ್ಝಿತಾ ।
ತತ್ತಥಾ ಕುರು ಯೇನೈಷಾ ಸಪತ್ನೀ ಮೇ ನಿವರ್ತತೇ ॥ ೧೨೩

೧೨೪–೧೨೬. ಅದನ್ನು ಕೇಳಿ ಮಂತ್ರಿಯು ಹೀಗೆಂದನು : "ದೇವಿ, ರಾಜನ ಪತ್ನಿಯನ್ನು ಕೊಲ್ಲುವುದು ಅಥವಾ ದೂರಮಾಡುವುದು ನನ್ನಂಥವರಿಗೆ ಸಾಧ್ಯವಿಲ್ಲ. ಇದು ಅಂತಹ ಪ್ರಯೋಗಗಳನ್ನು ಮಾಡುವ ಹಾಗೂ ಅಂತಹವರೊಡನೆ ಸಂಬಂಧವಿರುವ ಪ್ರವ್ರಾಜಿಕೆಯರ ಕೆಲಸ. ಅವರು ವಂಚಕತಾಪಸಿಯರು. ಯಾರ ನಿರ್ಬಂಧವೂ ಇಲ್ಲದೆ ಮನೆಗಳಿಗೆ ಹೋಗುವ ಅವರು ಮಾಯೆಯಿಂದ ಏನನ್ನು ತಾನೇ ಮಾಡಲಾರರು ?’ ಎಂದನು.

೧೨೭–೧೨೮. ಆಗ ಅವಳು ಲಜ್ಜೆಯಿಂದ ಬಾಗಿದವಳಂತೆ "ಹೋಗಲಿ ಬಿಡು. ಸಜ್ಜನರು ನಿಂದಿಸುವ ಕೆಲಸವನ್ನು ನಾನು ಏಕೆ ಮಾಡಲಿ ?’ ಎಂದು ಹೇಳಿ ಮಂತ್ರಿಯನ್ನು ಕಳಿಸಿ ಅವನು ಹೇಳಿದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ಸೇವಕಿಯ ಮೂಲಕ ಒಬ್ಬ ಪ್ರವ್ರಾಜಿಕೆಯನ್ನು ಕರೆಸಿಕೊಂಡಳು.

೧೨೯. ಅವಳಿಗೆ ತನ್ನ ಮನಸ್ಸಿನಲ್ಲಿರುವುದನ್ನೆಲ್ಲ ಹೇಳಿ ಕೆಲಸವಾದ ಮೇಲೆ ತುಂಬ ಹಣವನ್ನು ಕೊಡುವುದಾಗಿ ಒಪ್ಪಿದಳು.

---

ತತ್ಶ್ರುತ್ವಾ ಸೋಽಬ್ರವೀನ್ಮಂತ್ರೀ ದೇವಿ ಕರ್ತುಂ ನ ಯುಜ್ಯತೇ ।
ಮಾದೃಶಾನಾಂ ಪ್ರಭೋಃ ಪತ್ನ್ಯಾ ವಿನಾಶೋಽಥ ವಿಯೋಜನಮ್ ॥ ೧೨೪
ಏಷ ಪ್ರವ್ರಾಜಕಸ್ತ್ರೀಣಾಂ ವಿಷಯಃ ಕುಹಕಾದಿಷು ।
ಪ್ರಯೋಗೇಷ್ವಭಿಯುಕ್ತಾನಾಂ ಸಂಗತಾನಾಂ ತಥಾವಿಧೈಃ ॥ ೧೨೫
ತಾ ಹಿ ಕೈತವತಾಪಸ್ಯಃ ಪ್ರವಿಶ್ಯೈವಾನಿವಾರಿತಾಃ ।
ಗೃಹೇಷು ಮಾಯಾಕುಶಲಾಃ ಕರ್ಮ ಕಿಂ ಕಿಂ ನ ಕುರ್ವತೇ ॥ ೧೨೬
ಇತ್ಯುಕ್ತಾ ತೇನ ಸಾ ದೇವೀ ವಿನತೇವಾಹ ತಂ ಹ್ರಿಯಾ ।
ಅಲಂ ತರ್ಹಿ ಮಮಾನೇನ ಗರ್ಹಿತೇನ ಸತಾಮಿತಿ ॥ ೧೨೭
ತದ್ವಚೋ ಹೃದಿ ಕೃತ್ವಾ ತು ತಂ ವಿಸೃಜ್ಯ ಚ ಮಂತ್ರಿಣಮ್ ।
ಕಾಂಚಿತ್ ಪ್ರವ್ರಾಜಿಕಾಂ ಚೇಟೀಮುಖೇನಾನಯತಿ ಸ್ಮ ಸಾ ॥ ೧೨೮
ತಸ್ಯಾಃ ಶಶಂಸ ಚಾಮೂಲಾತ್ ತತ್ಸರ್ವಂ ಸ್ವಮನೀಷಿತಮ್ ।
ಅಂಗೀಚಕಾರ ದಾತುಂ ಚ ಸಿದ್ಧೇ ಕಾರ್ಯೇ ಧನಂ ಮಹತ್ ॥ ೧೨೯

೧೩೦-೧೩೧. ಅವಳೂ ಹಣದ ದುರಾಸೆಯಿಂದ ರಾಣಿಗೆ ಹೇಳಿದಳು: "ದೇವಿ ನನಗೆ ಇದೆಂತಹ (ದೊಡ್ಡ) ವಿಷಯ? ಅನೇಕ ವಿಧದ ಪ್ರಯೋಗಗಳನ್ನು ನಾನು ಬಲ್ಲೆ ಎಂದು ಆಶ್ವಾಸನೆಯನ್ನು ಕೊಟ್ಟು ಅವಳು ಹೊರಟುಹೋದಳು.

೧೩೨-೧೩೩. ಅವಳು ತನ್ನ ಮಠಕ್ಕೆ ಬಂದು ಆತಂಕದಿಂದ ಚಿಂತಿಸಿದಳು. "ಅತಿಸುಖದ ದುರಾಸೆಯು ಯಾರನ್ನು ತಾನೆ ಕೆಣಕುವುದಿಲ್ಲ ? ದೇವಿಯ ಎದುರಿನಲ್ಲಿ ಇದ್ದಕ್ಕಿದ್ದಂತೆ ಪ್ರತಿಜ್ಞೆ ಮಾಡಿಬಿಟ್ಟೆ ನನಗೆ ಅಂತಹ ವಿಶೇಷವಾದ ಜ್ಞಾನವೂ ಇಲ್ಲ.

೧೩೪. ಬೇರೆ ಕಡೆ ಮೋಸಮಾಡಿದಂತೆ ರಾಜನ ಅರಮನೆಯಲ್ಲಿ ಮಾಡಲಾಗದು. ವಿಷಯ ಗೊತ್ತಾದರೆ ಅರಮನೆಯವರು ಬಂಧಿಸುವರು.

೧೩೫ ಆದರೆ ಒಂದು ಉಪಾಯವಿದೆ. ನನಗೆ ಒಬ್ಬ ಕ್ಷೌರಿಕನು ಗೆಳೆಯನಾಗಿದ್ದಾನೆ. ಅವನು ಇಂತಹ ವಿಜ್ಞಾನವನ್ನು ಬಲ್ಲವನು. ಅವನು ಈ ಕುಶಲ ಕೆಲಸವನ್ನು ಮಾಡುವನು.'

೧೩೬ ಹೀಗೆ ಯೋಚಿಸಿ ಅವಳು ಆ ಕ್ಷೌರಿಕನ ಮನೆಗೆ ಹೋದಳು. ಹಣ ಬರುವ ಆ ಮಾಡಬೇಕಾದ ವಿಷಯವನ್ನು ಅವನಿಗೆ ತಿಳಿಸಿದಳು.

---

ಸಾಪ್ಯರ್ಥಲೋಭಾದಾರ್ತಾಂ ತಾಮಿತ್ಯುವಾಚ ಕುತಾಪಸೀ ।
ದೇವಿ ಕಿಂ ನಾಮ ವಸ್ತ್ವೇತದಹಂ ತೇऽ ಸಾಧಯಾಮ್ಯದಃ ॥ ೧೩೦
ನಾನಾವಿಧಾನ್ ಹಿ ಜಾನಾಮಿ ಪ್ರಯೋಗಾನ್ ಸುಬಹೂನಹಮ್ ।
ಏವಮಾಶ್ವಾಸ್ಯ ತಾಂ ದೇವೀಂ ಸಾಥ ಪ್ರವ್ರಾಜಿಕಾ ಯಯೌ ॥ ೧೩೧
ಮಠಿಕಾಂ ಪ್ರಾಪ್ಯ ಚ ನಿಜಾಂ ಭೀತೇವೇತ್ಥಮಚಿಂತಯತ್ ।
ಅಹೋ ಅತೀವ ಭೋಗಾಶಾ ಕಂ ನಾಮ ನ ವಿಡಂಬಯೇತ್ ॥ ೧೩೨
ಯನ್ಮಯಾ ಸಹಸಾ ದೇವ್ಯಾಃ ಪ್ರತಿಜ್ಞಾ ಪುರತಃ ಕೃತಾ ।
ವಿಜ್ಞಾನಂ ಚಾತ್ರ ತಾದೃಙ್ಮೇ ಸಮ್ಯಕ್‌ಕಿಂಚಿನ್ನ ವಿದ್ಯತೇ ॥ ೧೩೩
ಅನ್ಯತ್ರೇವ ಚ ನ ವ್ಯಾಜಂ ಕರ್ತುಂ ರಾಜಗೃಹೇ ಕ್ಷಮಮ್ ।
ಜ್ಞಾತ್ವಾ ಜಾತು ಹಿ ಕುರ್ವೀರನ್ ನಿಗ್ರಹಂ ಪ್ರಭುವಿಷ್ಣವಃ ॥ ೧೩೪
ಏಕಸ್ತತ್ರಾಭ್ಯುಪಾಯಃ ಸ್ಯಾತ್ ಯತ್ ಸುಹೃನ್ಮೇऽಸ್ತಿ ನಾಪಿತಃ ।
ಈದೃಗ್ವಿಜ್ಞಾನಕುಶಲಃ ಸ ಚೇತ್ ಕುರ್ಯಾದಿಹೋದ್ಯಮಮ್ ॥ ೧೩೫
ಇತ್ಯಾಲೋಚ್ಯೈವ ಸಾ ತಸ್ಯ ನಾಪಿತಸ್ಯಾಂತಿಕಂ ಯಯೌ ।
ತಸ್ಮೈ ಮನೀಷಿತಂ ಸರ್ವಂ ತಚ್ಛಶಂಸಾರ್ಥಸಿದ್ಧಿದಮ್ ॥ ೧೩೬

೧೩೭ ಮುದುಕನಾದರೂ ದುಷ್ಟನಾದ ಕ್ಷೌರಿಕನು ಹೀಗೆ ಯೋಚಿಸಿದನು : "ಇದೇನೋ ಅದೃಷ್ಟದಿಂದ ನನಗೆ ಲಾಭತರುವಂಥದ್ದೇ ಆಗಿದೆ.

೧೩೮–೧೪೧. ರಾಜನ ನೂತನ ಪತ್ನಿಗೆ ಇದರಿಂದ ತೊಂದರೆಯಾಗಬಾರದು. ಅವಳನ್ನು ಕಾಪಾಡಬೇಕು. ದಿವ್ಯದೃಷ್ಟಿಯಿರುವ ಅವಳ ತಂದೆ ಅದನ್ನು ತಿಳಿಸಿಬಿಡುತ್ತಾನೆ. ಇವಳನ್ನು ರಾಜನಿಂದ ಬೇರೆ ಮಾಡಿ ಮಹಾರಾಣಿಯಿಂದ ಪ್ರಯೋಜನ ಪಡೆಯುವೆನು. ಸೇವಕನು ಕೆಟ್ಟ ರಹಸ್ಯದಲ್ಲಿ ಸಹಾಯ ಮಾಡಿದರೆ ರಾಜನೂ ಅಡಿಯಾಳಾಗುತ್ತಾನೆ. ಆಮೇಲೆ ಸಮಯ ಬಂದಾಗ ರಾಜನಿಗೆ ಈ ವಿಷಯ ತಿಳಿಸಿದಾಗ ನನಗೆ ರಾಜ ಹಾಗೂ ಋಷಿಕನ್ಯೆ, ಈ ಇಬ್ಬರೂ ನನಗೆ ಬಹಳಕಾಲದವರೆಗೆ ಜೀವನಾಧಾರವಾಗುತ್ತಾರೆ. ಹೀಗೆ ನನ್ನ ಈ ಕೆಲಸವು ಪಾಪದ ಕೆಲಸವೂ ಆಗಲಾರದು.' ಎಂದು ಆಲೋಚಿಸಿ ಆ ಕ್ಷೌರಿಕನು ಆ ಕೆಟ್ಟ ಪರಿವ್ರಾಜಿಕೆಗೆ ಹೇಳಿದನು.

---

ತತಃ ಸ ನಾಪಿತೋ ವೃದ್ಧೋ ಧೂರ್ತಶ್ಚೈವಮಚಿಂತಯತ್ ।
ಉಪಸ್ಥಿತಮಿದಂ ದಿಷ್ಟ್ಯಾ ಲಾಭಸ್ಥಾನಂ ಮಮಾಧುನಾ ॥ ೧೩೭
ತನ್ನ ಬಾಧ್ಯಾ ನವಾ ರಾಜವಧೂ ರಕ್ಷ್ಯಾ ತು ಸಾ ಯತಃ ।
ದಿವ್ಯದೃಷ್ಟಿಃ ಪಿತಾ ತಸ್ಯ ಸರ್ವಂ ಪ್ರಖ್ಯಾಪಯೇದಿದಮ್ ॥ ೧೩೮
ವಿಶ್ಲಿಷ್ಯೈತಾಂ ತು ನೃಪತೇರ್ದೇವೀಂ ಸಂಪ್ರತಿ ಭುಂಜ್ಮಹೇ ।
ಕುರಹಸ್ಯಸಹಾಯೇ ಹಿ ಭೃತ್ಯೇ ಭೃತ್ಯಾಯತೇ ಪ್ರಭುಃ ॥ ೧೩೯
ಸಂಶ್ಲೇಷ್ಯ ಕಾಲೇ ರಾಜ್ಞೇ ಚ ವಾಚ್ಯಮೇತತ್ತಥಾ ಮಯಾ ।
ಯಥಾ ಸ್ಯಾದುಪಜೀವ್ಯೋ ಮೇ ರಾಜಾ ಸಾ ಚರ್ಷಿಕನ್ಯಕಾ ॥ ೧೪೦
ಏವಂ ಚ ನಾತಿಪಾಪಂ ಸ್ಯಾತ್ ಭವೇದ್ದೀರ್ಘಾ ಚ ಜೀವಿಕಾ ।
ಇತ್ಯಾಲೋಚ್ಯ ಸ ತಾಂ ಪ್ರಾಹ ನಾಪಿತಃ ಕೂಟತಾಪಸೀಮ್ ॥ ೧೪೧

೧೪೨-೧೪೫. 'ತಾಯಿ, ನಾನು ಇದೆಲ್ಲವನ್ನೂ ಮಾಡುತ್ತೇನೆ. ಆದರೆ ಯೋಗಬಲದಿಂದ ರಾಜನ ಈ ನೂತನ ಪತ್ನಿಯನ್ನು ಕೊಲ್ಲುವದು ಉಚಿತವಲ್ಲ. ರಾಜನಿಗೆ ಈ ವಿಷಯ ಗೊತ್ತಾದರೆ ಅವನು ನಮ್ಮನ್ನೆಲ್ಲ ನಾಶಪಡಿಸುವನು. ಸ್ತ್ರೀಹತ್ಯಾಪಾಪವೂ ನಮಗೆ ಬಂದೀತು. ಅವಳ ತಂದೆ ಋಷಿಯೂ ಶಾಪವನ್ನು ಕೊಟ್ಟುಬಿಟ್ಟಾನು. ಆದ್ದರಿಂದ ಬುದ್ಧಿವಂತಿಕೆಯಿಂದ ರಾಜನಿಂದ ಅವಳನ್ನು ಬೇರೆ ಮಾಡಬೇಕು. ಅದರಿಂದ ದೇವಿಯು ಸುಖವಾಗಿರುವುದಲ್ಲದೆ ನಮಗೆ ಹಣವೂ ಸಿಗುತ್ತದೆ. ಈ ಕೆಲಸ ನನಗೇನೂ ದೊಡ್ಡದಲ್ಲ. ಇದನ್ನು ಬುದ್ಧಿಯಿಂದ ಸಾಧಿಸುತ್ತೇನೆ. ನನ್ನ ಅನುಭವವನ್ನು ಕೇಳು, ಅದನ್ನು ನಿನಗೆ ವಿವರಿಸುತ್ತೇನೆ.

---

ಅಂಬ ಸರ್ವಂ ಕರೋಮ್ಯೇತತ್ ಕಿಂತು ಯೋಗಬಲೇನ ಚೇತ್ ।
ಏಷಾ ರಾಜ್ಞೋ ನವಾ ಭಾರ್ಯಾ ಹನ್ಯತೇ ತನ್ನ ಯುಜ್ಯತೇ ॥ ೧೪೨
ಬುದ್ಧ್ವಾ ಕದಾಚಿದ್ರಾಜಾ ಹಿ ಸರ್ವಾನಸ್ಮಾನ್ ವಿನಾಶಯೇತ್ ।
ಸ್ತ್ರೀಹತ್ಯಾಪಾತಕಂ ಚ ಸ್ಯಾತ್ ತತ್ಪಿತಾ ಚ ಮುನಿಃ ಶಪೇತ್ ॥ ೧೪೩
ತಸ್ಮಾತ್ ಬುದ್ಧಿಬಲೇನೈಷಾ ರಾಜ್ಞೋ ವಿಶ್ಲೇಷ್ಯತೇ ಪರಮ್ ।
ಯೇನ ದೇವೀ ಸುಖಂ ತಿಷ್ಠೇತ್ ಅರ್ಥಪ್ರಾಪ್ತಿರ್ಭವೇಚ್ಚ ನಃ ॥ ೧೪೪
ಏತಚ್ಚ ಮೇ ಕಿಯತ್ ಕಿಂ ಹಿ ನ ಬುದ್ಧ್ಯಾ ಸಾಧಯಾಮ್ಯಹಮ್ ।
ಪ್ರಜ್ಞಾನಂ ಮಾಮಕೀನಂ ಚ ಶ್ರೂಯತಾಂ ವರ್ಣಯಾಮಿ ತೇ ॥ ೧೪೫

---

ಶ್ಲೋಕಸಂಖ್ಯೆ ೧೪೬ರಿಂದ ೧೭೨ರವರೆಗೆ ಕಥೆಯು ಅನುಚಿತವಾಗಿದೆ. ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳೂ ಸಹ ಈ ಕಥಾಭಾಗವನ್ನು ತಮ್ಮ ಕಥಾಮೃತದಲ್ಲಿ ಬಿಟ್ಟಿದ್ದಾರೆ. ಇಲ್ಲೂ ಕೈಬಿಡಲಾಗಿದೆ. ೧೪೫ನೇ ಶ್ಲೋಕದ ಆನಂತರ ೧೭೩ರಿಂದ ಭಾಷಾಂತರ ಮುಂದುವರಿಸಲಾಗಿದೆ.

ಅಭೂದಸ್ಯ ಪಿತಾ ರಾಜ್ಞೋ ದುಃಶೀಲೋ ದೃಢವರ್ಮಣಃ ।
ಅಹಂ ಚ ದಾಸಸ್ತಸ್ಯೇಹ ರಾಜ್ಞಃ ಸ್ವೋಚಿತಕರ್ಮಕೃತ್ ॥ ೧೩೬
ಸ ಕದಾಚಿದಿಹ ಭ್ರಾಮ್ಯನ್ ಭಾರ್ಯಾಮೈಕ್ಷತ ಮಾಮಕೀಮ್ ।
ತಸ್ಯಾಂ ತಸ್ಯ ಸುರೂಪಾಯಾಂ ತರುಣ್ಯಾಂ ಚ ಮನೋ ಯಯೌ ॥ ೧೩೭
ನಾಪಿತಸ್ತ್ರೀತಿ ಚಾಬೋಧಿ ಪೃಷ್ಟ್ವಾ ಪರಿಜನಂ ಸ ತಾಮ್ ।
ಕಿಂ ನಾಪಿತಃ ಕರೋತೀತಿ ಪ್ರವಿಶ್ಯೈವ ಸ ಮೇ ಗೃಹಮ್ ॥ ೧೩೮
ಉಪಭುಜ್ಯೈವ ತಾಂ ಸ್ವೇಚ್ಛಂ ಮದ್ಭಾರ್ಯಾಂ ಕುನೃಪೋ ಯಯೌ ।
ಅಹಂ ಚ ತದಹಃ ದೈವಾತ್ ಗೃಹಾದಾಸಂ ಬಹಿಃಕ್ವಚಿತ್ ॥ ೧೩೯
ಅನ್ಯೇದ್ಯುಶ್ಚ ಪ್ರವಿಷ್ಟೇನ ದೃಷ್ಟ್ವಾ ಸಾನ್ಯಾದೃಶೀ ಮಯಾ ।
ಪೃಷ್ಟಾ ಭಾರ್ಯಾ ಯಥಾವೃತ್ತಂ ಸಾಭಿಮಾನೇವ ಮೇಽಭ್ಯಧಾತ್ ॥ ೧೪೦
ತತ್ಕ್ರಮೇಣೈವ ತಾಂ ಭಾರ್ಯಾಂ ಅಶಕ್ತಸ್ಯ ನಿಷೇಧನೇ ।
ನಿತ್ಯಮೇವೋಪಭುಂಜಾನಃ ಸ ಮಮೋತ್ತುದ್ಧವಾನ್ ನೃಪಃ ॥ ೧೪೧
ಕುತೋ ಗಮ್ಯಮಗಮ್ಯಂ ವಾ ಕುಶೀಲೋನ್ಮಾದಿನಃ ಪ್ರಭೋಃ ।
ವಾತೋದ್ಧೂತಸ್ಯ ದಾವಾಗ್ನೇಃ ಕಿಂ ತೃಣಂ ಕಿಂ ಚ ಕಾನನಮ್ ॥ ೧೪೨
ತತೋ ಯಾವದ್ಗತಿರ್ಮೇಽಸ್ತಿ ನ ಕಾಚಿತ್ತನ್ನಿವಾರಣೇ ।
ತಾವತ್ ಸ್ವಲ್ಪಾಶನಕ್ಷಾಮೋ ಮಾಂದ್ಯವ್ಯಾಜಮಶಿಶ್ರಿಯಮ್ ॥ ೧೪೩
ತಾದೃಶಶ್ಚ ಗತೋಽಭೂವಂ ರಾಜ್ಞಸ್ತಸ್ಯಾಹಮಂತಿಕಮ್ ।
ಸ್ವವ್ಯಾಪಾರೋಪಸೇವಾರ್ಥಂ ನಿಃಶ್ವಸನ್ ಕೃಶಪಾಂಡುರಃ ॥ ೧೪೪
ತತ್ರ ಮಂದಮಿವಾಲೋಕ್ಯ ಸಾಭಿಪ್ರಾಯಃ ಸ ಮಾಂ ನೃಪಃ ।
ಪಪ್ರಚ್ಛ ರೇ ಕಿಮೀದೃಕ್ತ್ವಂ ಸಂಜಾತಃ ಕಥ್ಯತಾಮಿತಿ ॥ ೧೪೫
ನಿರ್ಬಂಧಪೃಷ್ಟಸ್ತಂ ಚಾಹಂ ವಿಜನೇ ಯಾಚಿತಾಭಯಃ ।
ಪ್ರತ್ಯವೋಚಂ ನೃಪಂ ದೇವ ಭಾರ್ಯಾಸ್ತಿ ಮಮ ಡಾಕಿನೀ ॥ ೧೪೬
ಸಾ ಚ ಸುಪ್ತಸ್ಯ ಮೇಂಽತ್ರಾಣಿ ಗುದೇನಾಕೃಷ್ಯ ಚೂಷತಿ ।
ತಥೈವ ಚಾಂತಃ ಕ್ಷಿಪತಿ ತೇನಾಹಂ ಕ್ಷಾಮತಾಂ ಗತಃ ॥ ೧೪೭
ಪೋಷಣಾಯ ಚ ಮೇ ನಿತ್ಯಂ ಬೃಂಹಣಂ ಭೋಜನಂ ಕುತಃ ।
ಇತ್ಯುಕ್ತಃ ಸ ಮಯಾ ರಾಜಾ ಜಾತಾಶಂಕೋ ವ್ಯಚಿಂತಯತ್ ॥ ೧೪೮
ಕಿಂ ಸತ್ಯಂ ಡಾಕಿನೀ ಸಾ ಸ್ಯಾತ್ ತೇನಾಹಂ ಹಿ ಹೃತಸ್ತಯಾ ।
ಕಿಂ ಸ್ವಿದಾಹಾರಪುಷ್ಟಸ್ಯ ಚೂಷೇದಂತ್ರಂ ಮಮಾಪಿ ಸಾ ॥ ೧೪೯
ತದದ್ಯ ತಾಮಹಂ ಯುಕ್ತ್ಯಾ ಜಿಜ್ಞಾಸಿಷ್ಯೇ ಸ್ವಯಂ ನಿಶಿ ।
ಇತಿ ಸಂಚಿಂತ್ಯ ರಾಜಾ ಮೇ ಸೋಽತ್ರಾಹಾರಮದಾಪಯತ್ ॥ ೧೫೦

ತತೋ ಗತ್ವಾ ಗೃಹಂ ತಸ್ಯಾ ಭಾರ್ಯಾಯಾಃ ಸಂನಿಧಾವಹಮ್ ।
ಅಶ್ರೂಣ್ಯಮುಂಚಂ ಪೃಷ್ಟಶ್ಚ ತಯಾ ತಾಮೇವಮಬ್ರವಮ್ ॥ ೧೧
ಪ್ರಿಯೇ ನ ವಾಚ್ಯಂ ಕಸ್ಯಾಪಿ ತ್ವಯಾ ಶೃಣು ವದಾಮಿತೇ ।
ಅಸ್ಯ ರಾಜ್ಞೋ ಗುದೇ ಜಾತಾ ದಂತಾ ವಜ್ರಾಶ್ರಿಸಂನಿಭಾಃ ॥ ೧೨
ತಚ್ಚ ಭಗ್ನೋಽದ್ಯ ಜಾತ್ಯೋಽಪಿ ಕ್ಷುರೋ ಮೇ ಕರ್ಮ ಕುರ್ವತಃ ।
ಏವಂ ಚಾತ್ರ ಮಮೇದಾನೀಂ ಕ್ಷುರಸ್ತ್ರುಟ್ಯೇತ್ ಪದೇ ಪದೇ ॥ ೧೩
ತನ್ನವಂ ನವಮಾನೇಷ್ಯೇ ಕುತೋ ನಿತ್ಯಮಹಂ ಕ್ಷುರಮ್ ।
ಅತೋ ರೋದಿಮಿ ನಷ್ಟಾ ಹಿ ಜೀವಿಕೇಯಂ ಗೃಹೇ ಮಮ ॥ ೧೪
ಇತ್ಯುಕ್ತಾ ಸಾ ಮಯಾ ಭಾರ್ಯಾ ಮತಿಮಾಧಾದುಪೈಷ್ಯತಃ ।
ರಾತ್ರೌ ರಾಜ್ಞೋಽಸ್ಯ ಸುಪ್ತಸ್ಯ ಗುದದಂತಾದ್ಭುತೇಕ್ಷಣೇ ॥ ೧೫
ಆ ಸಂಸಾರಾದದೃಷ್ಟಂ ತದಸತ್ಯಂ ನ ತ್ವಬೋಧಿ ಸಾ ।
ವಿದಗ್ಧಾ ಅಪಿ ವಂಚ್ಯಂತೇ ವಿಟವರ್ಣನಯಾ ಸ್ತ್ರಿಯಃ ॥ ೧೬
ಅಥೈತ್ಯ ತಾಂ ನಿಶಿ ಸ್ವೈರಂ ಮದ್ಭಾರ್ಯಾಮುಪಭುಜ್ಯ ಸಃ ।
ರಾಜಾ ಶ್ರಮಾದಿವಾಲೀಕಂ ಸುಪ್ತವಾನ್ ಮದ್ವಚಃ ಸ್ಮರನ್ ॥ ೧೭
ಮದ್ಭಾರ್ಯಾಪ್ಯಥ ತಂ ಸುಪ್ತಂ ಮತ್ವಾ ತಸ್ಯ ಶನೈಃ ಶನೈಃ ।
ಹಸ್ತಂ ಪ್ರಸಾರಯಾಮಾಸ ಗುದೇ ದಂತೋಪಲಬ್ಧಯೇ ॥ ೧೮
ಗುದಪ್ರಾಪ್ತೇ ಚ ತತ್ಪಾಣಾವುತ್ಥಾಯ ಸಹಸೈವ ಸಃ ।
ಡಾಕಿನೀ ಡಾಕಿನೀತ್ಯುಕ್ತ್ವಾ ತ್ರಸ್ತೋ ರಾಜಾ ತತೋ ಯಯೌ ॥ ೧೯
ತತಃಪ್ರಭೃತಿ ಸಾ ತೇನ ಭೀತ್ಯಾ ತ್ಯಕ್ತಾ ನೃಪೇಣ ಮೇ ।
ಭಾರ್ಯಾ ಗೃಹೀತಸಂತೋಷಾ ಮದೇಕಾಯತ್ತತಾಂ ಗತಾ ॥ ೨೦
ಏವಂ ಪೂರ್ವಂ ನೃಪಾತ್ ಬುದ್ಧ್ಯಾ ಗೃಹಿಣೀ ಮೋಚಿತಾ ಮಯಾ ।
ಇತಿ ತಾಂ ತಾಪಸೀಮುಕ್ತ್ವಾ ನಾಪಿತಃ ಸೋಽಬ್ರವೀತ್ ಪುನಃ ॥ ೨೧
ತದೇತತ್ ಪ್ರಜ್ಞಯಾ ಕಾರ್ಯಮಾರ್ಯೇ ಯುಷ್ಮನ್ಮನೀಷಿತಮ್ ।
ಯಥಾ ಚ ಕ್ರಿಯತೇ ಮಾತಃ ತದಿದಂ ವಚ್ಮಿ ತೇ ಶೃಣು ॥ ೨೨

೧೭೩-೧೭೪. ಮೊದಲು ಅಂತಃಪುರದ ಒಬ್ಬ ವೃದ್ಧನನ್ನು ನಮ್ಮ ಸಹಾಯಕ್ಕಾಗಿ ಒಲಿಸಿಕೊಳ್ಳಬೇಕು. ಅವನು ಗುಟ್ಟಾಗಿ ರಾಜನ ಬಳಿಹೋಗಿ 'ನಿನ್ನ ಪತ್ನಿ ಕದಳೀಗರ್ಭೆಯು ಒಬ್ಬ ಡಾಕಿನೀ. ಕಾಡಿನಿಂದ ಬಂದ ಅವಳಿಗೆ ಅವಳ ಕಡೆಯ ಸೇವಕರು ಯಾರೂ ಇಲ್ಲ. ಎಲ್ಲರೂ ಬೇರೆಯವರೇ. ಅವರು ಮನೆಯಲ್ಲಿ ಒಡಕು ತರುವವರು. ಆಸೆಯಿಂದ ಅವಳು ಏನು ತಾನೆ ಮಾಡುವುದಿಲ್ಲ'

೧೭೫-೧೭೭. ಇದನ್ನು ಕೇಳಿ ರಾಜನು ಸಂಶಯಗೊಂಡಿರಲು ರಾತ್ರಿ ವೇಳೆ ಕದಳೀ ಗರ್ಭೆಯ ಮನೆಯಲ್ಲಿ ಕತ್ತರಿಸಿದ ಕೈಕಾಲುಗಳನ್ನು ಹಾಕಬೇಕು. ಬೆಳಿಗ್ಗೆ ರಾಜನು ಇದನ್ನು ನೋಡಿ ವೃದ್ಧಸೇವಕನು ಹೇಳಿದ್ದು ಸತ್ಯ ಎಂದು ತಿಳಿದು ಹೆದರಿಕೊಂಡು ಅವಳನ್ನು ತಾನಾಗಿಯೇ ಬಿಟ್ಟುಬಿಡುತ್ತಾನೆ. ಹೀಗೆ ಸವತಿಯು ದೂರವಾದಾಗ ರಾಣಿಯು ಸುಖವನ್ನು ಪಡೆಯುತ್ತಾಳೆ. ಅವಳು ನಿನಗೆ ಬಹುಮಾನ ಕೊಡುವಳು. ನನಗೂ ಲಾಭವಾಗುವುದು.

೧೭೮. ಎಂದು ಕ್ಷೌರಿಕನು ಅವಳಿಗೆ ಹೇಳಿದನು. ಅವಳು ಹಾಗೆಯೇ ಆಗಲಿ ಎಂದು ಹೇಳಿ ರಾಣಿಗೆ ಎಲ್ಲವನ್ನೂ ತಿಳಿಸಿದಳು.

೧೭೯. ದೇವಿಯೂ ಹಾಗೆಯೇ ಮಾಡಿದಳು. ರಾಜನೂ ಸಹ ಪ್ರತ್ಯಕ್ಷವಾಗಿ ನೋಡಿ ಆ ಕದಳೀಗರ್ಭೆಯು ದುಷ್ಟೆ ಎಂದು ತಿಳಿದು ಅವಳನ್ನು ಬಿಟ್ಟನು.

---

ಕೋऽಪ್ಯಂತಃಪುರವೃದ್ಧೋऽತ್ರ ಸ್ವೀಕಾರ್ಯೋ ಯೋ ಬ್ರವೀತ್ಯಮುಮ್ ।
ಜಾಯಾ ತೇ ಕದಲೀಗರ್ಭಾ ಡಾಕಿನೀತಿ ನೃಪಂ ರಹಃ ॥ ೧೭೩

ಆರಣ್ಯಕಾಯಾ ನಹ್ಯಸ್ಯಾಃ ಕಶ್ಚಿತ್ ಪರಿಜನಃ ಸ್ವಕಃ ।
ಸರ್ವಃ ಪರೋ ಭೇದಸಹೋ ಲೋಭಾತ್‌ಕುರ್ವೀತ ಕಿಂ ನ ಯತ್ ॥ ೧೭೪

ತತೋऽಸ್ಮಿನ್ ರಾಜ್ಞಿ ಸಾಶಂಕೇ ಶ್ರಮಣಾನ್ನಿಶಿ ಯತ್ನತಃ ।
ಹಸ್ತಪಾದಾದಿ ಕದಲೀಗರ್ಭಾಧಾಮ್ನಿ ನಿಧೀಯತೇ ॥ ೧೭೫

ತತ್ ಪ್ರಭಾತೇ ವಿಲೋಕ್ಯೈವ ರಾಜಾ ಸತ್ಯಮವೇತ್ಯ ತತ್ ।
ವೃದ್ಧೋಕ್ತಂ ಕದಲೀಗರ್ಭಾಂ ಭೀತಸ್ತಾಂ ತ್ಯಕ್ಷ್ಯತಿ ಸ್ವಯಮ್ ॥ ೧೭೬

ಏವಂ ಸ ಪತ್ನೀವಿರಹಾದ್ದೇವೀ ಸುಖಮವಾಪ್ನುಯಾತ್ ।
ತ್ವಾಂ ಚ ಸಾ ಬಹು ಮನ್ಯೇತ ಲಾಭಃ ಕಶ್ಚಿತ್ ಭವೇಚ್ಚ ನಃ ॥ ೧೭೭

ಇತ್ಯುಕ್ತಾ ತಾಪಸೀ ತೇನ ನಾಪಿತೇನ ತಥೇತಿ ಸಾ ।
ಗತ್ವಾ ರಾಜ್ಞೋ ಮಹಾದೇವ್ಯೈ ಯಥಾವಸ್ತು ನ್ಯವೇದಯತ್ ॥ ೧೭೮

ದೇವೀ ಚ ತತ್ತಥಾ ಚಕ್ರೇ ಸಾ ತದ್ಯುಕ್ತ್ಯಾ ನೃಪೋऽಪಿ ತಾಮ್ ।
ಪ್ರತ್ಯಕ್ಷಂ ವೀಕ್ಷ್ಯ ಕದಲೀಗರ್ಭಾಂ ದುಷ್ಟೇತಿ ತಾಂ ಜಹೌ ॥ ೧೭೯

೧೮೦. ಸಂತೋಷಗೊಂಡ ದೇವಿಯು ಪ್ರವ್ರಾಜಿಕೆಗೆ ಗುಟ್ಟಾಗಿ ಹಣವನ್ನು ಕೊಟ್ಟಳು. ಅದನ್ನು ಯಥೇಷ್ಟವಾಗಿ ಅವಳೂ ಕ್ಷೌರಿಕನೂ ಅನುಭವಿಸಿದರು.

೧೮೧–೧೮೨. ರಾಜನು ಕದಳೀಗರ್ಭೆಯನ್ನು ಬಿಟ್ಟಮೇಲೆ ಅವಳು ಅರಮನೆಯಿಂದ ಹೊರಟು ರಾಜನ ಆದೇಶದಿಂದ ಸಂತಪ್ತಳಾಗಿ ಹಿಂದೆ ನಡೆದು ಬಂದ ಮಾರ್ಗದಿಂದಲೇ ತನ್ನ ತಂದೆಯ ಆಶ್ರಮಕ್ಕೆ ಹೋದಳು.

೧೮೩–೧೮೭. ಅಲ್ಲಿಗೆ ಅವಳು ಹಿಂದಿರುಗಿ ಬಂದದ್ದನ್ನು ಕಂಡು ಅವಳ ತಂದೆ ಮಂಕಣಕ ಋಷಿಯು ಅವಳ ನಡತೆಯ ಬಗ್ಗೆ ಒಂದು ಕ್ಷಣ ಶಂಕಿಸಿದನು. ಆದರೆ ಧ್ಯಾನದಿಂದ ಇಡೀ ವೃತ್ತಾಂತವನ್ನು ತಿಳಿದು ಅವಳಲ್ಲಿ ನಂಬಿಕೆಯಿಟ್ಟು ಪ್ರೀತಿಯಿಂದ ಅವಳನ್ನು ಸಮಾಧಾನಮಾಡಿ ಕರೆದುಕೊಂಡು ರಾಜನ ಬಳಿಗೆ ಹೋಗಿ ಎಲ್ಲವನ್ನೂ ತಿಳಿಸಿದನು. ಆ ಸಮಯಕ್ಕೆ ಸರಿಯಾದ ಕ್ಷೌರಿಕನೂ ರಾಜನ ಬಳಿಗೆ ಬಂದು ತನ್ನ ತಂತ್ರವನ್ನು ಹೇಳಿ ಮತ್ತೆ "ರಾಜನೇ, ನಾನು ಈ ರೀತಿಯ ಉಪಾಯವನ್ನು ಸೂಚಿಸಿದ್ದರಿಂದ ಕದಳೀಗರ್ಭೆಯು ಬಹಿಷ್ಕಾರದ ಶಿಕ್ಷೆಯನ್ನು ಮಾತ್ರ ಪಡೆದಳು. ಇಲ್ಲದಿದ್ದರೆ ಘೋರವಾದ ಸವತಿ ಮಾತ್ಸರ್ಯಕ್ಕೆ ಈಡಾಗಿ ಮಾಟ, ಮಂತ್ರಗಳಿಂದ ಪ್ರಾಣವನ್ನೇ ಕಳೆದುಕೊಳ್ಳುತ್ತಿದ್ದಳು. ನಿನ್ನ ರಾಣಿಯ ರಕ್ಷಣೆಗೆ ಈ ರೀತಿ ತಂತ್ರ ಪ್ರಯೋಗಿಸಿದೆ" ಎಂದನು.

---

ತುಷ್ಟಯಾ ಚ ತತೋ ದೇವ್ಯಾ ತಯಾ ಗುಪ್ತಮದಾಯಿ ಯತ್ ।
ಪ್ರವ್ರಾಜಿಕಾ ತದ್‌ಬುಭುಜೇ ಸಾ ಯಥೇಷ್ಟಂ ಸನಾಪಿತಾ ॥ ೧೮೦

ತ್ಯಕ್ತಾ ಚ ಕದಲೀಗರ್ಭಾ ಸಾ ತೇನ ದೃಢವರ್ಮಣಾ ।
ರಾಜಜ್ಞಾಭಿಶಾಪಸಂತಪ್ತಾ ನಿರ್ಯಯೌ ರಾಜಮಂದಿರಾತ್ ॥ ೧೮೧

ಯೇನಾಜಗಾಮ ತೇನೈವ ಪ್ರಯಯೌ ಪಿತುರಾಶ್ರಮಮ್ ।
ಪೂರ್ವೋಪ್ತಜಾತಸಿದ್ಧಾರ್ಥಸಾಭಿಜ್ಞಾನೇನ ಸಾ ಪಥಾ ॥ ೧೮೨

ತತ್ರ ತಾಮಾಗತಾಂ ದೃಷ್ಟ್ವಾ ಸೋಽಕಸ್ಮಾತ್ತತ್ಪಿತಾ ಮುನಿಃ ।
ತಸ್ಯಾ ದುಶ್ಚರಿತಾಶಂಕೀ ತಸ್ಥೌ ಮಂಕಣಕಃ ಕ್ಷಣಮ್ ॥ ೧೮೩

ಪ್ರಣಿಧಾನಾಚ್ಚ ತಂ ಕೃತ್ಸ್ನಂ ತದ್‌ವೃತ್ತಾಂತಮವೇತ್ಯ ಸಃ ।
ಆಶ್ವಾಸ್ಯ ಚ ಸ್ವಯಂ ಸ್ನೇಹಾತ್ತಾಮಾದಾಯ ಯಯೌ ತತಃ ॥ ೧೮೪

ಏತ್ಯ ತಸ್ಮೈ ತದಾಚಖ್ಯೌ ಸ್ವಯಂ ಪ್ರಾಪ್ಯಾಯ ಭೂಭೃತೇ ।
ದೇವ್ಯಾ ಸಪತ್ನೀದೋಷೇಣ ಕೃತಂ ಕಪಟನಾಟಕಮ್ ॥ ೧೮೫

ತತ್ಕಾಲಂ ಸ್ವಯಮಭ್ಯೇತ್ಯ ರಾಜ್ಞೇ ತಸ್ಮೈ ಸ ನಾಪಿತಃ ।
ಯಥಾವೃತ್ತಂ ತದಾಚಷ್ಟ ಪುನರೇವಮುವಾಚ ಚ ॥ ೧೮೬

ಇತ್ಥಂ ವಿಶ್ಲೇಷ್ಯ ಕದಲೀಗರ್ಭಾ ರಾಜ್ಞೀ ಮಯಾ ಪ್ರಭೋ ।
ಅಭಿಚಾರವಶಾದ್ಯುಕ್ತ್ಯಾ ದೇವೀಂ ಸಂತೋಷ್ಯ ರಕ್ಷಿತಾ ॥ ೧೮೭

೧೮೮. ಅದನ್ನು ಕೇಳಿ, ಋಷಿಯು ಹೇಳಿದ್ದೂ ಅದೇ ಆಗಿದೆ ಎಂದು ತೀರ್ಮಾನಿಸಿ ರಾಜನು ಕದಳೀಗರ್ಭೆಯನ್ನು ಸ್ವೀಕರಿಸಿದನು.

೧೮೯. ಅನಂತರ ಋಷಿಯನ್ನು ಕಳಿಸಿಕೊಟ್ಟು ಕ್ಷೌರಿಕನು ತನ್ನ ಭಕ್ತನು ಎಂದು ಭಾವಿಸಿ ಅವನಿಗೆ ಹೇರಳವಾಗಿ ಹಣವನ್ನು ಕೊಟ್ಟನು. ಪ್ರಭುಗಳು ಧೂರ್ತರಿಗೆ ವಶರಾಗಿಬಿಡುತ್ತಾರೆ.

೧೯೦. ಆಮೇಲೆ ರಾಜನು ತನ್ನ ರಾಣಿಯಿಂದ ದೂರವಿದ್ದು ಕದಳೀಗರ್ಭೆಯ ಜೊತೆಯಲ್ಲಿ ಸುಖವಾಗಿ ಇದ್ದನು.

೧೯೧. ಎಲೈ ಕಳಿಂಗಸೇನೆಯೇ, ಸವತಿಯರು ಹೀಗೆ ಇಲ್ಲದಿರುವ ತಪ್ಪುಗಳನ್ನು ತೋರಿಸಿ ಬಹುವಿಧವಾದ ತೊಂದರೆಗಳನ್ನು ಉಂಟುಮಾಡುತ್ತಾರೆ. ನೀನು ಇನ್ನೂ ಕನ್ಯೆ. ವಿವಾಹವು ಇನ್ನೂ ದೂರ ಇದೆ. ದೇವತೆಗಳೂ ನಿನ್ನನ್ನು ಬಯಸುವವರಾಗಿಯೇ ಇದ್ದಾರೆ. ಅವರೇನು ಮಾಡುತ್ತಾರೆ ಎಂಬುದನ್ನು ಯೋಚಿಸುವುದೂ ಕಷ್ಟ

೧೯೨. ಆದ್ದರಿಂದ ಜಗತ್ತಿಗೆ ಏಕೈಕ ರತ್ನವಾಗಿ ವತ್ಸರಾಜನಿಗೇ ಅರ್ಪಿತಳಾಗಿರುವ ನೀನು ನಿನ್ನನ್ನು ಕಾಪಾಡಿಕೊಳ್ಳಬೇಕು. ನಿನ್ನ ಶ್ರೇಷ್ಠತೆಯೇ ನಿನ್ನ ಶತ್ರು.

---

ತತ್ಶ್ರುತ್ವಾ ನಿಶ್ಚಯಂ ದೃಷ್ಟ್ವಾ ಮುನೀಂದ್ರವಚನಸ್ಯ ಸಃ ।
ಜಗ್ರಾಹ ಕದಲೀಗರ್ಭಾಂ ಸಂಜಾತಪ್ರತ್ಯಯೋ ನೃಪಃ ॥ ೧೮೮
ಅನುವ್ರಜ್ಯ ಮುನಿಂ ತಂ ಚ ಸಂವಿಭೇಜೇ ಸ ನಾಪಿತಮ್ ।
ಭಕ್ತೋ ಮಮಾಯಮಿತ್ಯರ್ಥೈಃ ಧೂರ್ತೈರ್ಭೋಜ್ಯಾ ಬತೇಶ್ವರಾಃ ॥ ೧೮೯
ತತಸ್ತಯಾ ಸಮಂ ತಸ್ಥೌ ಕದಲೀಗರ್ಭಯೈವ ಸಃ ।
ರಾಜಾ ಸ್ವದೇವೀವಿಮುಖೋ ದೃಢವರ್ಮಾ ಸುನಿರ್ವೃತಃ ॥ ೧೯೦
ಏವಂವಿಧಾನ್ ವಿದಧತೇ ಸುಬಹೂನ್ ಸಪತ್ನ್ಯೋ
ದೋಷಾನ್ ಮೃಷಾಪ್ಯನವಮಾಂಗಿ ಕಲಿಂಗಸೇನೇ ।
ತ್ವಂ ಕನ್ಯಕಾ ಚ ಚಿರಭಾವಿವಿವಾಹಲಗ್ನಾ
ವಾಂಛಂತ್ಯಚಿಂತ್ಯಗತಯಶ್ಚ ಸುರಾ ಅಪಿ ತ್ವಾಮ್ ॥ ೧೯೧
ತತ್ ಸರ್ವತಃ ಸಾಂಪ್ರತಮಾತ್ಮನಾ ತ್ವಂ
ಆತ್ಮಾನಮೇಕಂ ಜಗದೇಕರತ್ನಮ್ ।
ವತ್ಸೇಶ್ವರೈಕಾರ್ಪಿತಮತ್ರ ರಕ್ಷೇಃ
ವೈರಂ ತವಾಯಂ ಹಿ ನಿಜಃ ಪ್ರಕರ್ಷಃ ॥ ೧೯೨

೧೯೩. ಗೆಳತಿ, ಇನ್ನು ನಾನು ಇಲ್ಲಿಗೆ ಬರಲಾರೆ. ಏಕೆಂದರೆ ನೀನು ಗಂಡನ ಮನೆಯಲ್ಲಿ ಇದ್ದೀಯೆ. ಸಜ್ಜನ ಸ್ತ್ರೀಯರು ಗೆಳತಿಯ ಗಂಡನ ಮನೆಗೆ ಹೋಗುವುದಿಲ್ಲ. ಇಲ್ಲಿಗೆ ಬರಲು ನನ್ನ ಗಂಡನೂ ತಡೆದಿದ್ದಾನೆ.

೧೯೪. ಗುಟ್ಟಾಗಿ ಇಲ್ಲಿಗೆ ನಾನು ಬರುವಂತಿಲ್ಲ. ಏಕೆಂದರೆ ನನ್ನ ಗಂಡನು ದಿವ್ಯದೃಷ್ಟಿಯಿಂದ ಅದನ್ನು ತಿಳಿಯಬಲ್ಲ. ಆದರೆ ಇಂದು ಹೇಗೋ ಅವನ ಅನುಮತಿಯನ್ನು ಪಡೆದೇ ಬಂದಿದ್ದೇನೆ.

೧೯೫. ಇಲ್ಲಿ ನನಗೆ ಏನೂ ಕೆಲಸ ಇಲ್ಲ. ಆದ್ದರಿಂದ ಹೊರಡುತ್ತೇನೆ. ನನ್ನ ಪತಿಯು ಅನುಮತಿ ನೀಡಿದರೆ ನಿಸ್ಸಂಕೋಚವಾಗಿ ಪುನಃ ಇಲ್ಲಿಗೆ ಬರುತ್ತೇನೆ.'

---

ಅಹಂ ಹಿ ನೇಷ್ಯಾಮಿ ಸಖಿ ತ್ವದಂತಿಕಂ
　　ಸ್ಥಿತಾಧುನಾ ತ್ವಂ ಪತಿಮಂದಿರೇ ಯತಃ ।
ಸಖೀಪತೇಃ ಸದ್ಮ ನ ಯಾಂತಿ ಸತ್‌ಸ್ತ್ರಿಯಃ
　　ಸುಗಾತ್ರಿ ಭರ್ತ್ರಾದ್ಯ ನಿವಾರಿತಾಸ್ಮಿ ಚ ॥ ೧೯೩
ನ ಚ ಗುಪ್ತಮಿಹಾಗಮಕ್ಷಮೋ ಮೇ
　　ತ್ವದತಿಸ್ನೇಹವಶಾತ್ ಸ ದಿವ್ಯದೃಷ್ಟಿಃ ।
ತದವೈತಿ ಹಿ ಮತ್ಪತಿಃ ಕಥಂಚಿತ್
　　ತಮನುಜ್ಞಾಪ್ಯ ಕಿಲಾಗತಾಹಮದ್ಯ ॥ ೧೯೪
ಇಹ ನಾಸ್ತ್ಯಧುನಾ ಹಿ ಮಾಮಕೀನಂ
　　ಸಖಿ ಕಾರ್ಯಂ ತವ ಯಾಮಿ ತದ್‌ಗೃಹಾಯ ।
ಯದಿ ಮಾಮನುಮಂಸ್ಯತೇ ಚ ಭರ್ತಾ
　　ತದಿಹೈಷ್ಯಾಮಿ ಪುನರ್ವಿಲಂಘ್ಯ ಲಜ್ಜಾಮ್ ॥ ೧೯೫

೧೯೬ ಹೀಗೆ ಕಣ್ಣೀರು ಸುರಿಸುತ್ತಾ ಹೇಳಿ ಅಸುರರಾಜನ ಪುತ್ರಿಯಾದ ಸೋಮಪ್ರಭೆಯು (ದುಃಖದಿಂದ) ಕಣ್ಣೀರು ಸುರಿಸುತ್ತಿದ್ದ ರಾಜಕುಮಾರಿ ಕಳಿಂಗಸೇನೆಯನ್ನು ಸಮಾಧಾನ ಪಡಿಸಿ ಹಗಲು ಕಳೆಯುತ್ತಿರಲು ಆಕಾಶಮಾರ್ಗದಲ್ಲಿ ತನ್ನ ಮನೆಗೆ ಹೋದಳು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ 'ಮದನಮಂಚುಕಾ'ಲಂಬಕದಲ್ಲಿ**

**ಆರನೆಯ ತರಂಗವು ಮುಗಿಯಿತು.**

---

ಇತ್ಥಂ ಸಬಾಷ್ಪಮಭಿಧಾಯ ಕಲಿಂಗಸೇನಾಂ
 ತಾಮಶ್ರುಧೌತವದನಾಂ ಮನುಜೇಂದ್ರಪುತ್ರೀಮ್ ।
ಆಶ್ವಾಸ್ಯ ಚಾಹ್ನಿ ವಿಗಲತ್ಯಸುರೇಂದ್ರಪುತ್ರೀ
 ಸೋಮಪ್ರಭಾ ಸ್ವಭವನಂ ನಭಸಾ ಜಗಾಮ ॥ ೧೯೬

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**'ಮದನಮಂಚುಕಾ'ಲಂಬಕೇ ಷಷ್ಠಸ್ತರಂಗಃ ।**

## ಏಳನೆಯ ತರಂಗ

೧–೨. ಅನಂತರ ಪ್ರಿಯಸಖಿಯಾದ ಸೋಮಪ್ರಭೆಯು ಹೊರಟು ಹೋದ ಮೇಲೆ ಅವಳನ್ನೇ ನೆನೆಯುತ್ತಾ ತನ್ನ ದೇಶ ಹಾಗೂ ಬಾಂಧವರನ್ನು ಬಿಟ್ಟು ಬಂದವಳಾಗಿದ್ದ ಕಳಿಂಗಸೇನೆಯು ವತ್ಸರಾಜನೊಡನೆ ವಿವಾಹವೂ ವಿಳಂಬವಾಗುತ್ತಿದ್ದುದರಿಂದ ಕಾಡಿನಿಂದ ದೂರವಾದ ಜಿಂಕೆಯಂತೆ ಕೌಶಾಂಬಿಯಲ್ಲಿ ಇದ್ದಳು.

೩–೪. ಕಳಿಂಗ ಸೇನೆಯೊಡನೆ ತನ್ನ ವಿವಾಹವು ವಿಳಂಬವಾಗಲು ಜ್ಯೋತಿಷಿಗಳೇ ಕಾರಣ ಎಂದು ಅವರ ಬಗ್ಗೆ ನೊಂದುಕೊಂಡ ವತ್ಸರಾಜನು ನೊಂದಿರುವ ಮನಸ್ಸಿಗೆ ನೆಮ್ಮದಿಯನ್ನು ತಂದುಕೊಳ್ಳಲು ಆ ದಿನ ವಾಸವದತ್ತೆಯ ನಿವಾಸಕ್ಕೆ ಹೋದನು.

೫ ಅಲ್ಲಿ ಆ ರಾಣಿಯು ಮೊದಲೇ ಮಂತ್ರಿಯು ಹೇಳಿಕೊಟ್ಟಂತೆ ಯಾವ ವಿಕಾರವೂ ಇಲ್ಲದೆ ತನ್ನದೇ ಆದ ರೀತಿಯಲ್ಲಿ ರಾಜನನ್ನು ಸತ್ಕರಿಸಿದಳು.

---

## ಸಪ್ತಮಸ್ತರಂಗಃ

ತತಃ ಸೋಮಪ್ರಭಾಂ ಯಾತಾಂ ಸ್ಮರಂತೀ ತಾಂ ಪ್ರಿಯಾಂ ಸಖೀಮ್ ।
ಕಲಿಂಗಸೇನಾ ಸಂತ್ಯಕ್ತನಿಜದೇಶಸ್ವಬಾಂಧವಾ ॥ ೧
ಸಾ ವಿಲಂಬಿತವತ್ಸೇಶಪಾಣಿಗ್ರಹಮಹೋತ್ಸವಾ ।
ನರೇಂದ್ರಕನ್ಯಾ ಕೌಶಾಂಬ್ಯಾಂ ಮೃಗೀವಾಸೀದ್ವನಚ್ಯುತಾ ॥ ೨
ಕಲಿಂಗಸೇನಾವಿವಾಹವಿಲಂಬನವಿಚಕ್ಷಣಾನ್ ।
ಗಣಕಾನ್ ಪ್ರತಿ ಸಾಸೂಯ ಇವ ವತ್ಸೇಶ್ವರೋಽಪಿ ಚ ॥ ೩
ಔತ್ಸುಕ್ಯವಿಮನಾಸ್ತಸ್ಮಿನ್ ದಿನೇ ಚೇತೋ ವಿನೋದಯನ್ ।
ದೇವ್ಯಾ ವಾಸವದತ್ತಾಯಾ ನಿವಾಸಭುವನಂ ಯಯೌ ॥ ೪
ತತ್ರ ಸಾ ತಂ ಪತಿಂ ದೇವೀ ನಿರ್ವಿಕಾರಾ ವಿಶೇಷತಃ ।
ಉಪಾಚರತ್ ಸ್ವೋಪಚಾರೈಃ ಪ್ರಾಕ್ ಮಂತ್ರಿವರಶಿಕ್ಷಿತಾ ॥ ೫

೬ ಕಳಿಂಗಸೇನೆಯ ವಿಷಯವು ತಿಳಿದಿದ್ದರೂ ದೇವಿಯು ಮಾತ್ರ ನಿರ್ಲಿಪ್ತಳಾಗಿರಲು ಕಾರಣವೇನು ಎಂದು ಯೋಚಿಸಿ ಅದನ್ನು ತಿಳಿಯಲು ಬಯಸಿ ರಾಜನು ಅವಳಿಗೆ ಹೀಗೆಂದನು.

೭ "ದೇವಿ, ಕಳಿಂಗಸೇನೆ ಎಂಬ ರಾಜಕುಮಾರಿಯು ನನ್ನನ್ನು ವರಿಸಲು ಬಂದಿರುವುದು ನಿನಗೆ ತಿಳಿದಿದೆಯೇ?'

೮–೧೧. ಅದನ್ನು ಕೇಳಿ ಮುಖದಲ್ಲಿ ಏನೂ ವ್ಯತ್ಯಾಸವನ್ನು ತೋರದೆ ಅವಳು ಹೇಳಿದಳು: "ನನಗೆ ತಿಳಿದಿದೆ. ಹರ್ಷವೂ ಆಯಿತು. ಅವಳು ಬಂದದ್ದು ಲಕ್ಷ್ಮಿ ಬಂದಂತೆ ಆಗಿದೆ. ಅವಳಿಂದ ಅವಳ ತಂದೆಯೂ ನಿಮ್ಮ ವಶನಾದಂತೆ. ಭೂಮಂಡಲವೇ ನಿಮ್ಮ ವಶದಲ್ಲಿರುತ್ತದೆ. ನಾನು ನಿಮ್ಮ ಸಂಪತ್ತಿನಿಂದಲೇ ಸುಖವಾಗಿದ್ದೇನೆ. ಇದು ನಿಮಗೂ ಗೊತ್ತು. ಬೇರೆ ರಾಜರಿಂದ ಬೇಡಿಕೆ ಇದ್ದರೂ ರಾಜಕುಮಾರಿಯರು ನನ್ನ ಗಂಡನನ್ನು ಬಯಸುತ್ತಾರೆ ಎಂದರೆ ನಾನು ಧನ್ಯಳಲ್ಲವೆ ?' ಎಂದು ಹೇಳಿದಳು.

೧೨. ಹೀಗೆ ಯೌಗಂಧರಾಯಣನಿಂದ ಉಪದೇಶಿಸಲ್ಪಟ್ಟಿರುವ ರಾಣಿಯು ಹೇಳಿದ ಮಾತನ್ನು ಕೇಳಿ ರಾಜನು ತನ್ನೊಳಗೇ ಸಂತೋಷಪಟ್ಟನು.

---

ಕಲಿಂಗಸೇನಾವೃತ್ತಾಂತೇ ಖ್ಯಾತೇಽಪ್ಯವಿಕೃತಾ ಕಥಮ್ ।
ದೇವೀಯಮಿತಿ ಸ ಧ್ಯಾತ್ವಾ ರಾಜಾ ಜಿಜ್ಞಾಸುರಾಹ ತಾಮ್ ॥ ೬
ಕಚ್ಚಿದ್ದೇವಿ ತ್ವಯಾ ಜ್ಞಾತಂ ಸ್ವಯಂವರಕೃತೇ ಮಮ ।
ಕಲಿಂಗಸೇನಾ ನಾಮ್ನೈಷಾ ರಾಜಪುತ್ರೀ ಯದಾಗತಾ ॥ ೭
ತಚ್ಛ್ರುತ್ವೈವಾವಿಭಿನ್ನೇನ ಮುಖರಾಗೇಣ ಸಾಬ್ರವೀತ್ ।
ಜ್ಞಾತಂ ಮಯಾತಿಹರ್ಷೋ ಮೇ ಲಕ್ಷ್ಮೀಃ ಸಾ ಹ್ಯಾಗತೇಹ ನಃ ॥ ೮
ವಶಗೇ ಹಿ ಮಹಾರಾಜೇ ತತ್ಪ್ರಾಪ್ತ್ಯಾ ತತ್ಪಿತರ್ಯಪಿ ।
ಕಲಿಂಗದತ್ತೇ ಪೃಥ್ವೀ ತೇ ಸುತರಾಂ ವರ್ತತೇ ವಶೇ ॥ ೯
ಅಹಂ ಚ ತ್ವದ್ವಿಭೂತ್ಯೈವ ಸುಖಿತಾ ತ್ವತ್ಸುಖೇನ ಚ ।
ಆರ್ಯಪುತ್ರ ತವೈತಚ್ಚ ವಿದಿತಂ ಪ್ರಾಗಪಿ ಸ್ಥಿತಮ್ ॥ ೧೦
ತನ್ನ ಧನ್ಯಾಸ್ಮಿ ಕಿಂ ಯಸ್ಯಾ ಮಮ ಭರ್ತಾ ತ್ವಮೀದೃಶಃ ।
ಯಂ ರಾಜಕನ್ಯಾ ವಾಂಛಂತಿ ವಾಂಛ್ಯಮಾನಾ ನೃಪಾಂತರೈಃ ॥ ೧೧
ಏವಂ ವತ್ಸೇಶ್ವರಃ ಪ್ರೋಕ್ತೋ ದೇವ್ಯಾ ವಾಸವದತ್ತಯಾ ।
ಯೌಗಂಧರಾಯಣಪ್ರತ್ತಶಿಕ್ಷಯಾನ್ತಸ್ತುತೋಷ ಸಃ ॥ ೧೨

೧೩. ಅಂದು ರಾತ್ರಿ ಅವಳ ಮನೆಯಲ್ಲೇ ಪಾನವನ್ನು ಸೇವಿಸಿ ಮಲಗಿದನು. ನಡುವೆ ಎಚ್ಚರವಾದಾಗ ರಾಜನು ಚಿಂತಿಸಿದನು.

೧೪–೧೮. ಮಹಾನುಭಾವೆಯಾದ ದೇವಿಯು ನನ್ನ ಅಭಿಪ್ರಾಯಕ್ಕೆ ಅನುಮೋದನೆ ನೀಡುತ್ತಿದ್ದಾಳಲ್ಲ! ಕಳಿಂಗಸೇನೆಯನ್ನು ಸವತಿಯನ್ನಾಗಿ ಸ್ವೀಕರಿಸಲು ಸಿದ್ಧಳಿದ್ದಾಳೆ! ಇದನ್ನು ಇವಳು ಹೇಗೆ ತಾನೇ ಸಹಿಸಿಕೊಂಡಿದ್ದಾಳೆ? ಪದ್ಮಾವತಿಯ ಮದುವೆಯಲ್ಲಿ ಇವಳು ಅದೃಷ್ಟವಶಾತ್ ಪ್ರಾಣಬಿಡಲಿಲ್ಲ. ಅವಳಿಗೆ ಏನಾದರೂ ಕೆಡುಕು ಸಂಭವಿಸಿದರೆ ಸರ್ವನಾಶವು ಕಟ್ಟಿಟ್ಟಬುತ್ತಿ. ನನ್ನ ಮಗ, ಅತ್ತೆ ಮಾವ ಪದ್ಮಾವತಿ ಮತ್ತು ರಾಜ್ಯ ಎಲ್ಲರೂ ಅವಳಿಂದಲೇ ನನಗೆ ಸಿಕ್ಕಿರುವುದು. ಹೀಗಿರುವಾಗ ನಾನು ಕಳಿಂಗ ಸೇನೆಯನ್ನು ಮದುವೆಯಾಗುವುದಾದರೂ ಹೇಗೆ? ಎಂದು ಆಲೋಚಿಸಿ ವತ್ಸರಾಜನು ಬೆಳಿಗ್ಗೆ ಅಲ್ಲಿಂದ ಹೊರಟು ಮಧ್ಯಾಹ್ನದ ನಂತರ ಪದ್ಮಾವತಿಯ ಮನೆಗೆ ಹೋದನು.

೧೯–೨೦. ಆ ಪದ್ಮಾವತಿಯೂ ವಾಸವದತ್ತೆಯ ಬೋಧನೆಯಂತೆ ಅವನನ್ನು ಉಪಚರಿಸಿದಳು. ಅವನು ಕೇಳಿದ್ದಕ್ಕೆ ಹಾಗೆಯೇ ಉತ್ತರಿಸಿದಳು. ಮಾರನೇ ದಿನ ರಾಜನು ಇಬ್ಬರೂ ಪತ್ನಿಯರ ಮನಸ್ಸು ಮತ್ತು ಮಾತು ಒಂದೇ ಇರುವುದನ್ನು ವಿಚಾರ ಮಾಡಿ ಯೌಗಂಧರಾಯಣನಿಗೆ ತಿಳಿಸಿದನು.

---

ತಯೈವ ಸ ಸಹಾಸೇವ್ಯ ಪಾನಂ ತದ್ವಾಸಕೇ ನಿಶಿ ।
ತಸ್ಯಾಂ ಸುಷ್ವಾಪ ಮಧ್ಯೇ ಚ ಪ್ರಬುದ್ಧಃ ಸಮಚಿಂತಯತ್ ॥ ೧೩
ಕಿಂಸ್ವಿನ್ಮಹಾನುಭಾವೇತ್ಥಂ ದೇವೀ ಮಾಮನುವರ್ತತೇ ।
ಕಲಿಂಗಸೇನಾಮಪಿ ಯತ್ ಸಪತ್ನೀಮನುಮನ್ಯತೇ ॥ ೧೪
ಕಥಂ ವಾ ಶಕ್ನುಯಾದೇತಾಂ ಸೋಢುಂ ಸೈಷಾ ತಪಸ್ವಿನೀ ।
ಪದ್ಮಾವತೀವಿವಾಹೇಽಪಿ ಯಾ ದೈವಾನ್ನ ಜಹಾವಸೂನ್ ॥ ೧೫
ತದಸ್ಯಾಶ್ಚೇದನಿಷ್ಟಂ ಸ್ಯಾತ್ ಸರ್ವನಾಶಸ್ತತೋ ಭವೇತ್ ।
ಏತದಾಲಂಬನಾಃ ಪುತ್ರಶ್ವಶುರ್ಯಶ್ವಶುರಾಶ್ಚ ಮೇ ॥ ೧೬
ಪದ್ಮಾವತೀ ಚ ರಾಜ್ಯಂ ಚ ಕಿಮಭ್ಯಧಿಕಮುಚ್ಯತೇ ।
ಅತಃ ಕಲಿಂಗಸೇನೈಷಾ ಪರಿಣೇಯಾ ಕಥಂ ಮಯಾ ॥ ೧೭
ಏವಮಾಲೋಚ್ಯ ವತ್ಸೇಶೋ ನಿಶಾಂತೇ ನಿರ್ಗತಸ್ತತಃ ।
ಅಪರಾಹ್ಣೇ ಯಯೌ ದೇವ್ಯಾಃ ಪದ್ಮಾವತ್ಯಾಃ ಸ ಮಂದಿರಮ್ ॥ ೧೮
ಸಾಪ್ಯೇನಮಾಗತಂ ದತ್ತಶಿಕ್ಷಾ ವಾಸವದತ್ತಯಾ ।
ತಥೈವೋಪಾಚರತ್ ತದ್ವತ್ ಪೃಷ್ಟಾವೋಚತ್ ತಥೈವ ಚ ॥ ೧೯
ತತೋಽನ್ಯೇದ್ಯುಸ್ತಯೋರ್ದೇವ್ಯೋರೇಕಂ ಚಿತ್ತಂ ವಚಶ್ಚ ತತ್ ।
ಯೌಗಂಧರಾಯಣಾಯಾಸೌ ಶಶಂಸ ವಿಮೃಶನ್ ನೃಪಃ ॥ ೨೦

೨೧–೨೨. ವಿಚಾರಮಗ್ನನಾಗಿರುವ ರಾಜನನ್ನು ನೋಡಿ ಕಾಲಜ್ಞಾನಿಯಾದ ಮಂತ್ರಿಯೌಗಂಧರಾಯಣನು ಈ ರೀತಿಯಾಗಿ ಹೇಳಿದನು. "ಇದು ಅವರ ನಿಜವಾದ ಅಭಿಪ್ರಾಯವಿರಲಾರದು. ಪ್ರಾಣ ತ್ಯಾಗ ಮಾಡಬೇಕೆಂಬ ದೃಢನಿರ್ಧಾರದಿಂದ ಹೀಗೆ ಹೇಳಿರಬೇಕು.

೨೩–೨೪. ಗಂಡನು ಬೇರೆಯವಳಲ್ಲಿ ಆಸಕ್ತನಾಗಿರಲಿ ಅಥವಾ ಸ್ವರ್ಗಸ್ಥನಾಗಲಿ ಪತಿವ್ರತೆಯರು ಮಾತ್ರ ಯಾವ ಆಸೆಯೂ ಇಲ್ಲದೆ ಮರಣದ ಬಗ್ಗೆ ಗಂಭೀರವಾಗಿ ನಿಶ್ಚಯ ಮಾಡಿರುತ್ತಾರೆ. ಗಾಢವಾದ ಪ್ರೇಮ ಭಗ್ನಗೊಳ್ಳುವುದನ್ನು ಅವರು ಸಹಿಸುವುದಿಲ್ಲ. ರಾಜನೆ, ಈ ವಿಷಯದಲ್ಲಿ ಶ್ರುತಸೇನನ ಕಥೆಯನ್ನು ಹೇಳುತ್ತೇನೆ ಕೇಳು' ಎಂದನು.

೨೫–೨೬. ಹಿಂದೆ ದಕ್ಷಿಣ ದೇಶದ ಗೋಕರ್ಣ ಎಂಬ ಊರಿನಲ್ಲಿ ಸತ್ಕುಲ ಪ್ರಸೂತನೂ ವಿದ್ಯಾವಂತನೂ ಆದ ಶ್ರುತಸೇನ ಎಂಬ ರಾಜನು ಇದ್ದನು. ಎಲ್ಲ ವಿಧವಾದ ಸಂಪತ್ತು ಇದ್ದರೂ ತನಗೆ ಅನುರೂಪಳಾದ ಪತ್ನಿ ಇಲ್ಲ ಎಂದು ಅವನು ಕೊರಗುತ್ತಿದ್ದನು.

---

ಸೋಽಪಿ ತಂ ವೀಕ್ಷ್ಯ ರಾಜಾನಂ ವಿಚಾರಪತಿತಂ ಶನೈಃ ।
ಕಾಲವೇದೀ ಜಗಾದೈವಂ ಮಂತ್ರೀ ಯೌಗಂಧರಾಯಣಃ ॥ ೨೧
ಜಾನೇಽಹಂ ನೈತದೇತಾವದಭಿಪ್ರಾಯೋಽತ್ರದಾರುಣಃ ।
ದೇವೀಭ್ಯಾಂ ಜೀವಿತತ್ಯಾಗದಾರ್ಢ್ಯಾದುಕ್ತು ಹಿ ತತ್ತಥಾ ॥ ೨೨
ಅನ್ಯಾಸಕ್ತೇ ಗತೇ ಚ ದ್ಯಾಂ ಸ್ತ್ರಿಯೋ ಮರಣನಿಶ್ಚಿತಾಃ ।
ಭವಂತ್ಯದೈನ್ಯಗಂಭೀರಾಃ ಸಾಧ್ವ್ಯಃ ಸರ್ವತ್ರ ನಿಃಸ್ಪೃಹಾಃ ॥ ೨೩
ಅಸಹ್ಯಂ ಹಿ ಪುರಂಧ್ರೀಣಾಂ ಪ್ರೇಮ್ಣೋ ಗಾಢಸ್ಯ ಖಂಡನಮ್ ।
ತಥಾ ಚ ರಾಜಂಸ್ತತ್ರೈತಾಂ ಶ್ರುತಸೇನಕಥಾಂ ಶೃಣು ॥ ೨೪
ಅಭೂದ್ದಕ್ಷಿಣಭೂಮೌ ಪ್ರಾಕ್ ಗೋಕರ್ಣಾಖ್ಯೇ ಪುರೇ ನೃಪಃ ।
ಶ್ರುತಸೇನ ಇತಿ ಖ್ಯಾತಃ ಕುಲಭೂಷಾಶ್ರುತಾನ್ವಿತಃ ॥ ೨೫
ತಸ್ಯ ಚೈಕಾಭವಚ್ಚಿಂತಾ ರಾಜ್ಞಃ ಸಂಪೂರ್ಣಸಂಪದಃ ।
ಆತ್ಮಾನುರೂಪಾಂ ಭಾರ್ಯಾಂ ಯತ್ ಸ ನ ತಾವದವಾಪ್ತವಾನ್ ॥ ೨೬

೨೭. ಒಂದು ಸಲ ರಾಜನು ಚಿಂತಾಮಗ್ನನಾಗಿರುವಾಗ ಅಗ್ನಿಶರ್ಮ ಎಂಬ ಬ್ರಾಹ್ಮಣನು ಬಂದು ಹೇಳಿದನು.

೨೮–೨೯. "ಎಲೈ ರಾಜನೆ, ನಾನು ನೋಡಿದ ಆಶ್ಚರ್ಯಕರವಾದ ಎರಡು ಘಟನೆಗಳನ್ನು ಹೇಳುತ್ತೇನೆ. ಕೇಳು. ತೀರ್ಥಯಾತ್ರೆ ಮಾಡುತ್ತಾ ನಾನು ಪಂಚತೀರ್ಥ ಎಂಬ ಸ್ಥಳಕ್ಕೆ ಹೋದೆ. ಹಿಂದೆ ಅಲ್ಲಿಗೆ ಬಂದಿದ್ದ ಐದು ಜನ ಅಪ್ಸರೆಯರು ಋಷಿಶಾಪದಿಂದ ಮೊಸಳೆಯ ರೂಪವನ್ನು ಪಡೆದಿದ್ದರು. ತೀರ್ಥಯಾತ್ರೆಗಾಗಿ ಬಂದಿದ್ದ ಅರ್ಜುನನು ಅವರನ್ನು ಉದ್ಧಾರಮಾಡಿದನು (ರಕ್ಷಿಸಿದನು).

೩೦–೩೧. ಅಲ್ಲಿ ಸ್ನಾನಮಾಡಿ ಐದುರಾತ್ರಿಗಳು ಉಪವಾಸಮಾಡಿದವರಿಗೆ ಶ್ರೀಮನ್ನಾರಾಯಣನ ಸೇವಕರಾಗುವ ಪುಣ್ಯ ದೊರೆಯುತ್ತದೆ. ನಾನು ಅಲ್ಲಿ ಸ್ನಾನ ಮಾಡಿ ಹೊರಟಿದ್ದಾಗ ಒಬ್ಬ ರೈತನು ನೇಗಿಲಿನಿಂದ ಭೂಮಿಯನ್ನು ಉಳುತ್ತಾ ಹಾಡು ಹೇಳುತ್ತಿದ್ದುದನ್ನು ನೋಡಿದೆನು.

೩೨. ಅದೇ ಮಾರ್ಗದಲ್ಲಿ ಬರುತ್ತಿದ್ದ ಒಬ್ಬ ಸಂನ್ಯಾಸಿಯು ದಾರಿಯನ್ನು ಕೇಳಿದಾಗ ಹಾಡಿನಲ್ಲೇ ಮಗ್ನನಾಗಿದ್ದ ಅವನು ಕೇಳಿಸಿಕೊಳ್ಳಲಿಲ್ಲ.

೩೩. ಸಂನ್ಯಾಸಿಯು ಅವನ ಮೇಲೆ ಕೋಪಗೊಂಡನು. ಆಗ ರೈತನು ಹಾಡುವುದನ್ನು ನಿಲ್ಲಿಸಿ ಅವನಿಗೆ ಹೇಳಿದನು.

---

ಏಕದಾ ಚ ನೃಪಃ ಕುರ್ವನ್ ಚಿಂತಾಂ ತಾಂ ತತ್ಕಥಾಂತರೇ ।
ಅಗ್ನಿಶರ್ಮಾಭಿಧಾನೇನ ಜಗದೇ ಸೋಽಗ್ರಜನ್ಮನಾ ॥ ೨೭
ಆಶ್ಚರ್ಯೇ ದ್ವೇ ಮಯಾ ದೃಷ್ಟೇ ತೇ ರಾಜನ್ ವರ್ಣಯೇ ಶೃಣು ।
ತೀರ್ಥಯಾತ್ರಾಗತಃ ಪಂಚತೀರ್ಥೀಂ ತಾಮಹಮಾಪ್ತವಾನ್ ॥ ೨೮
ಯಸ್ಯಾಮಪ್ಸರಸಃ ಪಂಚ ಗ್ರಾಹತ್ವಮೃಷಿಶಾಪತಃ ।
ಪ್ರಾಪ್ತಾಃ ಸತೀರುದಹರತ್ ತೀರ್ಥಯಾತ್ರಾಗತೋಽರ್ಜುನಃ ॥ ೨೯
ತತ್ರ ತೀರ್ಥವರೇ ಸ್ನಾತ್ವಾ ಪಂಚರಾತ್ರೋಪವಾಸಿನಾಮ್ ।
ನಾರಾಯಣಾನುಚರತಾದಾಯಿನಿ ಸ್ನಾಯಿನಾಂ ನೃಣಾಮ್ ॥ ೩೦
ಯಾವದ್ವ್ರಜಾಮಿ ತಾವಚ್ಚ ಲಾಂಗಲೋಲ್ಲಿಖಿತಾವನಿಮ್ ।
ಗಾಯಂತಂ ಕಂಚಿದದ್ರಾಕ್ಷಂ ಕಾರ್ಷಿಕಂ ಕ್ಷೇತ್ರಮಧ್ಯಗಮ್ ॥ ೩೧
ಸ ಪೃಷ್ಟಃ ಕಾರ್ಷಿಕೋ ಮಾರ್ಗಂ ಮಾರ್ಗಾಯಾತೇನ ಕೇನಚಿತ್ ।
ಪ್ರವ್ರಾಜಕೇನ ತದ್ವಾಕ್ಯಂ ನಾಶೃಣೋತ್ ಗೀತತತ್ಪರಃ ॥ ೩೨
ತತಃ ಸ ತಸ್ಮೈ ಚುಕ್ರೋಧ ಪರಿವ್ರಾಟ್ ವಿಧುರಂ ಬ್ರುವನ್ ।
ಸೋಽಪಿ ಗೀತಂ ವಿಮುಚ್ಯಾಥ ಕಾರ್ಷಿಕಸ್ತಮಭಾಷತ ॥ ೩೩

೩೪. "ನೀನು ಸಂನ್ಯಾಸಿ ಆಗಿದ್ದೂ ಧರ್ಮದ ಲೇಶವನ್ನೂ ತಿಳಿದಿಲ್ಲ. ಮೂರ್ಖನಾದ ನನಗೆ ತಿಳಿದಿರುವಷ್ಟು ಧರ್ಮದ ಸಾರ ನಿನಗೆ ತಿಳಿದಿಲ್ಲ !' ಎಂದನು.

೩೫. ನಿನಗೇನು ಮಹಾ ಗೊತ್ತು ಎಂದು ಸಂನ್ಯಾಸಿಯು ಕೇಳಿದ್ದಕ್ಕೆ ರೈತನು ಹೀಗೆಂದನು:

೩೬–೩೭ ""ಈ ಮರದ ನೆರಳಿನಲ್ಲಿ ಕುಳಿತುಕೊಂಡು ನಾನು ಹೇಳುವುದನ್ನು ಕೇಳು. ಈ ಸ್ಥಳದಲ್ಲಿ ಬ್ರಹ್ಮದತ್ತ, ಸೋಮದತ್ತ ಮತ್ತು ಪುಣ್ಯವಂತನಾದ ವಿಶ್ವದತ್ತ ಎಂಬ ಮೂರು ಜನ ಬ್ರಾಹ್ಮಣ ಸೋದರರು ಇದ್ದಾರೆ. ದೊಡ್ಡವರಾದ ಇಬ್ಬರಿಗೆ ಮದುವೆಯಾಗಿದೆ. ಚಿಕ್ಕವನಿಗೆ ಇನ್ನೂ ಮದುವೆಯಾಗಿಲ್ಲ.

೩೮. ಅವನು ಆಳಿನಂತೆ ಅಣ್ಣಂದಿರು ಹೇಳಿದ ಕೆಲಸ ನನ್ನೊಡನೆ ಮಾಡಿಕೊಂಡಿದ್ದಾನೆ. ಅವನು ಕೋಪವಿಲ್ಲದವನು. ನಾನು ಅವರ ರೈತ.

೩೯. ಮೃದು ಸ್ವಭಾವದವನಾದವನೂ ಅವನು ಬುದ್ಧಿಯಿಲ್ಲದವನೂ, ಸನ್ಮಾರ್ಗವನ್ನು ಎಂದೂ ಬಿಡದವನೂ ನೇರ ನಡವಳಿಕೆಯವನೂ ಹಾಗೂ ಆಯಾಸಗೊಳ್ಳದವನು (ಕೆಲಸ ಮಾಡದವನು) ಎಂದು ಅಣ್ಣಂದಿರು ತಿಳಿದಿದ್ದರು.

---

ಅಹೋ ಪ್ರವ್ರಾಜಕೋಽಸಿ ತ್ವಂ ಧರ್ಮಸ್ಯಾಂಶಂ ನ ವೇತ್ಸಿ ।
ಮೂರ್ಖೇಣಾಪಿ ಮಯಾ ಜ್ಞಾತಂ ಸಾರಂ ಧರ್ಮಸ್ಯ ಯತ್ಪುನಃ ॥ ೩೪
ತತ್ ಶ್ರುತ್ವಾ ಕಿಂ ತ್ವಯಾ ಜ್ಞಾತಮಿತಿ ತೇನ ಚ ಕೌತುಕಾತ್ ।
ಪ್ರವ್ರಾಜಕೇನ ಪೃಷ್ಟಃ ಸನ್ ಕಾರ್ಷಿಕಃ ಸ ಜಗಾದ ತಮ್ ॥ ೩೫
ಇಹೋಪವಿಶ ಪ್ರಚ್ಛಾಯೇ ಶೃಣು ಯಾವದ್ವದಾಮಿ ತೇ ।
ಅಸ್ಮಿನ್ ಪ್ರದೇಶೇ ವಿದ್ಯಂತೇ ಬ್ರಾಹ್ಮಣಾ ಭ್ರಾತರಸ್ತ್ರಯಃ ॥ ೩೬
ಬ್ರಹ್ಮದತ್ತಃ ಸೋಮದತ್ತೋ ವಿಶ್ವದತ್ತಶ್ಚ ಪುಣ್ಯಕೃತ್ ।
ತೇಷಾಂ ಜ್ಯೇಷ್ಠೌ ದಾರವಂತೌ ಕನಿಷ್ಠಸ್ತ್ವಪರಿಗ್ರಹಃ ॥ ೩೭
ಸ ತಯೋಃ ಜ್ಯೇಷ್ಠಯೋರಾಜ್ಞಾಂ ಕುರ್ವನ್ ಕರ್ಮಕರೋ ಯಥಾ ।
ಮಯಾ ಸಹಾಸೀದಕ್ರುದ್ಧ್ಯನ್ ಅಹಂ ತೇಷಾಂ ಹಿ ಕಾರ್ಷಿಕಃ ॥ ೩೮
ತೌ ಚ ಜ್ಯೇಷ್ಠಾವಬುಧ್ಯೇತಾಂ ಮೃದುಂ ತಂ ಬುದ್ಧಿವರ್ಜಿತಮ್ ।
ಸಾಧುಮತ್ಯಕ್ತಸನ್ಮಾರ್ಗಮೃಜುಮಾಯಾಸವರ್ಜಿತಮ್ ॥ ೩೯

೪೦–೪೧. ಒಂದು ಸಲ ಆ ವಿಶ್ವದತ್ತನ ಅತ್ತಿಗೆಯರು ಅವನನ್ನು ಕಾಮಿಸಿ ಗುಟ್ಟಾಗಿ ಕರೆದರು. ಅವನಾದರೋ ಅವರನ್ನು ತಾಯಂದಿರು ಎಂದು ಭಾವಿಸಿ ನಿರಾಕರಿಸಿದನು. ಆಗ ಅವರಿಬ್ಬರೂ ತಮ್ಮ ತಮ್ಮ ಗಂಡನ ಹತ್ತಿರಹೋಗಿ ನಿಮ್ಮ ತಮ್ಮನು ನಮ್ಮನ್ನು ರಹಸ್ಯದಲ್ಲಿ ಕರೆಯುತ್ತಾನೆ ಎಂದು ಸುಳ್ಳು ಹೇಳಿದರು.

೪೨–೪೩. ಆಗ ಕೋಪಗೊಂಡ ಇಬ್ಬರು ಸೋದರರು ಸರಿ, ತಪ್ಪು ವಿವೇಚನೆ ಇಲ್ಲದೆ ಕೆಟ್ಟ ಹೆಂಡತಿಯರ ಮಾತನ್ನು ಕೇಳಿ ತಮ್ಮನಿಗೆ ಹೀಗೆಂದರು : "ನೀನು ಹೊಲಕ್ಕೆ ಹೋಗಿ ಮಧ್ಯದಲ್ಲಿರುವ ಹುತ್ತವನ್ನು ಅಗೆದು ಸಮಮಾಡು' .

೪೪–೪೫. ಹಾಗೆಯೇ ಆಗಲಿ ಎಂದು ಅವನು ಸಲಿಕೆಯಿಂದ ಹುತ್ತವನ್ನು ಅಗೆಯುತ್ತಿದ್ದನು. ಅಲ್ಲಿ ಕೃಷ್ಣಸರ್ಪವು ಇದೆ ಬೇಡ, ಬೇಡ ಎಂದು ನಾನು ಹೇಳಿದರೂ ಕೇಳದೆ ಕೆಟ್ಟದ್ದಾಗಲೆಂದು ಇಚ್ಛಿಸಿದ ಅಣ್ಣಂದಿರ ಮಾತನ್ನು ಮೀರಲಾರದೆ ಏನಾದರೂ ಆಗಲಿ ಎಂದು ಅಗೆದೇ ಬಿಟ್ಟನು.

---

ಏಕದಾ ಭ್ರಾತೃಜಾಯಾಭ್ಯಾಂ ಸಕಾಮಾಭ್ಯಾಂ ರಹೋಽರ್ಥಿತಃ ।
ಕನಿಷ್ಠೋ ವಿಶ್ವದತ್ತೋಽಥ ಮಾತೃವತ್ತೇ ನಿರಾಕರೋತ್ ॥ ೪೦
ತತಸ್ತೇ ನಿಜಯೋರ್ಭರ್ತ್ರೋರುಭೇ ಗತ್ವಾ ಮೃಷೋಚತುಃ ।
ವಾಂಛತ್ಯಾವಾಂ ರಹಸ್ಯೇಷ ಕನೀಯಾನ್ ಯುವಯೋರಿತಿ ॥ ೪೧
ತೇನ ತಂಪ್ರತಿ ತೌ ಜ್ಯೇಷ್ಠೌ ಸಾಂತಃಕೋಪೌ ಬಭೂವತುಃ ।
ಸದಸದ್ವಾ ನ ವಿದತುಃ ಕುಸ್ತ್ರೀವಚನಮೋಹಿತೌ ॥ ೪೨
ಅಥೈತೌ ಭ್ರಾತರೌ ಜಾತು ವಿಶ್ವದತ್ತಂ ತಮೂಚತುಃ ।
ಗಚ್ಛ ತ್ವಂ ಕ್ಷೇತ್ರಮಧ್ಯಸ್ಥಂ ವಲ್ಮೀಕಂ ತಂ ಸಮೀಕುರು ॥ ೪೩
ತಥೇತ್ಯಾಗತ್ಯ ವಲ್ಮೀಕಂ ಕುದ್ದಾಲೇನಾಖನತ್ ಸ ತಮ್ ।
ಮಾ ಮೈವಂ ಕೃಷ್ಣಸರ್ಪೋಽತ್ರ ವಸತೀತ್ಯುದಿತೋ ಮಯಾ ॥ ೪೪
ತತ್ಶ್ರುತ್ವಾಪಿ ಸ ವಲ್ಮೀಕಮುಖನದ್ಯದ್ಭವಿಷ್ಯತಿ ।
ಪಾಪೈಷಿಣೋರಪ್ಯಾದೇಶಂ ಜ್ಯೇಷ್ಠಭ್ರಾತ್ರೋರಲಂಘಯನ್ ॥ ೪೫

೪೬-೪೮. ಅಗೆದಾಗ ಹಾವಿನ ಬದಲಾಗಿ ಬಂಗಾರದ ಗಡಿಗೆ ಸಿಕ್ಕಿತು. ಒಳ್ಳೆಯವರ ಬಳಿ ಧರ್ಮವಿರುತ್ತದೆ. ನಾನು ಬೇಡವೆಂದು ಹೇಳಿದರೂ ಕೇಳದೆ ಹಿರಿಯರ ಮೇಲಿನ ಭಕ್ತಿಯಿಂದ ಅದನ್ನು ಅಣ್ಣಂದಿರಿಗೆ ಕೊಟ್ಟನು. ಅವರು ಅದರಲ್ಲಿ ಒಂದು ಭಾಗವನ್ನು ಅವನಿಗೆ ಕೊಟ್ಟು ಆ ಭಾಗವನ್ನೂ ಲಪಟಾಯಿಸಲು ಕಟುಕರ ಮೂಲಕ ಅವನ ಕೈಕಾಲುಗಳನ್ನು ಕತ್ತರಿಸಿಹಾಕಿಸಿದರು.

೪೯. ಆದರೂ ಅವನು ಮಾತ್ರ ಕೋಪಿಸಿಕೊಳ್ಳಲಿಲ್ಲ. ಆ ಸತ್ಯಸಂಧತೆಯಿಂದಲೇ ಅವನಿಗೆ ಕೈಕಾಲುಗಳು ಮತ್ತೆ ಬೆಳೆದವು.

೫೦. ಅಂದಿನಿಂದ ನಾನೂ ಕೋಪವನ್ನು ಪೂರ್ತಿ ತ್ಯಜಿಸಿದ್ದೇನೆ. ತಾಪಸನಾದ ನೀನು ಮಾತ್ರ ಕೋಪವನ್ನು ಇನ್ನೂ ಬಿಟ್ಟಿಲ್ಲ.

೫೧. ಕೋಪವಿಲ್ಲದವನಿಗೆ ಸ್ವರ್ಗವು ದೊರೆಯುವುದು ಖಂಡಿತ ಎಂದು ಹೇಳುತ್ತಲೇ ಆ ರೈತನು ಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋದನು.

೫೨. ಮತ್ತೊಂದು ಆಶ್ಚರ್ಯವಾದುದನ್ನು ನಾನು ನೋಡಿದೆ. ಹೇಳುತ್ತೇನೆ ಕೇಳು, ಎಂದು ಹೇಳಿ ಆ ಬ್ರಾಹ್ಮಣನು ಶ್ರುತಸೇನ ರಾಜನಿಗೆ ಹೀಗೆ ಹೇಳಿದನು.

೫೩. "ಅಲ್ಲಿಂದ ಮುಂದೆ ತೀರ್ಥಯಾತ್ರೆಗಾಗಿ ತಿರುಗಾಡುತ್ತಾ ನಾನು ಸಮುದ್ರ ತೀರದಲ್ಲಿದ್ದ ವಸಂತಸೇನ ಎಂಬ ರಾಜನ ದೇಶಕ್ಕೆ ಹೋದೆನು.

---

ಖನ್ಯಮಾನಾತ್ತತಃ ಪ್ರಾಪ ಕಲಶಂ ಹೇಮಪೂರಿತಮ್ ।
ನ ಕೃಷ್ಣಸರ್ಪಂ ಧರ್ಮೋ ಹಿ ಸಾನ್ನಿಧ್ಯಂ ಕುರುತೇ ಸತಾಮ್ ॥ ೪೬
ತಂ ಚ ನೀತ್ವಾ ಸ ಕಲಶಂ ಭ್ರಾತೃಭ್ಯಾಂ ಸರ್ವಮರ್ಪಯತ್ ।
ನಿವಾರ್ಯಮಾಣೋಽಪಿ ಮಯಾ ಜ್ಯೇಷ್ಠಾಭ್ಯಾಂ ದೃಢಭಕ್ತಿತಃ ॥ ೪೭
ತಾ ಪುನಸ್ತತ ಏವಾಂಶಂ ದತ್ವಾ ಪ್ರೇರ್ಯ ಚ ಘಾತಕಾನ್ ।
ತಸ್ಯಾಚ್ಛೇದಯತಾಂ ಪಾಣಿಪಾದಂ ಧನಜಿಹೀರ್ಷಯಾ ॥ ೪೮
ತಥಾಪಿ ನ ಚ ಚುಕ್ರೋಧ ನಿರ್ಮನ್ಯುರ್ಭ್ರಾತರೌ ಪ್ರತಿ ।
ತೇನ ಸತ್ಯೇನ ತಸ್ಯಾತ್ರ ಹಸ್ತಪಾದಮಜಾಯತ ॥ ೪೯
ತದಾಪ್ರಭೃತಿ ತದ್‌ದೃಷ್ಟ್ವಾ ತ್ಯಕ್ತಃ ಕ್ರೋಧೋಽಖಿಲೋ ಮಯಾ ।
ತ್ವಯಾ ತು ತಾಪಸೇನಾಪಿ ಕ್ರೋಧೋಽದ್ಯಾಪಿ ನ ಮುಚ್ಯತೇ ॥ ೫೦
ಅಕ್ರೋಧೇನ ಜಿತಃ ಸ್ವರ್ಗಃ ಪಶ್ಯೈತದಧುನೈವ ಭೋಃ ।
ಇತ್ಯುಕ್ತ್ವೈವ ತನುಂ ತ್ಯಕ್ತ್ವಾ ಕಾರ್ಷಿಕಃ ಸ ದಿವಂಗತಃ ॥ ೫೧
ಇತ್ಯಾಶ್ಚರ್ಯಂ ಮಯಾ ದೃಷ್ಟಂ ದ್ವಿತೀಯಂ ಶೃಣು ಭೂಪತೇ ।
ಇತ್ಯುಕ್ತ್ವಾ ಶ್ರುತಸೇನಂ ಸ ನೃಪಂ ವಿಪ್ರೋಽಬ್ರವೀತ್ ಪುನಃ ॥ ೫೨
ತತೋಽಪಿ ತೀರ್ಥಯಾತ್ರಾರ್ಥಂ ಪರ್ಯಟನ್ನಂಬುಧೇಸ್ತಟೇ ।
ಅಹಂ ವಸಂತಸೇನಸ್ಯ ರಾಜ್ಞೋ ರಾಷ್ಟ್ರಮುವಾಪ್ತವಾನ್ ॥ ೫೩

೩೪–೩೫. ಅಲ್ಲಿ ಭೋಜನಕ್ಕೆಂದು ಒಂದು ಛತ್ರಕ್ಕೆ ನಾನು ಹೋಗುತ್ತಿದ್ದಾಗ ಅಲ್ಲಿದ್ದ ಬ್ರಾಹ್ಮಣರು "ಈ ದಾರಿಯಲ್ಲಿ ಹೋಗಬೇಡ, ಅಲ್ಲಿ ರಾಜಕುಮಾರಿ ಇದ್ದಾಳೆ. ಅವಳ ಹೆಸರು ವಿದ್ಯುದ್ಯೋತೆ ಎಂದು. ಅವಳನ್ನು ಒಬ್ಬ ಋಷಿ ನೋಡಿದರೂ ಕೂಡ ಮನ್ಮಥನ ಬಾಣಕ್ಕೆ ಗುರಿಯಾಗಿ ಹುಚ್ಚು ಹಿಡಿದು ಪ್ರಾಣ ಬಿಡುತ್ತಾನೆ.' ಎಂದು ಹೇಳಿದರು.

೩೬–೩೭. ಆಗ ನಾನು ಅವರಿಗೆ ಹೇಳಿದೆನು. ನಾನು ನಿತ್ಯವೂ ಮತ್ತೊಬ್ಬ ಮನ್ಮಥನೋ ಎಂಬಂತೆ ಇರುವ ಶ್ರುತಸೇನ ರಾಜನನ್ನು ನೋಡುತ್ತಿರುತ್ತೇನೆ. ಆದ್ದರಿಂದ ನನಗೆ ಇದು ವಿಚಿತ್ರವಾದುದೇನೂ ಅಲ್ಲ. ಅಲ್ಲದೆ ಜಾತ್ರೆ ಮೊದಲಾದ ಉತ್ಸವಗಳಲ್ಲಿ ಅವನು ಹೊರಗೆ ಬಂದರೆ ಅವನನ್ನು ನೋಡಿ ಪತಿವ್ರತೆಯರ ಶೀಲಭಂಗವಾದೀತೆಂದು ಊಹಿಸಿ ಅವರನ್ನು ದೂರಕ್ಕೆ ಕಳಿಸುತ್ತಾರೆ.

೩೮. ಎಂದು ನಾನು ಹೇಳಿದೆನು. ಅದನ್ನು ಕೇಳಿ ನಾನು ರಾಜನ ಕಡೆಯವನೆಂದು ತಿಳಿದ ಛತ್ರದ ಒಡೆಯ ಮತ್ತು ಪುರೋಹಿತ–ಇಬ್ಬರೂ ನನ್ನನ್ನು ಭೋಜನಕ್ಕೋಸ್ಕರ ರಾಜನ ಹತ್ತಿರಕ್ಕೇ ಕರೆದುಕೊಂಡು ಹೋದರು.

---

ತತ್ರ ಭೋಕ್ತುಂ ಪ್ರವಿಷ್ಟಂ ಮಾಂ ರಾಜಸತ್ರೇಽಬ್ರುವನ್ ದ್ವಿಜಾಃ ।
ಬ್ರಹ್ಮನ್ ಪಥಾಮುನಾ ಮಾಗಾಃ ಸ್ಥಿತಾಹ್ಯತ್ರ ನೃಪಾತ್ಮಜಾ ॥ ೩೪
ವಿದ್ಯುದ್ದ್ಯೋತಾಭಿಧಾನಾ ತಾಂ ಪಶ್ಯೇದಪಿ ಮುನಿರ್ಯದಿ ।
ಸ ಕಾಮಶರನಿರ್ಭಿನ್ನಃ ಪ್ರಾಪ್ನೋನ್ಮಾದಂ ನ ಜೀವತಿ ॥ ೩೫
ತತೋಽಹಂ ಪ್ರತ್ಯವೋಚಂ ತಾನ್ನೈತಚ್ಚಿತ್ರಂ ಸದಾ ಹ್ಯಹಮ್ ।
ಪಶ್ಯಾಮ್ಯಪರಕಂದರ್ಪಂ ಶ್ರುತಸೇನಮಹೀಪತಿಮ್ ॥ ೩೬
ಯಾತ್ರಾದೌ ನಿರ್ಗತೇ ಯಸ್ಮಿನ್ ರಕ್ಷಿಭಿಃ ದೃಷ್ಟಿಗೋಚರಾತ್ ।
ಉತ್ಸಾರ್ಯಂತೇ ಸತೀವೃತ್ತಭಂಗಭೀತ್ಯಾ ಕುಲಾಂಗನಾಃ ॥ ೩೭
ಇತ್ಯುಕ್ತವಂತಂ ವಿಜ್ಞಾಯ ಭಾವತ್ಕಂ ಭೋಜನಾಯ ಮಾಮ್ ।
ನೃಪಾಂತಿಕಂ ನೀತವಂತೌ ಸತ್ರಾಧಿಪಪುರೋಹಿತೌ ॥ ೩೮

೫೯-೬೦. ಮನ್ಮಥನ ಜಗನ್ಮೋಹನ ಮಂತ್ರ ವಿದ್ಯೆಯೇ ಮೂರ್ತರೂಪದಂತೆ ಇದ್ದ ಆ ರಾಜಕುಮಾರಿ ವಿದ್ಯುದ್ದ್ಯೋತೆಯನ್ನು ನಾನು ನೋಡಿದೆ. ಅವಳ ದರ್ಶನದಿಂದ ಕ್ಷೋಭೆಗೊಂಡ ನಾನು ಬಹಳ ಹೊತ್ತಾದ ಮೇಲೆ ಚೇತರಿಸಿಕೊಂಡು ಯೋಚಿಸಿದೆ. ಇವಳೇನಾದರೂ ನಮ್ಮ ರಾಜನ ಹೆಂಡತಿಯಾದರೆ ಅವನು ರಾಜ್ಯವನ್ನೇ ಮರೆಯುತ್ತಾನೆ.

೬೧-೬೨. ಆದರೂ ಈ ಕಥೆಯನ್ನು ನಾನು ನಮ್ಮ ರಾಜನಿಗೆ ಹೇಳಬೇಕು. ಇಲ್ಲದಿದ್ದರೆ, ಉನ್ಮಾದಿನೀ ದೇವಸೇನಾವೃತ್ತಾಂತದಂತಾಗಬಹುದು. ಹಿಂದೆ ದೇವಸೇನ ಎಂಬ ರಾಜನ ರಾಜ್ಯದಲ್ಲಿ ಜಗತ್ತಿಗೇ ಉನ್ಮಾದಮಾಡುವ ಉನ್ಮಾದಿನೀ ಎಂಬ ವ್ಯಾಪಾರಿ ಪುತ್ರಿಯು ಇದ್ದಳು.

---

ತತ್ರ ಸಾ ರಾಜತನಯಾ ವಿದ್ಯುದ್ದ್ಯೋತಾ ಮಯೇಕ್ಷಿತಾ ।
ಕಾಮಸ್ಯೇವ ಜಗನ್ಮೋಹಮಂತ್ರವಿದ್ಯಾ ಶರೀರಿಣೀ ॥ ೫೯
ಚಿರಾತ್ತದ್ದರ್ಶನಕ್ಷೋಭಂ ನಿಯಮ್ಯಾಹಮಚಿಂತಯಮ್ ।
ಅಸ್ಮತ್ ಪ್ರಭೋಶ್ಚೇದ್ಭಾರ್ಯೇಯಂ ಭವೇದ್ರಾಜ್ಯಂ ಸ ವಿಸ್ಮರೇತ್ ॥ ೬೦
ತಥಾಪಿ ಕಥನೀಯೋಽಯಮುದಂತಃ ಸ್ವಾಮಿನೇ ಮಯಾ ।
ಉನ್ಮಾದಿನೀದೇವಸೇನವೃತ್ತಾಂತೋ ಹ್ಯನ್ಯಥಾ ಭವೇತ್ ॥ ೬೧
ದೇವಸೇನಸ್ಯ ನೃಪತೇಃ ಪುರಾ ರಾಷ್ಟ್ರೇ ವಣಿಕ್‌ಸುತಾ ।
ಉನ್ಮಾದಿನೀತ್ಯಭೂತ್ಕನ್ಯಾ ಜಗದುನ್ಮಾದಕಾರಿಣೀ ॥ ೬೨

೬೩–೬೭ ಅವಳನ್ನು ರಾಜನಿಗೆ ಕೊಡುವುದಾಗಿ ಅವಳ ತಂದೆ ಹೇಳಿದನು. ಆದರೆ ರಾಜ್ಯದ ಹಿತದೃಷ್ಟಿಯಿಂದ ರಾಜನನ್ನು ವ್ಯಸನಕ್ಕೆ ಬೀಳದಂತೆ ರಕ್ಷಿಸುವುದಕ್ಕೋಸ್ಕರ ಮುಖ್ಯಮಂತ್ರಿಯು ಬ್ರಾಹ್ಮಣರ ಮೂಲಕ ಅವಳು ಲಕ್ಷಣವತಿಯಲ್ಲ ಎಂದು ಹೇಳಿಸಿದನು. ಅವಳಿಗೆ ಬೇರೆಯವನೊಡನೆ ವಿವಾಹವಾಯಿತು. ಒಮ್ಮೆ ಕಿಟಕಿಯ ಹತ್ತಿರ ಕುಳಿತಿದ್ದ ಅವಳನ್ನು ರಾಜ ದೇವಸೇನನು ದೂರದಿಂದಲೇ ನೋಡಿ ಹಾವಿನಂತೆ ಇರುವ ಅವಳ ದೃಷ್ಟಿ ವಿಷದಿಂದ ಪ್ರಭಾವಿತನಾಗಿ ಮತ್ತೆ ಮತ್ತೆ ಮೂರ್ಛೆ ಹೋಗುತ್ತಿದ್ದನು. ಸುಖವನ್ನಾಗಲೀ ಆಹಾರವನ್ನಾಗಲಿ ಸ್ವೀಕರಿಸುತ್ತಿರಲಿಲ್ಲ. ಅವಳ ಗಂಡನೂ ಮಂತ್ರಿಗಳೂ ಒತ್ತಾಯ ಮಾಡಿದರೂ ಧಾರ್ಮಿಕನಾದ ರಾಜನು ಅವಳನ್ನು ಸ್ವೀಕರಿಸಲಿಲ್ಲ. ಅವಳಲ್ಲೇ ಅನುರಕ್ತನಾಗಿ ಕೊನೆಗೆ ಪ್ರಾಣಬಿಟ್ಟನು. ಇಂಥ ಪ್ರಮಾದ ನಡೆದು ನನ್ನಿಂದ ದ್ರೋಹವಾದೀತೆಂದು ಯೋಚಿಸಿ ಈ ಆಶ್ಚರ್ಯಕರವಾದುದನ್ನು ನಿಮಗೆ ಹೇಳಿಬಿಟ್ಟೆ ಎಂದನು.

೬೮–೬೯. ಮನ್ಮಥನ ಆಜ್ಞೆಯಂತಿದ್ದ ಆ ಮಾತನ್ನು ಕೇಳಿ ಶ್ರುತಸೇನರಾಜನು ವಿದ್ಯುದ್ದ್ಯೋತೆಯಲ್ಲಿ ಆಸಕ್ತನಾದನು. ಕೂಡಲೇ ಅದೇ ಬ್ರಾಹ್ಮಣನನ್ನು ಕಳಿಸಿ ಅವಳನ್ನು ಕರೆಸಿಕೊಂಡು ಮದುವೆಮಾಡಿಕೊಂಡನು.

---

ಆವೇದಿತಾಪಿ ಸಾ ಪಿತ್ರಾ ನ ತೇನಾತ್ತಾ ಮಹೀಭೃತಾ ।
ವಿಪ್ರೈಃ ಕುಲಕ್ಷಣೇತ್ಯುಕ್ತಾ ತಸ್ಯ ವ್ಯಸನರಕ್ಷಿಭಿಃ ॥ ೬೩
ಪರಿಣೀತಾ ತದೀಯೇನ ಮಂತ್ರಿಮುಖ್ಯೇನ ಸಾ ತತಃ ।
ವಾತಾಯನಾಗ್ರಾದಾತ್ಮಾನಂ ರಾಜ್ಞೇಽಸ್ಮೈ ಜಾತ್ವದರ್ಶಯತ್ ॥ ೬೪
ತಯಾ ಭುಜಂಗ್ಯಾ ರಾಜೇಂದ್ರೋ ದೂರಾತ್ ದೃಷ್ಟಿವಿಷಾಹತಃ ।
ಮುಹುರ್ಮುಮೂರ್ಛ ನ ರತಿಂ ಲೇಭೇ ನಾಹಾರಮಾಹರತ್ ॥ ೬೫
ಪ್ರಾರ್ಥಿತೋಽಪಿ ಚ ತದ್ಭರ್ತೃಪ್ರಮುಖೈಃ ಸೋಽಥ ಮಂತ್ರಿಭಿಃ ।
ಧಾರ್ಮಿಕಸ್ತಾಂ ನ ಜಗ್ರಾಹ ತತ್ಸಕ್ತೋ ಜಹಾವಸೂನ್ ॥ ೬೬
ತದೀದೃಶೇ ಪ್ರಮಾದೇಽತ್ರ ವೃತ್ತೇ ದ್ರೋಹಃ ಕೃತೋ ಭವೇತ್ ।
ಇತ್ಯಾಲೋಚ್ಯ ಮಯೋಕ್ತಂ ತೇ ಚಿತ್ರಮೇತ್ಯ ತತೋಽದ್ಯ ತತ್ ॥ ೬೭
ಶ್ರುತ್ವೈತತ್ ಸ ದ್ವಿಜಾತ್ತಸ್ಮಾತ್ ಮದನಾಜ್ಞಾನಿಭಂ ವಚಃ ।
ವಿದ್ಯುದ್ದ್ಯೋತಾಹೃತಮನಾಃ ಶ್ರುತಸೇನನೃಪೋಽಭವತ್ ॥ ೬೮
ತತ್ಕ್ಷಣಂ ಸ ವಿಸೃಜ್ಯೈವ ತತ್ರ ವಿಪ್ರಂ ತಮೇವ ಸಃ ।
ತಥಾಕರೋದಥಾನೀಯ ಶೀಘ್ರಂ ತಾಂ ಪರಿಣೀತವಾನ್ ॥ ೬೯

೨೦. ಅನಂತರ ರಾಜಕುಮಾರಿ ವಿದ್ಯುದ್ದ್ಯೋತೆಯು ಸೂರ್ಯನಿಂದ ತೇಜಸ್ಸು ಹೇಗೆ ದೂರವಾಗಲಾರದೋ ಅದೇ ರೀತಿಯಲ್ಲಿ ರಾಜನಿಂದ ದೂರಳಾಗದೆ ಅವನ ಶರೀರದಂತೆಯೇ ಇದ್ದಳು.

೨೧–೨೨. ಕೆಲಕಾಲಾನಂತರ ಒಬ್ಬ ದೊಡ್ಡ ಶ್ರೀಮಂತ ವ್ಯಾಪಾರಿಯ ಮಗಳಾದ ಮಾತೃದತ್ತಾ ಎಂಬುವಳು ಸ್ವಯಂವರದ ಮೂಲಕ ಅವನನ್ನು ವರಿಸಿದಳು. ಅಧರ್ಮವಾಗುವುದು ಎಂಬ ಭೀತಿಯಿಂದ ರಾಜನು ಅವಳನ್ನು ಸ್ವೀಕರಿಸಿದನು. ಈ ವಿಷಯವನ್ನು ತಿಳಿದು ವಿದ್ಯುದ್ದ್ಯೋತೆಗೆ ಹೃದಯಾಘಾತವಾಗಿ ಅವಳು ಮೃತಳಾದಳು.

೨೩. ರಾಜನು ಬಂದು ಆ ಸ್ಥಿತಿಯಲ್ಲಿದ್ದ ತನ್ನ ಪ್ರಿಯಪತ್ನಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ದುಃಖಿಸುತ್ತಾ ಕೂಡಲೇ ಪ್ರಾಣಬಿಟ್ಟನು.

೨೪. ಆಗ ವ್ಯಾಪಾರಿ ಪುತ್ರಿ ಮಾತೃದತ್ತೆಯೂ ಅಗ್ನಿ ಪ್ರವೇಶಮಾಡಿದಳು. ಹೀಗೆ ಆ ರಾಜ್ಯವು ರಾಜನ ಸಹಿತ ಸಂಪೂರ್ಣ ನಾಶವಾಯಿತು.

೨೫. ಎಲೈರಾಜನೆ, ಉತ್ತಮವಾದ ಪ್ರೇಮದಭಂಗವು ವಿಶೇಷವಾಗಿ ವಾಸವದತ್ತಾ ದೇವಿಯ ಪ್ರೇಮದಭಂಗವು ಸಹಿಸಲು ಅಸಾಧ್ಯವಾದುದು.

೨೬. ನೀನು ಈ ಕಳಿಂಗಸೇನೆಯನ್ನು ಮದುವೆಯಾದರೆ ವಾಸವದತ್ತೆ ನಿಸ್ಸಂಶಯವಾಗಿ ಪ್ರಾಣಬಿಡುವಳು.

---

ತತಃ ಸಾ ನೃಪತೇಸ್ತಸ್ಯ ವಿದ್ಯುದ್ದ್ಯೋತಾ ನೃಪಾತ್ಮಜಾ ।
ಶರೀರಾವ್ಯತಿರಿಕ್ತಾಸೀತ್ ಭಾಸ್ಕರಸ್ಯ ಪ್ರಭಾ ಯಥಾ ॥ ೨೦
ಅಥ ಸ್ವಯಂವರಾಯಾಗಾತ್ ತಂ ನೃಪಂ ರೂಪಗರ್ವಿತಾ ।
ಕನ್ಯಕಾ ಮಾತೃದತ್ತಾಖ್ಯಾ ಮಹಾಧನವಣಿಕ್‌ಸುತಾ ॥ ೨೧
ಅಧರ್ಮಭೀತ್ಯಾ ಜಗ್ರಾಹ ಸ ರಾಜಾ ತಾಂ ವಣಿಕ್ಸುತಾಮ್ ।
ವಿದ್ಯುದ್ದ್ಯೋತಾಥ ತದ್‌ಬುಧ್ವಾ ಹೃತ್‌ಸ್ಫೋಟೇನ ವ್ಯಪದ್ಯತ ॥ ೨೨
ರಾಜಾಪ್ಯಾಗತ್ಯ ತಾಂ ಕಾಂತಾಂ ಪಶ್ಯನ್ನೇವ ತಥಾ ಗತಾಮ್ ।
ಅಂಕೇ ಕೃತ್ವಾ ಸ ವಿಲಪನ್ ಸದ್ಯಃ ಪ್ರಾಣೈರ್ವ್ಯಯುಜ್ಯತ ॥ ೨೩
ತತೋ ವಣಿಕ್ಸುತಾ ವಹ್ನಿಂ ಮಾತೃದತ್ತಾ ವಿವೇಶ ಸಾ ।
ಇತ್ಥಂ ಪ್ರಣಷ್ಟಂ ಸರ್ವಂ ತದಪಿ ರಾಷ್ಟ್ರಂ ಸರಾಜಕಮ್ ॥ ೨೪
ಅತೋ ರಾಜನ್ ಪ್ರಕೃಷ್ಟಸ್ಯ ಭಂಗಃ ಪ್ರೇಮ್ಣಃ ಸುದುಃಸಹಃ ।
ವಿಶೇಷೇಣ ಮನಸ್ವಿನ್ಯಾ ದೇವ್ಯಾ ವಾಸವದತ್ತಯಾ ॥ ೨೫
ತಸ್ಮಾತ್ಕಲಿಂಗಸೇನೈಷಾ ಪರಿಣೀತಾ ಯದಿ ತ್ವಯಾ ।
ದೇವೀ ವಾಸವದತ್ತಾ ತತ್ ಪ್ರಾಣಾನ್ ಜಹ್ಯಾನ್ನಸಂಶಯಃ ॥ ೨೬

೭೭. ಪದ್ಮಾವತೀ ದೇವಿಯವರೂ ಸಹ ಹಾಗೆಯೇ ಮಾಡುತ್ತಾರೆ. ಏಕೆಂದರೆ ಅವರಿಬ್ಬರೂ ಒಂದೇ ಜೀವ. ಆಗ ನಿನ್ನ ಮಗ ನರವಾಹನದತ್ತನು ಏನಾಗುವನು ?

೭೮-೭೯. ನಿನ್ನ ಹೃದಯವು ಇದನ್ನು ಸಹಿಸಲು ಸಮರ್ಥವೆ ? ಹೀಗೆ ಒಟ್ಟಿಗೆ ಎಲ್ಲವೂ ನಾಶವಾಗುತ್ತದೆ. ಇಬ್ಬರು ರಾಣಿಯರ ಮಾತಿನಲ್ಲಿ ಇರುವ ಗಾಂಭೀರ್ಯವೇ ಅವರ ಪ್ರಾಣವನ್ನು ತ್ಯಾಗ ಮಾಡುವ ನಿಶ್ಚಯವನ್ನು ಹೊಂದಿರುವ ಹೃದಯವನ್ನು ತೋರಿಸುತ್ತದೆ.

೮೦. ಸ್ವಹಿತವನ್ನು ನೀನು ಕಾಪಾಡಬೇಕು. ಮೂಕಪ್ರಾಣಿಗಳೇ ತಮ್ಮ ಹಿತವನ್ನು ಕಾಪಾಡಿಕೊಳ್ಳುತ್ತವೆ. ಇನ್ನು ಬುದ್ಧಿವಂತರಾದ ನಿನ್ನಂಥವರ ಬಗ್ಗೆ ಹೇಳುವುದೇನು ?

೮೧. ಎಂದು ಶ್ರೇಷ್ಠಮಂತ್ರಿಯಾದ ಯೌಗಂಧರಾಯಣನು ಹೇಳಿದಾಗ ವಿವೇಕವನ್ನು ಪಡೆದ ವತ್ಸರಾಜನು ಹೀಗೆಂದು ಹೇಳಿದನು:

೮೨. ಈ ಮಾತಿನಲ್ಲಿ ಸಂದೇಹವೇ ಇಲ್ಲ. ನ್ನ ಸರ್ವಸ್ವವೂ ನಾಶವಾಗುವುದು. ಆದ್ದರಿಂದ ಕಳಿಂಗಸೇನೆಯನ್ನು ನಾನು ಮದುವೆಯಾದರೆ ಪ್ರಯೋಜನವೇನು ?

೮೩. ಮುಹೂರ್ತವು ಹತ್ತಿರದಲ್ಲಿ ಇಲ್ಲ ಎಂದು ಜೋಯಿಸರು ಹೇಳಿದ್ದು ಒಳ್ಳೆಯದೇ ಆಯಿತು. ಸ್ವಯಂವರದಿಂದ ಬಂದವಳನ್ನು ಬಿಟ್ಟರೆ ಎಷ್ಟು ಮಹಾ ಅಧರ್ಮವಾದೀತು ?

---

ದೇವೀ ಪದ್ಮಾವತೀ ತದ್ವತ್ ತಯೋರೇಕಂ ಹಿ ಜೀವಿತಮ್ ।
ನರವಾಹನದತ್ತಶ್ಚ ಪುತ್ರಸ್ತೇ ಸ್ಯಾತ್ಕಥಂ ತತಃ ॥ ೭೭
ತಚ್ಚ ದೇವಸ್ಯ ಹೃದಯಂ ಸೋಢುಂ ಜಾನೇ ನ ಶಕ್ನುಯಾತ್ ।
ಏವಮೇಕಪದೇ ಸರ್ವಮಿದಂ ನಶ್ಯೇನ್ಮಹೀಪತೇ ॥ ೭೮
ದೇವ್ಯೋಃ ಯಚ್ಚೋಕ್ತಿಗಾಂಭೀರ್ಯಂ ತದೇವ ಕಥಯತ್ಯಲಮ್ ।
ಹೃದಯಂ ಜೀವಿತತ್ಯಾಗಾಢ್ಯನಿಶ್ಚಿತನಿಃಸ್ಪೃಹಮ್ ॥ ೭೯
ತತ್ ಸ್ವಾರ್ಥೋ ರಕ್ಷಣೀಯಸ್ತೇ ತಿರ್ಯಂಚೋಽಪಿ ಹಿ ಜಾನತೇ ।
ಸ್ವರಕ್ಷಾಂ ಕಿಂ ಪುನರ್ದೇವ ಬುದ್ಧಿಮಂತೋ ಭವಾದೃಶಾಃ ॥ ೮೦
ಇತಿ ಮಂತ್ರಿವರಾತ್ ಶ್ರುತ್ವಾ ಸ್ವೈರಂ ಯೌಗಂಧರಾಯಣಾತ್ ।
ಸಮ್ಯಗ್ವಿವೇಕಪದವೀಂ ಪ್ರಾಪ್ಯ ವತ್ಸೇಶ್ವರೋಽಬ್ರವೀತ್ ॥ ೮೧
ಏವಮೇತನ್ನ ಸಂದೇಹೋ ನಶ್ಯೇತ್ಸರ್ವಮಿದಂ ಮಮ ।
ತಸ್ಮಾತ್ ಕಲಿಂಗಸೇನಾಯಾಃ ಕೋಽರ್ಥಃ ಪರಿಣಯೇನ ಮೇ ॥ ೮೨
ಉಕ್ತೋ ಲಗ್ನಶ್ಚ ದೂರೇ ಯತ್ ತದ್ಯುಕ್ತಂ ಗಣಕೈಃ ಕೃತಮ್ ।
ಸ್ವಯಂವರಾಗತಾತ್ಯಾಗಾತ್ ಅಧರ್ಮೋ ವಾ ಕಿಯಾನ್ ಭವೇತ್ ॥ ೮೩

೮೪–೮೫. ಎಂದು ವತ್ಸರಾಜನು ಹೇಳಿದ್ದನ್ನು ಕೇಳಿ ಯೌಗಂಧರಾಯಣನು ಸಂತೋಷಗೊಂಡು ಯೋಚಿಸಿದನು. ನಾನು ಬಯಸಿದಂತೆಯೇ ಕೆಲಸ ನಡೆದಿದೆ. ಉಪಾಯವೆಂಬ ನೀರಿನಿಂದ ಸಿಂಪಡಿಸಿ ದೇಶ ಕಾಲದಲ್ಲಿ ಬೆಳಗಿದ ಈ ನೀತಿ ಎಂಬ ದೊಡ್ಡ ಬಳ್ಳಿಯು ಫಲವನ್ನು ನೀಡದೆ ಇರುತ್ತದೆಯೇ ?

೮೬. ಎಂದು ಯೌಗಂಧರಾಯಣನು ದೇಶಕಾಲವನ್ನು ಅರಿತು ರಾಜನಿಗೆ ನಮಸ್ಕಾರ ಮಾಡಿ ತನ್ನ ಮನೆಗೆ ಹೋದನು.

೮೭. ರಾಜನೂ ಸಹ ಆತಿಥ್ಯಕ್ಕೆ ಸಿದ್ಧತೆ ಮಾಡಿಕೊಂಡಿರುವ ವಾಸವದತ್ತೆಯ ಹತ್ತಿರಹೋಗಿ ಅವಳನ್ನು ಸಮಾಧಾನಪಡಿಸುತ್ತಾ ಹೀಗೆ ಹೇಳಿದನು.

೮೮–೮೯. "ಪ್ರಿಯೇ, ಕಮಲಕ್ಕೆ ನೀರು ಹೇಗೋ ನನ್ನ ಜೀವಕ್ಕೆ ನಿನ್ನ ಪ್ರೇಮವೂ ಹಾಗೆಯೇ. ಇದನ್ನು ನಾನು ಹೇಳಬೇಕಾಗಿಲ್ಲ. ನಿನಗೇ ಗೊತ್ತಿದೆ. ಬೇರೆಯವರ ಹೆಸರನ್ನು ಕರೆಯಲೂ ನಾನು ಇಚ್ಛಿಸುವುದಿಲ್ಲ. ಕಳಿಂಗಸೇನೆಯು ಅನಿರೀಕ್ಷಿತವಾಗಿ ನಮ್ಮ ಮನೆಗೆ ಬಂದಳು.

---

ಇತ್ಯುಕ್ತೋ ವತ್ಸರಾಜೇನ ಹೃಷ್ಟೋ ಯೌಗಂಧರಾಯಣಃ ।
ಚಿಂತಯಾಮಾಸ ಕಾರ್ಯಂ ನಃ ಸಿದ್ಧಪ್ರಾಯಂ ಯಥೇಪ್ಸಿತಮ್ ॥ ೮೪
ಉಪಾಯರಸಸಂಸಿಕ್ತಾ ದೇಶಕಾಲೋಪಬೃಂಹಿತಾ ।
ಸೇಯಂ ನೀತಿಮಹಾವಲ್ಲೀ ಕಿಂ ನಾಮ ನ ಫಲೇತ್ ಫಲಮ್ ॥ ೮೫
ಇತಿ ಸಂಚಿಂತ್ಯ ಸ ಧ್ಯಾಯನ್ ದೇಶಕಾಲೌ ಪ್ರಣಮ್ಯ ತಮ್ ।
ರಾಜಾನಂ ಪ್ರಯಯೌ ಮಂತ್ರೀ ಗೃಹಂ ಯೌಗಂಧರಾಯಣಃ ॥ ೮೬
ರಾಜಾಪಿ ರಚಿತಾತಿಥ್ಯಗೂಢಾಕಾರಾಮುಪೇತ್ಯ ಸಃ ।
ದೇವೀಂ ವಾಸವದತ್ತಾಂ ತಾಂ ಸಾಂತ್ವಯನ್ನಿದಮಬ್ರವೀತ್ ॥ ೮೭
ಕಿಮರ್ಥಂ ವಚ್ಮಿ ಜಾನಾಸಿ ತ್ವಮೇವ ಹರಿಣಾಕ್ಷಿ ಯತ್ ।
ವಾರಿ ವಾರಿರುಹಸ್ಯೇವ ತ್ವತ್ಪ್ರೇಮ ಮಮ ಜೀವಿತಮ್ ॥ ೮೮
ನಾಮಾಪಿ ಹಿ ಕಿಮನ್ಯಸ್ಯಾ ಗ್ರಹೀತುಮಹಮುತ್ಸಹೇ ।
ಕಲಿಂಗಸೇನಾ ತು ಹಠಾತ್ ಉಪಾಯಾತಾ ಗೃಹಂ ಮಮ ॥ ೮೯

೯೦-೯೧. ಹಿಂದೆ ತಪಸ್ಸು ಮಾಡುತ್ತಿದ್ದ ಅರ್ಜುನನನ್ನು ಬಯಸಿದ ರಂಭೆಯು ಅವನಿಂದ ತಿರಸ್ಕೃತಳಾಗಿ ಅವನಿಗೆ ಷಂಢನಾಗೆಂದು ಶಾಪಕೊಟ್ಟಳು. ಅರ್ಜುನನು ವಿರಾಟರಾಜನ ಅರಮನೆಯಲ್ಲಿ ಅತ್ಯಂತ ಆಶ್ಚರ್ಯಕರ ರೀತಿಯಲ್ಲಿ ಸ್ತ್ರೀವೇಷದಲ್ಲಿ ಇದ್ದು ಶಾಪಮುಕ್ತನಾದನು.

೯೨. ಆದ್ದರಿಂದ ಆಗ ಈ ಕಳಿಂಗಸೇನೆಯನ್ನು ನಾನು ತಿರಸ್ಕರಿಸಲಿಲ್ಲ. ನಿನ್ನ ಇಚ್ಛೆಯಿಲ್ಲದೆ ನಾನು ಏನನ್ನೂ ಮಾಡುವುದಿಲ್ಲ.

೯೩-೯೪. ಎಂದು ಹೇಳಿ ಅವಳನ್ನು ಸಮಾಧಾನಪಡಿಸಿ ಮಧು ಸತ್ಯವೂ ಕ್ರೂರವೂ ಆದ ಅವಳ ಆಶಯವನ್ನು ತಿಳಿದು ಮುಖ್ಯಮಂತ್ರಿಯಾದ ಯೌಗಂಧರಾಯಣನ ಪ್ರೌಢಬುದ್ಧಿಯಿಂದ ಸಂತೋಷಗೊಂಡ ರಾಜನು ಆ ರಾತ್ರಿಯನ್ನು ರಾಣಿಯಾದ ವಾಸವದತ್ತೆಯೊಡನೆ ಕಳೆದನು.

೯೫-೯೬ ಏತನ್ಮಧ್ಯೆ ರಾತ್ರಿ ಹಗಲು ಕಳಿಂಗ ಸೇನೆಯ ವೃತ್ತಾಂತವನ್ನು ತಿಳಿದು ಹೇಳಲು ಯೌಗಂಧರಾಯಣನು ನೇಮಿಸಿದ ಅವನ ಗೆಳೆಯ ಯೋಗೇಶ್ವರ ಎಂಬ ಬ್ರಹ್ಮರಾಕ್ಷಸನು ರಾತ್ರಿಯೇ ಬಂದು ಪ್ರಧಾನಮಂತ್ರಿಯೌಗಂಧರಾಯಣನಿಗೆ ಹೇಳಿದನು.

---

ಪ್ರಸಿದ್ಧಂ ಚಾತ್ರ ಯದ್ರಂಭಾ ತಪಃಸ್ಥೇನ ನಿರಾಕೃತಾ ।
ಪಾರ್ಥೇನ ಷಂಢತಾಶಾಪಂ ದದೌ ತಸ್ಮೈ ಸ್ಪೃಹಾಗತಾ ॥ ೯೦
ಸ ಶಾಪಸ್ತೀರ್ಣಸ್ತೇನ ವರ್ಷಂ ವೈರಾಟವೇಶ್ಮನಿ ।
ಸ್ತ್ರೀವೇಷೇಣ ಮಹಾಶ್ಚರ್ಯರೂಪೇಣಾಪ್ಯತಿವಾಹಿತಃ ॥ ೯೧
ಅತಃ ಕಲಿಂಗಸೇನೈಷಾ ನಿಷಿದ್ಧಾ ನ ತದಾ ಮಯಾ ।
ವಿನಾ ತ್ವದಿಚ್ಛಯಾಹಂ ತು ನ ಕಿಂಚಿದ್ವಕ್ತುಮುತ್ಸಹೇ ॥ ೯೨
ಇತ್ಯಾಶ್ವಾಸ್ಯೋಪಲಭ್ಯಾಥ ಹೃದಯೇನೇವ ರಾಗಿಣಾ ।
ಮುಖಾರ್ಪಿತೇನ ಮದ್ಯೇನ ಸತ್ಯಂ ಕ್ರೂರಂ ತದಾಶಯಮ್ ॥ ೯೩
ತಯೈವ ಸಹ ರಾತ್ರಿಂ ತಾಂ ರಾಜ್ಞ್ಯಾ ವಾಸವದತ್ತಯಾ ।
ಮಂತ್ರಿಮುಖ್ಯಮತಿಪ್ರೌಢಿತುಷ್ಟೋ ವತ್ಸೇಶ್ವರೋಽವಸತ್ ॥ ೯೪
ಅತ್ರಾಂತರೇ ಚ ಯಂ ಪೂರ್ವಂ ದಿವಾರಾತ್ರೌ ಪ್ರಯುಕ್ತವಾನ್ ।
ಕಲಿಂಗಸೇನಾವೃತ್ತಾಂತಜ್ಞಪ್ತ್ಯೈ ಯೌಗಂಧರಾಯಣಃ ॥ ೯೫
ಸ ಬ್ರಹ್ಮರಾಕ್ಷಸೋಽಭ್ಯೇತ್ಯ ಸುಹೃದ್ಯೋಗೇಶ್ವರಾಭಿಧಃ ।
ತಸ್ಯಾಮೇವ ನಿಶಿ ಸ್ವೈರಂ ತಂ ಮಂತ್ರಿವರಮಭ್ಯದಾತ್ ॥ ೯೬

೯೭–೯೯. ನಾನು ಕಳಿಂಗಸೇನೆಯ ಮನೆಯಲ್ಲೇ ಯಾವಾಗಲೂ ಇದ್ದೇನೆ. ಅಲ್ಲಿ ದೇವತೆಗಳಾಗಲಿ ಮನುಷ್ಯರಾಗಲಿ ಬಂದದ್ದನ್ನು ನಾನು ನೋಡಲಿಲ್ಲ. ಇಂದು ರಾತ್ರಿಯಾಗುತ್ತಿದ್ದಾಗ ಆ ಮನೆಯ ಉಪ್ಪರಿಗೆಯ ಬಳಿ ಯಾರಿಗೂ ಕಾಣಿಸದಂತೆ ಅಡಗಿಕೊಂಡಿದ್ದಾಗ ಇದ್ದಕ್ಕಿದ್ದಂತೆ ಆಗಸದಲ್ಲಿ ಅಸ್ಪಷ್ಟದನಿಯೊಂದು ಕೇಳಿಸಿತು. ಅದು ಎಲ್ಲಿಂದ ಬಂದಿತೆಂದು ತಿಳಿಯಲು ನನ್ನ ವಿದ್ಯೆಯನ್ನು ಪ್ರಯೋಗಿಸಿದೆ. ಆದರೆ ಪ್ರಯೋಜನವಾಗಲಿಲ್ಲ. ಆಗ ನಾನು ವಿಚಾರಮಾಡಿ ಯೋಚಿಸಿದೆ.

---

ಕಲಿಂಗಸೇನಾಸದನೇ ಸ್ಥಿತೋऽಸ್ಮ್ಯಂತರ್ಬಹಿಃ ಸದಾ ।
ದಿವ್ಯಾನಾಂ ಮಾನುಷಾಣಾಂ ವಾ ಪಶ್ಯಾಮಿ ನ ತಥಾಗಮಮ್ ॥ ೯೭
ಅದ್ಯಾವ್ಯಕ್ತೋ ಮಯಾ ಶಬ್ದಃ ಶ್ರುತೋऽಕಸ್ಮಾನ್ನಭಸ್ತಲೇ ।
ಪ್ರಚ್ಛನ್ನೇನಾತ್ರ ಹರ್ಮ್ಯಾಗ್ರಸಂನಿಕರ್ಷೇ ನಿಶಾಮುಖೇ ॥ ೯೮
ಪ್ರಭವಂ ತಸ್ಯ ವಿಜ್ಞಾತುಂ ಪ್ರಯುಕ್ತಾಪಿ ತತೋ ಮಮ ।
ವಿದ್ಯಾ ನ ಪ್ರಾಭವತ್ತೇನ ವಿಮೃಶ್ಯಾಹಮಚಿಂತಯಮ್ ॥ ೯೯

೧೧೦-೧೧೫. ಇದು ಕಳಿಂಗಸೇನೆಯ ಸೌಂದರ್ಯದಲ್ಲಿ ಆಸೆಯುಳ್ಳ ಗಗನಚಾರಿಯೊಬ್ಬ ತನ್ನ ದಿವ್ಯಪ್ರಭಾವದಿಂದ ಮಾಡಿದ ಶಬ್ದವಿರಬೇಕು. ಅದರಿಂದಲೇ ವಿದ್ಯೆಯು ನಡೆಯಲಿಲ್ಲ. ಸ್ವಲ್ಪಕಾಲ ಗಮನಿಸಿ ನೋಡುತ್ತೇನೆ. ಜಾಗೃತರಾದ ನಿಪುಣರಿಂದ ತಿಳಿಯಲಾಗದ ಬೇರೆಯವರ ದೋಷವು ಯಾವುದೂ ಇಲ್ಲ. ಇವಳನ್ನು ದೇವಲೋಕದವರು ಬಯಸುತ್ತಾರೆ ಎಂದು ಮಂತ್ರಿಯು ಹೇಳಿದ್ದಾನೆ. ಇವಳ ಗೆಳತಿ ಸೋಮಪ್ರಭೆಯೇ ಇದನ್ನು ಹೇಳಿರುವುದನ್ನು ಕೇಳಿದ್ದೇನೆ. ಇದನ್ನೆಲ್ಲ ಯೋಚನೆ ಮಾಡಿ ಅದನ್ನು ನಿನಗೆ ತಿಳಿಸಲು ಇಲ್ಲಿಗೆ ಬಂದೆ. ಪ್ರಸಂಗವಶಾತ್ ಇದನ್ನು ಕೇಳುತ್ತಿದ್ದೇನೆ. ನೀನು ನನಗೆ ತಿಳಿಸು. ಮೂಕಪ್ರಾಣಿಗಳೂ ತಮ್ಮ ಹಿತವನ್ನು ರಕ್ಷಿಸಿಕೊಳ್ಳುತ್ತವೆ ಎಂದು ನೀನು ರಾಜನಿಗೆ ಹೇಳುತ್ತಿದ್ದುದನ್ನು ನಾನು ಮರೆಯಲ್ಲಿ ಯೋಗದಿಂದ ಕೇಳಿಸಿಕೊಂಡೆ. ಇದಕ್ಕೆ ನಿದರ್ಶನವಿದ್ದರೆ ಹೇಳು ಎಂದು ಯೋಗೇಶ್ವರನು ಹೇಳಿದನು. ಆಗ ಯೌಗಂಧರಾಯಣನು ಹೀಗೆ ಹೇಳಿದನು.

೧೧೬. "ಗೆಳೆಯನೇ, ಇದಕ್ಕೆ ನಿದರ್ಶನ ಇದೆ. ಅದಕ್ಕೆ ಒಂದು ಕಥೆಯನ್ನು ಹೇಳುತ್ತೇನೆ ಕೇಳು. ವಿದಿಶಾನಗರದ ಹೊರಗಡೆ ಹಿಂದೆ ಒಂದು ದೊಡ್ಡ ಆಲದ ಮರ ಇತ್ತು.

---

ಅಯಂ ದಿವ್ಯಪ್ರಭಾವಸ್ಯ ಶಬ್ದಃ ಕಸ್ಯಾಪಿ ನಿಶ್ಚಿತಮ್ ।
ಕಲಿಂಗಸೇನಾಲಾವಣ್ಯಲುಬ್ಧಸ್ಯ ಭ್ರಮತೋಽಂಬರೇ ॥ ೧೧೦
ಯೇನ ನ ಕ್ರಮತೇ ವಿದ್ಯಾ ತದ್ವೀಕ್ಷೇ ಕಿಂಚಿದಂತರಮ್ ।
ನ ದುಷ್ಪ್ರಾಪಂ ಪರಚ್ಛಿದ್ರಂ ಜಾಗ್ರದ್ಭಿರ್ನಿಪುಣೈರ್ಯತಃ ॥ ೧೧೧
ದಿವ್ಯಾನಾಂ ವಾಂಛಿತೈಷೇತಿ ಪ್ರೋಕ್ತಂ ಮಂತ್ರಿವರೇಣ ಚ ।
ಸೋಮಪ್ರಭಾ ಸಖೀ ಚಾಸ್ಯಾ ವದಂತ್ಯೇತನ್ಮಯಾ ಶ್ರುತಾ ॥ ೧೧೨
ಇತಿ ನಿಶ್ಚಿತ್ಯ ತತ್ತುಭ್ಯಂ ಇಹಾಹಂ ವಕ್ತುಮಾಗತಃ ।
ಇದಂ ಪ್ರಸಂಗಾತ್ ಪೃಚ್ಛಾಮಿ ತನ್ಮೇ ತಾವತ್ ತ್ವಯೋಚ್ಯತಾಮ್ ॥ ೧೧೩
ತಿರ್ಯಂಚೋಽಪಿ ಹಿ ರಕ್ಷಂತಿ ಸ್ವಾತ್ಮಾನಮಿತಿ ಯತ್ ತ್ವಯಾ ।
ಉಕ್ತೋ ರಾಜಾ ತದಶ್ರೌಷಂ ಯೋಗಾದಹಮಲಕ್ಷಿತಃ ॥ ೧೧೪
ನಿದರ್ಶನಂ ಚೇದತ್ರಾಸ್ತಿ ತನ್ಮೇ ಕಥಯ ಸನ್ಮತೇ ।
ಇತಿ ಯೋಗೇಶ್ವರೇಣೋಕ್ತಃ ಸ್ಮಾಹ ಯೌಗಂಧರಾಯಣಃ ॥ ೧೧೫
ಅಸ್ತಿ ಮಿತ್ರ ತಥಾ ಚಾತ್ರ ಕಥಾಮಾಖ್ಯಾಮಿ ತೇ ಶೃಣು ।
ವಿದಿಶಾನಗರೀಬಾಹ್ಯೇ ನ್ಯಗ್ರೋಧೋಽಭೂತ್ ಪುರಾ ಮಹಾನ್ ॥ ೧೧೬

೧೦೮. ಅದರಲ್ಲಿ ಮುಂಗುಸಿ, ಗೂಬೆ, ಬೆಕ್ಕು, ಇಲಿ ಹೀಗೆ ನಾಲ್ಕು ಪ್ರಾಣಿಗಳು ಬೇರೆ ಬೇರೆ ಬಿಲಗಳಲ್ಲಿ ಇದ್ದವು. ಮಧ್ಯಭಾಗದಲ್ಲಿದ್ದ ಒಂದು ದೊಡ್ಡ ಪೊಟರೆಯಲ್ಲಿ ಬೆಕ್ಕು ವಾಸವಾಗಿತ್ತು.

೧೦೯–೧೧೦. ಗೂಬೆಯಾದರೋ ಮರದ ತುದಿಯಲ್ಲಿ ಯಾರಿಗೂ ಕಾಣಿಸದ ಒಂದು ಬಳ್ಳಿಯ ಪೊದೆಯಲ್ಲಿ ಇತ್ತು. ಇಲಿಗೆ ಇತರ ಮೂರು ಪ್ರಾಣಿಗಳೂ ಶತ್ರುಗಳು. ಬೆಕ್ಕು ಇತರ ಮೂವರ ಶತ್ರು. ಆದ್ದರಿಂದ ಬೆಕ್ಕಿಗೆ ಹೆದರಿ ಇಲಿ ಮತ್ತು ಮುಂಗುಸಿ ಮತ್ತು ಗೂಬೆಗಳು ತಮ್ಮ ಸ್ವಭಾವದಂತೆ ಆಹಾರಕ್ಕೋಸ್ಕರ ರಾತ್ರಿ ವೇಳೆ ಹೊರಗೆ ಹೋಗುತ್ತಿದ್ದವು.

೧೧೧. ಬೆಕ್ಕು ಮಾತ್ರ ಸಮೀಪದಲ್ಲೇ ಇದ್ದ ಹೊಲದಲ್ಲಿ ಇಲಿಯನ್ನು ತಿನ್ನಬೇಕೆಂಬ ಇಚ್ಛೆಯಿಂದ ಹಗಲೂ ರಾತ್ರಿ ನಿರ್ಭಯವಾಗಿ ಅಲೆದಾಡುತ್ತಿತ್ತು.

೧೧೨–೧೧೩. ಅದೇ ರೀತಿ ಇತರೆ ಪ್ರಾಣಿಗಳೂ ಕೂಡ ಆಹಾರ ದೊರೆಯುವುದೆಂಬ ಆಸೆಯಿಂದ ತಮಗೆ ಅನುಕೂಲವಾದ ಕಾಲದಲ್ಲಿ ಉಪಾಯವಾಗಿ ಹೋಗುತ್ತಿದ್ದವು. ಒಂದು ಸಲ ಒಬ್ಬ ಬೇಡನು ಆ ಹೊಲದ ಹತ್ತಿರಕ್ಕೆ ಬಂದು ಬೆಕ್ಕಿನ ಹೆಜ್ಜೆಯನ್ನು ಕಂಡು ಅದನ್ನು ಸಾಯಿಸಲು ಹೊಲದ ಸುತ್ತ ಬಲೆ ಬೀಸಿ ಹೊರಟು ಹೋದನು.

---

ಚತ್ವಾರಃ ಪ್ರಾಣಿನಸ್ತತ್ರ ವಸಂತಿ ಸ್ಮ ಮಹಾತರೌ ।
ನಕುಲೋಲೂಕಮಾರ್ಜಾರಮೂಷಕಾಃ ಪೃಥಗಾಲಯಾಃ ॥ ೧೦೭

ಭಿನ್ನೇ ಭಿನ್ನೇ ಬಿಲೇ ಮೂಲ ಆಸ್ತಾಂ ನಕುಲಮೂಷಕೌ ।
ಮಾರ್ಜಾರೋ ಮಧ್ಯಭಾಗಸ್ಥೇ ತರೋರ್ಮಹತಿ ಕೋಟರೇ ॥ ೧೦೮

ಉಲೂಕಸ್ತು ಶಿರೋಭಾಗೇಽನ್ಯಲಭ್ಯೇ ಲತಾಲಯೇ ।
ಮೂಷಕೋಽತ್ರ ತ್ರಿಭಿರ್ವಧ್ಯೋ ಮಾರ್ಜಾರೇಣ ತ್ರಯೋಽಪರೇ ॥ ೧೦೯

ಅನ್ನಾಯ ಮಾರ್ಜಾರಭಯಾತ್ ಮೂಷಕೋ ನಕುಲಸ್ತಥಾ ।
ಸ್ವಭಾವೇನಾಪ್ಯುಲೂಕಶ್ಚ ಪರಿಭ್ರೇಮುರ್ನಿಶಿ ತ್ರಯಃ ॥ ೧೧೦

ಮಾರ್ಜಾರಶ್ಚ ದಿವಾರಾತ್ರೌ ನಿರ್ಭಯಃ ಪ್ರಭ್ರಮತ್ಯಸೌ ।
ತತ್ರಾಸನ್ನೇ ಯವಕ್ಷೇತ್ರೇ ಸದಾ ಮೂಷಕಲಿಪ್ಸಯಾ ॥ ೧೧೧

ಯೇಽನ್ಯೇಽಪಿ ಯುಕ್ತ್ಯಾ ಜಗ್ಮುಸ್ತತ್ ಸ್ವಕಾಲೇಽನ್ನಾಭಿವಾಂಛಯಾ ।
ಏಕದಾ ಲುಬ್ಧಕಸ್ತತ್ರ ಚಂಡಾಲಃ ಕಶ್ಚಿದಾಯಯೌ ॥ ೧೧೨

ಸ ಮಾರ್ಜಾರಪದಶ್ರೇಣಿಂ ದೃಷ್ಟ್ವಾ ತತ್ಕ್ಷೇತ್ರಗಾಮಿನೀಮ್ ।
ತದ್ವಧಾಯಾಭಿತಃ ಕ್ಷೇತ್ರಂ ಪಾಶಾನ್ ದತ್ವಾ ತತೋ ಯಯೌ ॥ ೧೧೩

೧೧೩. ಆ ದಿನ ರಾತ್ರಿ ಬೆಕ್ಕು ಇಲಿಯನ್ನು ಕೊಲ್ಲಲು ಅಲ್ಲಿಗೆ ಬಂದು ಬಲೆಯಲ್ಲಿ ಸಿಕ್ಕಿಬಿದ್ದಿತು.

೧೧೪. ಆಹಾರಕ್ಕೋಸ್ಕರ ಇಲಿಯೂ ಕೂಡ ಅಲ್ಲಿಗೆ ಬಂದು ಬೆಕ್ಕು ಸಿಕ್ಕಿಬಿದ್ದಿರುವುದನ್ನು ಕಂಡು ಹರ್ಷದಿಂದ ಕುಣಿದಾಡಿತು.

೧೧೫–೧೧೭. ಅದು ದೂರದಿಂದ ಒಂದು ದಾರಿಯಲ್ಲಿ ಹೊಲವನ್ನು ಪ್ರವೇಶಿಸುತ್ತಿದ್ದಾಗ ಅಲ್ಲಿಗೆ ಗೂಬೆ ಮತ್ತು ಮುಂಗುಸಿ ಬಂದು ಬೆಕ್ಕು ಬಲೆಯಲ್ಲಿ ಸಿಕ್ಕಿಬಿದ್ದಿರುವುದನ್ನು ನೋಡಿ ಅಲ್ಲಿ ಇಲಿಯನ್ನು ಹಿಡಿಯಲು ಇಚ್ಛಿಸಿದವು. ಇಲಿಯೂ ಕೂಡ ಅವೆರಡನ್ನು ದೂರದಿಂದಲೇ ನೋಡಿ ಆತಂಕಗೊಂಡು ಚಿಂತಿಸಿತು.

೧೧೮–೧೧೯. ಮುಂಗುಸಿ ಮತ್ತು ಗೂಬೆಯ ಶತ್ರುವಾದ ಬೆಕ್ಕನ್ನು ನಾನು ಆಶ್ರಯಿಸಿದರೆ ಅದು ಒಂದೇ ಏಟಿಗೆ ನನ್ನನ್ನು ಕೊಂದುಬಿಡುತ್ತದೆ. ಬೆಕ್ಕಿನಿಂದ ದೂರವಾಗಿದ್ದರೆ ಅವೆರಡೂ ನನ್ನನ್ನು ತಿಂದು ಹಾಕುತ್ತವೆ. ಆದ್ದರಿಂದ ಶತ್ರುಗಳ ಭಯದಿಂದ ಎಲ್ಲಿಗೆ ಹೋಗಲಿ, ಏನು ಮಾಡಲಿ ?

೧೨೦. ಇರಲಿ. ಬೆಕ್ಕಿನ ಆಶ್ರಯಕ್ಕೆ ಹೋಗುತ್ತೇನೆ. ಅದು ಕಷ್ಟದಲ್ಲಿದೆ. ಅದರ ಬಲೆಯನ್ನು ಕತ್ತರಿಸಿ ಉಪಕಾರ ಮಾಡಿದರೆ ಅದು ನನ್ನನ್ನು ರಕ್ಷಿಸೀತು.

---

ತತ್ರ ರಾತ್ರೌ ಚ ಮಾರ್ಜಾರಃ ಸ ಮೂಷಕಜಿಘಾಂಸಯಾ ।
ಏತ್ಯ ಪ್ರವಿಷ್ಟಸ್ತತ್ಪಾಶೈಃ ಕ್ಷೇತ್ರೇ ತಸ್ಮಿನ್ನಬಧ್ಯತ ॥ ೧೧೩
ಮೂಷಕೋಽಪಿ ತತೋಽನ್ನಾರ್ಥೀ ಸ ತತ್ರ ನಿಭೃತಾಗತಃ ।
ಬದ್ಧಂ ತಂ ವೀಕ್ಷ್ಯ ಮಾರ್ಜಾರಂ ಜಹರ್ಷ ಚ ನನರ್ತ ಚ ॥ ೧೧೪
ಯಾವದ್ವಿಶತಿ ತತ್ ಕ್ಷೇತ್ರಂ ದೂರಾದೇಕೇನ ವರ್ತ್ಮನಾ ।
ತತ್ರ ತೌ ತಾವದಾಯಾತಾವುಲೂಕನಕುಲಾವಪಿ ॥ ೧೧೫
ದೃಷ್ಟಮಾರ್ಜಾರಬಂಧೌ ಚ ಮೂಷಕಂ ಲಬ್ಧುಮೈಚ್ಛತಾಮ್ ।
ಮೂಷಕೋಽಪಿ ಚ ತತ್ ದೃಷ್ಟ್ವಾ ದೂರಾದ್ವಿಗ್ನೋ ವ್ಯಚಿಂತಯತ್ ॥ ೧೧೭
ನಕುಲೋಲೂಕಭಯದಂ ಮಾರ್ಜಾರಂ ಸಂಶ್ರಯೇ ಯದಿ ।
ಬದ್ಧೋಽಪ್ಯೇಕಪ್ರಹಾರೇಣ ಶತ್ರುರ್ಮಾಮೇಷ ಮಾರಯೇತ್ ॥ ೧೧೮
ಮಾರ್ಜಾರಾದ್ದೂರಗಂ ಹನ್ಯಾದುಲೂಕೋ ನಕುಲಶ್ಚ ಮಾಮ್ ।
ತಚ್ಛತ್ರುಸಂಕಟಗತಃ ಕ್ವ ಗಚ್ಛಾಮಿ ಕರೋಮಿ ಕಿಮ್ ॥ ೧೧೯
ಹಂತ ಮಾರ್ಜಾರಮೇವೇಹ ಶ್ರಯಾಮ್ಯಾಪದ್ಗತೋ ಹ್ಯಯಮ್ ।
ಆತ್ಮತ್ರಾಣಾಯ ಮಾಂ ರಕ್ಷೇತ್ ಪಾಶಚ್ಛೇದೋಪಯೋಗಿನಮ್ ॥ ೧೨೦

೧೨೧–೧೨೨. ಎಂದು ಯೋಚಿಸಿ ನಿಧಾನವಾಗಿ ಬೆಕ್ಕಿನ ಹತ್ತಿರ ಹೋಗಿ ಹೇಳಿತು. 'ನೀನು ಬಂಧನದಲ್ಲಿರುವುದು ನನಗೆ ದುಃಖವುಂಟುಮಾಡಿದೆ. ಆದ್ದರಿಂದ ನಿನ್ನ ಬಲೆಯನ್ನು ಕತ್ತರಿಸುತ್ತೇನೆ. ನೇರ ನಡತೆಯಿಂದ ಶತ್ರುಗಳಲ್ಲೂ ಸ್ನೇಹ ಉಂಟಾಗುತ್ತದೆ. ಆದರೆ ನಿನ್ನ ಮನಸ್ಸನ್ನು ಅರಿಯದೆ ನಿನ್ನಲ್ಲಿ ವಿಶ್ವಾಸವುಂಟಾಗದು.'

೧೨೩–೧೨೪. ಅದರ ಮಾತನ್ನು ಕೇಳಿ ಬೆಕ್ಕು ಹೇಳಿತು. 'ಗೆಳೆಯನೇ, ನೀನು ನನ್ನನ್ನು ನಂಬು. ನನ್ನನ್ನು ಬದುಕಿಸಿದ ನೀನು ಇಂದಿನಿಂದ ನನ್ನ ಪ್ರಾಣಸ್ನೇಹಿತ' ಎಂದಿತು. ಈ ಮಾತನ್ನು ಕೇಳುತ್ತಿದ್ದಂತೆಯೇ ಇಲಿಯು ಅದರ ಹತ್ತಿರಕ್ಕೆ ಹೋಯಿತು. ಅದರಿಂದ ನಿರಾಸೆಗೊಂಡ ಮುಂಗುಸಿ ಮತ್ತು ಗೂಬೆ ಹೊರಟು ಹೋದವು.

೧೨೬. ಆಗ ಬಲೆಯೊಳಗೆ ಸಿಕ್ಕಿಬಿದ್ದಿದ್ದ ಬೆಕ್ಕು ಇಲಿಗೆ ಹೇಳಿತು. "ಗೆಳೆಯನೆ, ರಾತ್ರಿಯು ಕಳೆಯುತ್ತಿದೆ. ಬೇಗನೆ ನನ್ನ ಬಲೆಯನ್ನು ಕತ್ತರಿಸು." ಇಲಿಯಾದರೋ ಬೇಡನು ಬರುವುದನ್ನೇ ನಿರೀಕ್ಷಿಸುತ್ತಾ ಸುಮ್ಮಸುಮ್ಮನೆ ಹಲ್ಲುಗಳಿಂದ 'ಕಟಕಟ' ಎಂದು ಬಹಳ ಹೊತ್ತು ಶಬ್ದ ಮಾಡುತ್ತಿತ್ತು.

---

ಇತ್ಯಾಲೋಚ್ಯ ಶನೈರ್ಗತ್ವಾ ಮಾರ್ಜಾರಂ ಮೂಷಕೋಽಬ್ರವೀತ್ ।
ಬದ್ಧೇ ತ್ವಯ್ಯತಿದುಃಖಂ ಮೇ ತತ್ತೇ ಪಾಶಂ ಛಿನದ್ಮ್ಯಹಮ್ ॥ ೧೨೧
ಋಜೂನಾಂ ಜಾಯತೇ ಸ್ನೇಹಃ ಸಹವಾಸಾದ್ರಿಪುಷ್ವಪಿ ।
ಕಿಂ ತು ಮೇ ನಾಸ್ತಿ ವಿಶ್ವಾಸಃ ತವ ಚಿತ್ತಮಜಾನತಃ ॥ ೧೨೨
ತತ್‌ಶ್ರುತ್ವೋವಾಚ ಮಾರ್ಜಾರೋ ಭದ್ರ ವಿಶ್ವಸ್ಯತಾಂ ತ್ವಯಾ ।
ಅದ್ಯ ಪ್ರಭೃತಿ ಮೇ ಮಿತ್ರಂ ಭವಾನ್ ಪ್ರಾಣಪ್ರದಾಯಕಃ ॥ ೧೨೩
ಇತಿ ಶ್ರುತ್ವೈವ ಮಾರ್ಜಾರಾತ್ ತಸ್ಯೋತ್ಸಂಗಂ ಸ ಶಿಶ್ರಿಯೇ ।
ತತ್‌ದೃಷ್ಟ್ವಾ ನಕುಲೋಲೂಕೌ ನಿರಾಶೌ ಯಯತುಸ್ತತಃ ॥ ೧೨೪
ತತೋ ಜಗಾದ ಮಾರ್ಜಾರೋ ಮೂಷಕಂ ಪಾಶಪೀಡಿತಃ ।
ಗತಪ್ರಾಯಾ ನಿಶಾ ಮಿತ್ರ ತತ್ಪಾಶಾಂಶ್ಛಿಂಧಿ ಮೇ ದ್ರುತಮ್ ॥ ೧೨೫
ಮೂಷಕೋಽಪಿ ಶನೈಃ ಛಿಂದನ್ ಲುಬ್ಧಕಾಗಮನೋನ್ಮುಖಃ ।
ಮೃಷಾ ಕಟಕಟಾಯದ್ಭಿಃ ದಶನೈರಕರೋಚ್ಚಿರಮ್ ॥ ೧೨೬

೧೨೭-೧೨೮. ಮರುಕ್ಷಣದಲ್ಲಿ ಬೆಳಗಾಗಲು ಬೇಡನು ಹತ್ತಿರಕ್ಕೆ ಬರುತ್ತಿರುವುದನ್ನು ಕಂಡು ಬೆಕ್ಕು ಬೇಡುತ್ತಿದ್ದಾಗ ಇಲಿಯು ಬಲೆಯನ್ನು ಕತ್ತರಿಸಿತು. ಬಲೆಯು ತುಂಡಾಗಿ ಬೇಡನಿಗೆ ಹೆದರಿ ಬೆಕ್ಕು ಓಡಿಹೋಯಿತು. ಇಲಿಯೂ ಸಹ ಸಾವಿನಿಂದ ಬಿಡುಗಡೆಯನ್ನು ಹೊಂದಿ ಓಡಿಹೋಗಿ ತನ್ನ ಬಿಲವನ್ನು ಹೊಕ್ಕಿತು.

೧೨೯-೧೩೧. ಬೆಕ್ಕು ಪುನಃ ಬಂದು ಕರೆದರೂ ವಿಶ್ವಾಸವಿಲ್ಲದೆ ಇಲಿಯು ಹೇಳಿತು. ಸಂದರ್ಭವಶಾತ್ ಶತ್ರುವು ಮಿತ್ರನಾಗುತ್ತಾನೆಯೇ ಹೊರತು ಯಾವಾಗಲೂ ಅಲ್ಲ ಎಂದು ಹೇಳಿತು. ಹೀಗೆ ಇಲಿಯು ಅನೇಕ ಜನ ಶತ್ರುಗಳಿಂದ ತನ್ನನ್ನು ವಿವೇಕದಿಂದ ರಕ್ಷಿಸಿಕೊಂಡಿತು. ಪ್ರಾಣಿಯಾದ ಇಲಿಯೇ ಆತ್ಮರಕ್ಷಣೆ ಮಾಡಿಕೊಂಡಿರುವಾಗ ಮನುಷ್ಯರ ಬಗ್ಗೆ ಹೇಳುವುದೇನಿದೆ ? ಹೀಗೆ ನಾನು ರಾಜನಿಗೆ ಹೇಳಿದ್ದನ್ನು ಈಗ ನೀನು ಕೇಳಿರುವಿ. ದೇವಿಯ ಸಂರಕ್ಷಣೆ ಮಾಡುತ್ತಾ ಬುದ್ಧಿಯಿಂದ ಸ್ವಂತ ಕಾರ್ಯವನ್ನು ರಕ್ಷಿಸಿಕೊಳ್ಳಬೇಕು.

೧೩೨. ಎಲ್ಲ ಕಡೆಯಲ್ಲೂ ಬುದ್ಧಿಯು ಮುಖ್ಯಮಿತ್ರನೇ ಹೊರತು ಪೌರುಷವಲ್ಲ. ಎಲೈಯೋಗೇಶ್ವರನೆ! ಇನ್ನೊಂದು ಕಥೆಯನ್ನು ಹೇಳುತ್ತೇನೆ ಕೇಳು ಎಂದನು.

೧೩೩. ಶ್ರಾವಸ್ತಿ ಎಂಬ ಊರಿನಲ್ಲಿ ಪ್ರಸೇನಜಿತ್ ಎಂಬ ರಾಜನಿದ್ದನು. ಆ ಊರಿಗೆ ಒಬ್ಬ ಅಪೂರ್ವನಾದ ಬ್ರಾಹ್ಮಣನು ಬಂದನು.

---

ಕ್ಷಣಾದ್ರಾತ್ರೌ ಪ್ರಭಾತಾಯಾಂ ಲುಬ್ಧಕೇ ನಿಕಟಾಗತೇ ।
ಮಾರ್ಜಾರೇಽರ್ಥಯಮಾನೇ ದ್ರಾಕ್ ಪಾಶಾಂಶ್ಚಿಚ್ಛೇದ ಮೂಷಕಃ ॥ ೧೨೭
ಛಿನ್ನಪಾಶೇಽಥ ಮಾರ್ಜಾರೇ ಲುಬ್ಧಕತ್ರಾಸವಿದ್ರುತೇ ।
ಮೂಷಕೋ ಮೃತ್ಯುಮುಕ್ತಸ್ಸನ್ ಪಲಾಯ್ಯ ಪ್ರಾವಿಶದ್ ಬಿಲಮ್ ॥ ೧೨೮
ನಾಶ್ವಸತ್ ಪುನರಾಹೂತೋ ಮಾರ್ಜಾರೇಣ ಜಗಾದ ಚ ।
ಕಾಲಯುಕ್ತ್ಯಾ ಹ್ಯರಿರ್ಮಿತ್ರಂ ಜಾಯತೇ ನ ಚ ಸರ್ವದಾ ॥ ೧೨೯
ಏವಂ ಬಹುಭ್ಯಃ ಶತ್ರುಭ್ಯಃ ಪ್ರಜ್ಞಯಾತ್ಮಾಭಿರಕ್ಷಿತಃ ।
ಮೂಷಕೇನ ತಿರಶ್ಚಾಪಿ ಕಿಂ ಪುನರ್ಮಾನುಷೇಷು ಯತ್ ॥ ೧೩೦
ಏತದುಕ್ತಸ್ತದಾ ರಾಜಾ ಮಯಾ ಯತ್ತತ್ ತ್ವಯಾ ಶ್ರುತಮ್ ।
ಬುದ್ಧ್ಯಾ ಕಾರ್ಯಂ ನಿಜಂ ರಕ್ಷೇತ್ ದೇವೀ ಸಂರಕ್ಷಣಾದಿತಿ ॥ ೧೩೧
ಬುದ್ಧಿರ್ನಾಮ ಚ ಸರ್ವತ್ರ ಮುಖ್ಯಂ ಮಿತ್ರಂ ನ ಪೌರುಷಮ್ ।
ಯೋಗೇಶ್ವರ ತಥಾ ಚೈತಾಮತ್ರಾಪಿ ತ್ವಂ ಕಥಾಂ ಶೃಣು ॥ ೧೩೨
ಶ್ರಾವಸ್ತೀತ್ಯಸ್ತಿ ನಗರೀ ತಸ್ಯಾಂ ಪೂರ್ವಂ ಪ್ರಸೇನಜಿತ್ ।
ರಾಜಾಭೂತ್ತತ್ರ ಚಾಭ್ಯಾಗಾತ್ ಕೋಽಪ್ಯಪೂರ್ವೋ ದ್ವಿಜಃ ಪುರಿ ॥ ೧೩೩

೧೩೪. ಆಚಾರವಂತನಾದ ಅವನು ಬೇರೆಯವರ ಮನೆಯಲ್ಲಿ ಭೋಜನ ಮಾಡುವುದಿಲ್ಲ ಎಂದು ತಿಳಿದ ಒಬ್ಬ ವ್ಯಾಪಾರಿಯು ಅವನನ್ನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇರಿಸಿದನು.

೧೩೫–೧೩೬. ಆ ಬ್ರಾಹ್ಮಣನಿಂದಲೇ ಆಹಾರ ಸಾಮಗ್ರಿಗಳನ್ನೂ ದಕ್ಷಿಣೆಯನ್ನೂ ಕೊಡಿಸುತ್ತಿದ್ದನು. ಅವನ ಬಗ್ಗೆ ತಿಳಿದು ಇತರೆ ವ್ಯಾಪಾರಿಗಳೂ ಹಣವನ್ನು ಕೊಡುತ್ತಿದ್ದುದರಿಂದ ಸಾವಿರ ಚಿನ್ನದ ದೀನಾರಗಳು ಅವನಿಗೆ ಸೇರಿದ್ದುವು. ಆ ಜಿಪುಣನು ಅದನ್ನೆಲ್ಲ ತೆಗೆದುಕೊಂಡು ಕಾಡಿಗೆ ಹೋಗಿ ನೆಲದಲ್ಲಿ ಹೂತಿಟ್ಟು ಬಂದನು.

೧೩೭–೧೩೮. ನಿತ್ಯವೂ ಒಬ್ಬನೇ ಹೋಗಿ ಅದನ್ನು ನೋಡಿಕೊಂಡು ಬರುತ್ತಿದ್ದನು. ಹಾಗೆ ಒಂದು ಸಲ ನೋಡಿದಾಗ ಆ ಗುಂಡಿ ಖಾಲಿಯಾಗಿತ್ತು. ಅದನ್ನು ನೋಡಿ ಕಂಗೆಟ್ಟ ಅವನಿಗೆ ದಿಕ್ಕೇ ತೋಚದಂತಾಯಿತು.

೧೩೯–೧೪೦. ಅವನು ಅಳುತ್ತಾ ತಾನು ವಾಸವಾಗಿದ್ದ ಬ್ರಾಹ್ಮಣನ ಮನೆಗೆ ಬಂದನು. ಅವನು ಕೇಳಿದಾಗ ಎಲ್ಲವನ್ನು ತಿಳಿಸಿದನು. ಮತ್ತೆ ತೀರ್ಥಯಾತ್ರೆಗೆ ಹೋಗಿ ಉಪವಾಸ ಮಾಡಿ ಪ್ರಾಣಬಿಡಲು ಬಯಸಿದನು. ಅದನ್ನು ತಿಳಿದು ಇವನಿಗೆ ಆಹಾರಕ್ಕೆ ವ್ಯವಸ್ಥೆ ಮಾಡಿದ್ದ ವ್ಯಾಪಾರಿಯು ಇತರ ಜನರೊಡನೆ ಬಂದನು.

---

ಸೋಽಶೂದ್ರಾನ್ನಭುಗೇಕೇನ ವಣಿಜಾ ಗುಣವಾನಿತಿ ।
ಬ್ರಾಹ್ಮಣಸ್ಯ ಗೃಹೇ ತತ್ರ ಕಸ್ಯಚಿತ್ ಸ್ಥಾಪಿತೋ ದ್ವಿಜಃ ॥ ೧೩೪
ತತ್ರೈವ ತೇನ ಶುಷ್ಕಾನ್ನದಕ್ಷಿಣಾದಿಭಿರನ್ವಹಮ್ ।
ಆಪೂರ್ಯತ ತತೋಽನ್ಯೈಶ್ಚ ಶನೈರ್ಬುದ್ಧ್ವಾ ವಣಿಗ್ವರೈಃ ॥ ೧೩೫
ತೇನಾಸೌ ಹೇಮದೀನಾರಸಹಸ್ರಂ ಕೃಪಣಃ ಕ್ರಮಾತ್ ।
ಸಂಚಿತ್ಯ ಗತ್ವಾರಣ್ಯೇ ತನ್ನಿಹತ್ಯ ಕ್ಷಿಪ್ತವಾನ್ ಭುವಿ ॥ ೧೩೬
ಏಕಾಕೀ ಪ್ರತ್ಯಹಂ ಗತ್ವಾ ತಚ್ಚ ಸ್ಥಾನಮವೈಕ್ಷತ ।
ಏಕದಾ ಹೇಮಶೂನ್ಯಂ ತತ್‌ಖಾತಂ ವ್ಯಾತ್ತಂ ಚ ದೃಷ್ಟವಾನ್ ॥ ೧೩೭
ಶೂನ್ಯಂ ತತ್ಖಾತಕಂ ತಸ್ಯ ಪಶ್ಯತೋ ಹತಚೇತಸಃ ।
ನ ಪರಂ ಹೃದಿ ಸಂಕ್ರಾಂತಾ ಚಿತ್ತಂ ದಿಕ್ಷ್ವಪಿ ಶೂನ್ಯತಾ ॥ ೧೩೮
ಅಥೋಪಾಗಾಚ್ಚ ವಿಲಪಂಸ್ತಂ ವಿಪ್ರಂ ಯದ್‌ಗೃಹೇ ಸ್ಥಿತಃ ।
ಪೃಷ್ಟಸ್ತೇನ ಚ ಸ್ವವೃತ್ತಾಂತಂ ತಸ್ಮೈ ಸರ್ವಂ ನ್ಯವೇದಯತ್ ॥ ೧೩೯
ಗತ್ವಾ ತೀರ್ಥಮಭುಂಜಾನಃ ಪ್ರಾಣಾಂಸ್ತ್ಯಕ್ತುಮಿಯೇಷ ಚ ।
ಬುದ್ಧ್ವಾ ಚ ಸೋಽನ್ನದಾತಾಸ್ಯ ವಣಿಗನ್ಯೈಃ ಸಹಾಯಯೌ ॥ ೧೪೦

೧೫೧. ಅವನು ಹೇಳಿದನು. ""ಎಲೈ ಬ್ರಾಹ್ಮಣನೆ, ಹಣಕ್ಕೋಸ್ಕರ ಸಾಯಲು ಇಚ್ಛಿಸುತ್ತೀಯಾ ? ಅಕಾಲದ ಮೇಘದಂತೆ ಹಣವು ಬರುತ್ತದೆ, ಹೋಗುತ್ತದೆ."

೧೫೨–೧೫೩. ಹೀಗೆಲ್ಲ ಹೇಳಿದರೂ ಸಾಯುವ ನಿರ್ಧಾರವನ್ನು ಅವನು ಬದಲಿಸಲಿಲ್ಲ. ದೀನರಿಗೆ ಹಣವು ಪ್ರಾಣಕ್ಕಿಂತಲೂ ಹೆಚ್ಚು. ಹೀಗೆ ಸಾಯಲು ತೀರ್ಥಕ್ಷೇತ್ರಕ್ಕೆ ಬ್ರಾಹ್ಮಣನು ಹೊರಟಿರುವುದನ್ನು ತಿಳಿದು ರಾಜ ಪ್ರಸೇನಜಿತನು ಅವನ ಮನೆಗೆ ಬಂದನು.

೧೫೪–೧೫೫. "ಬ್ರಾಹ್ಮಣನೆ, ಹಣವನ್ನು ನೀನು ಹೂತಿಟ್ಟಿದ್ದ ಸ್ಥಳದ ಗುರುತು ಇದೆಯೇ' ಎಂದು ಕೇಳಿದನು. ಅದಕ್ಕೆ ಬ್ರಾಹ್ಮಣನು ಕಾಡಿನಲ್ಲಿ ಒಂದು ಸಣ್ಣ ಗಿಡದ ಬುಡದಲ್ಲಿ ಅಗೆದು ಹೂಳಿಟ್ಟಿದ್ದೆ ಎಂದನು.

೧೫೬–೧೫೭ ಆಗ ರಾಜನು "ಆ ಹಣವನ್ನು ಹುಡುಕಿ ಕೊಡಿಸುತ್ತೇನೆ ಅಥವಾ ನನ್ನ ಕೋಪದಿಂದಲೇ ದುಡ್ಡನ್ನು ಕೊಡುತ್ತೇನೆ. ಪ್ರಾಣವನ್ನು ಮಾತ್ರ ಬಿಡಬೇಡ' ಎಂದು ಹೇಳಿ ಸಾಯುವ ತೀರ್ಮಾನವನ್ನು ಬದಲಿಸುವಂತೆ ಮಾಡಿ ಅವನ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ವ್ಯಾಪಾರಿಗೆ ಹೇಳಿ ರಾಜನು ಅರಮನೆಗೆ ಹೋದನು.

---

ಸ ತಂ ಜಗಾದ ಕಿಂ ಬ್ರಹ್ಮನ್ ವಿತ್ತಹೇತೋರ್ಮುಮೂರ್ಷಸಿ ।
ಅಕಾಲಮೇಘವದ್ವಿತ್ತಂ ಅಕಸ್ಮಾದೇತಿ ಯಾತಿ ಚ ॥ ೧೫೧
ಇತ್ಯಾದ್ಯುಕ್ತೋಽಪಿ ತೇನಾಸೌ ನ ಜಹೌ ಮರಣಗ್ರಹಮ್ ।
ಪ್ರಾಣೇಭ್ಯೋಽಪ್ಯರ್ಥಮಾತ್ರಾ ಹಿ ಕೃಪಣಸ್ಯ ಗರೀಯಸೀ ॥ ೧೫೨
ತತಶ್ಚ ಮೃತಯೇ ತೀರ್ಥಂ ಗಚ್ಛತೋಽಸ್ಯ ದ್ವಿಜನ್ಮನಃ ।
ಸ್ವಯಂ ಪ್ರಸೇನಜಿದ್ರಾಜಾ ತತ್ ಬುಧ್ವಾಂತಿಕಮಾಯಯೌ ॥ ೧೫೩
ಪಪ್ರಚ್ಛ ಚೈವಮ ಕಿಂ ಕಿಂಚಿತ್ ಅಸ್ತಿ ತತ್ರೋಪಲಕ್ಷಣಮ್ ।
ಯತ್ರ ಭೂಮೌ ನಿಖಾತಾಸ್ತೇ ದೀನಾರಾ ಬ್ರಾಹ್ಮಣ ತ್ವಯಾ ॥ ೧೫೪
ತತ್ ಶ್ರುತ್ವಾ ಸ ದ್ವಿಜೋಽವಾದೀತ್ ಆಸ್ತಿ ಕ್ಷುದ್ರೋಽಥ ಪಾದಪಃ ।
ಅಟವ್ಯಾಂ ದೇವ ತನ್ಮೂಲೇ ನಿಖಾತಂ ತನ್ಮಯಾ ಧನಮ್ ॥ ೧೫೫
ಇತ್ಯಾಕರ್ಣ್ಯಾಬ್ರವೀದ್ರಾಜಾ ದಾಸ್ಯಾಮ್ಯನ್ವಿಷ್ಯ ತತ್ತವ ।
ಧನಂ ಸ್ವಕೋಷಾದಥವಾ ಮಾ ತ್ಯಾಕ್ಷೀರ್ಜೀವಿತಂ ದ್ವಿಜ ॥ ೧೫೬
ಇತ್ಯುಕ್ತ್ವಾ ಮರಣೋದ್ಯೋಗಾತ್ ನಿವಾರ್ಯ ವಿನಿಧಾಯ ಚ ।
ದ್ವಿಜಂ ತಂ ವಣಿಜೋ ಹಸ್ತೇ ಸ ರಾಜಾಭ್ಯಂತರಂ ಗತಃ ॥ ೧೫೭

೧೪೮–೧೪೯. ಅಲ್ಲಿ ತನಗೆ ತಲೆನೋವು ಎಂದು ಹೇಳಿ ದ್ವಾರಪಾಲಕನಿಗೆ ಆಜ್ಞೆ ಮಾಡಿ ಎಲ್ಲ ವೈದ್ಯರನ್ನೂ ಕರೆಸುವಂತೆ ಡಂಗೂರ ಹೊಡೆಸಿ ಕರೆಸಿದನು. ವೈದ್ಯರು ಬಂದಾಗ ಒಬ್ಬೊಬ್ಬರನ್ನೂ ಪ್ರತ್ಯೇಕವಾಗಿ ಕರೆದು ಯಾವ ಯಾವ ರೋಗಿಗೆ ಯಾವ ಯಾವ ಔಷಧಿಯನ್ನು ಕೊಟ್ಟಿರುವಿರಿ ಎಂದು ಪ್ರಶ್ನಿಸಿದನು.

೧೫೦. ಪ್ರತಿಯೊಬ್ಬನೂ ರಾಜನಿಗೆ ಎಲ್ಲವನ್ನೂ ಹೇಳಿದನು. ಅವರೊಳಗೆ ಎರಡನೆಯ ದಿನ ಒಬ್ಬ ವೈದ್ಯನು ಹೀಗೆಂದನು.

೧೫೧. ಮಾತೃದತ್ತ ಎಂಬ ವ್ಯಾಪಾರಿಗೆ ಅನಾರೋಗ್ಯವಿದ್ದು ಎರಡುದಿನಗಳ ಹಿಂದೆ ನಾಗಬಲೆ ಎಂಬ ಗಿಡಮೂಲಿಕೆಯನ್ನು ಕೊಡಲು ಹೇಳಿದೆ.

೧೫೨–೧೫೪. ಅದನ್ನು ಕೇಳಿ ರಾಜನು ವ್ಯಾಪಾರಿಯನ್ನು ಕರೆಸಿ "ನಿನಗೆ ನಾಗಬಲೆಯನ್ನು ತಂದುಕೊಟ್ಟವರು ಯಾರು ? ಹೇಳು' ಎಂದನು. ತನ್ನ ಆಳು ತಂದುಕೊಟ್ಟನೆಂದು ಅವನು ಹೇಳಿದಾಗ ರಾಜನು ಆಳನ್ನು ಕರೆಸಿ ಹೀಗೆಂದನು. "ನಾಗಬಲೆಗಾಗಿ ಮರದ ಬುಡವನ್ನು ಅಗೆಯುತ್ತಿದ್ದಾಗ ನಿನಗೆ ದೊರೆತ ದೀನಾರಗಳು ಈ ಬ್ರಾಹ್ಮಣನದು. ಅವನ್ನು ಇವನಿಗೆ ಕೊಡು' ಎಂದನು.

---

ತತ್ರಾದಿಶ್ಯ ಪ್ರತೀಹಾರಂ ಶಿರೋರ್ತಿವ್ಯಪದೇಶತಃ ।
ವೈದ್ಯಾನಾನಾಯಯತ್ ಸರ್ವಾನ್ ದತ್ವಾ ಪಟಹಘೋಷಣಾಮ್ ॥ ೧೪೮
ಆತುರಾಸ್ತೇ ಕಿಯಂತೋಽತ್ರ ಕಸ್ಯಾದಾಃ ಕಿಂ ತ್ವಮೌಷಧಮ್ ।
ಇತ್ಯಪಾನೀಯ ಪಪ್ರಚ್ಛ ತಾನೇಕೈಕಂ ವಿವಿಕ್ತಗಃ ॥ ೧೪೯
ತೇಽಪಿ ತಸ್ಮೈ ತದೈಕೈಕಃ ಸರ್ವಮೂಚುರ್ಮಹೀಪತೇಃ ।
ಏಕೋಽಥ ವೈದ್ಯಸ್ತನ್ಮಧ್ಯಾತ್ ಕ್ರಮಪೃಷ್ಟೋಽಬ್ರವೀದಿದಮ್ ॥ ೧೫೦
ವಣಿಜೋ ಮಾತೃದತ್ತಸ್ಯ ದೇವ ನಾಗಬಲಾ ಮಯಾ ।
ಅಸ್ವಸ್ಥಸ್ಯೋಪದಿಷ್ಟಾದ್ಯ ದ್ವಿತೀಯಂ ದಿನಮೋಷಧಿಃ ॥ ೧೫೧
ತತ್ ಶ್ರುತ್ವಾ ಸ ತಮಾಹೂಯ ರಾಜಾ ವಣಿಜಮಭ್ಯಧಾತ್ ।
ನನು ನಾಗಬಲಾ ಕೇನ ತವಾನೀತೋಽಚ್ಯತಾಮಿತಿ ॥ ೧೫೨
ದೇವ ಕರ್ಮಕರೇಣೇತಿ ತೇನೋಕ್ತೇ ವಣಿಜಾ ತದಾ ।
ಕ್ಷಿಪ್ರಮಾನಾಯ್ಯ ತಂ ರಾಜಾ ಸ ಕರ್ಮಕರಮಬ್ರವೀತ್ ॥ ೧೫೩
ತ್ವಯಾ ನಾಗಬಲಾಹೇತೋಃ ಖನತಾ ಶಾಖಿನಸ್ತಲಮ್ ।
ದೀನಾರಜಾತಂ ಯಲ್ಲಬ್ಧಂ ಬ್ರಹ್ಮಸ್ವಂ ತತ್ ಸಮರ್ಪಯ ॥ ೧೫೪

೧೫೬. ರಾಜನು ಹೇಳಿದ್ದನ್ನು ಕೇಳಿ ಹೆದರಿದ ಸೇವಕನು ಕೂಡಲೇ ಹೋಗಿ ಹಣವನ್ನು ತಂದುಕೊಟ್ಟನು.

೧೫೭–೧೫೮. ರಾಜನು ಉಪವಾಸಮಾಡುತ್ತಿದ್ದ ಬ್ರಾಹ್ಮಣನನ್ನು ಕರೆದು ಹೊರಗೆ ಸಂಚರಿಸುವ ಪ್ರಾಣಗಳಂತಿರುವ ದೀನಾರಗಳನ್ನು ಕೊಟ್ಟನು. ಹೀಗೆ ರಾಜನು ಔಷಧಿಯ ಗಿಡದ ಬುಡದಲ್ಲಿ ಹಣವಿದೆಯೆಂದು ಬುದ್ಧಿಶಕ್ತಿಯಿಂದ ತಿಳಿದನು. ಆದ್ದರಿಂದ ಯಾವಾಗಲೂ ಪೌರುಷವನ್ನು ಗೆಲ್ಲುವ ಬುದ್ಧಿಗೇ ಪ್ರಾಧಾನ್ಯವಿರುತ್ತದೆ. ಇಂತಹ ಕೆಲಸಗಳನ್ನು ಪರಾಕ್ರಮವು ಏನು ಸಾಧಿಸುತ್ತದೆ?

೧೫೯–೧೬೦. ಆದ್ದರಿಂದ ಯೋಗೇಶ್ವರನೆ, ಕಳಿಂಗಸೇನೆಯಲ್ಲಿರುವ ದೋಷವನ್ನು ನಿನ್ನ ಬುದ್ಧಿ ಶಕ್ತಿಯಿಂದ ತಿಳಿದುಕೋ, ದೇವತೆಗಳೂ ಸಹ ಅವಳನ್ನು ಬಯಸುತ್ತಾರೆ. ಆದ್ದರಿಂದಲೇ ರಾತ್ರಿವೇಳೆ ಆಕಾಶದಲ್ಲಿ ನಿನಗೆ ಯಾವುದೋ ಶಬ್ದ ಕೇಳಿಸಿದೆ.

೧೬೧. ಅವಳಲ್ಲಿ ದೋಷವಿರುವುದು ಗೊತ್ತಾದರೆ ನಮಗೆ ಕೆಡುಕು ಆಗುವುದೂ ಇಲ್ಲ, ರಾಜನೂ ಅವಳನ್ನು ಪಡೆಯಲಾರನು, ಅಧರ್ಮವೂ ಆಗುವುದಿಲ್ಲ.'

೧೬೨. ಹೀಗೆ ಬುದ್ಧಿವಂತನಾದ ಯೌಗಂಧರಾಯಣನ ಮಾತನ್ನು ಕೇಳಿ ಬ್ರಹ್ಮರಾಕ್ಷಸನಾದ ಯೋಗೇಶ್ವರನು ಯೌಗಂಧರಾಯಣನನ್ನು ಸಂತೋಷಪಡಿಸಿ ಹೀಗೆಂದನು.

---

ಇತ್ಯುಕ್ತೋ ಭೂಭೃತಾ ಭೀತಃ ಪ್ರತಿಪದ್ಯೈವ ತತ್ಕ್ಷಣಮ್ ।
ಸ ತಾನಾನೀಯ ದೀನಾರಾಂಸ್ತತ್ರ ಕರ್ಮಕರೋ ಜಹೌ ॥ ೧೫೬
ರಾಜಾಪ್ಯುಪೋಷಿತಾಯಾಸ್ಮೈ ದ್ವಿಜಾಯಾಹೂಯ ತಾನ್ ದದೌ ।
ದೀನಾರಾನ್ ಹಾರಿತಪ್ರಾಪ್ತಾನ್ ಪ್ರಾಣಾನಿವ ಬಹಿಶ್ಚರಾನ್ ॥ ೧೫೭
ಏವಂ ಸ ಲಬ್ಧವಾನ್ ಬುದ್ಧ್ಯಾ ನೀತಂ ಮೂಲತಲಾತ್ತರೋಃ ।
ದ್ವಿಜಾರ್ಥಂ ಭೂಪತಿರ್ಜಾನನ್ ಓಷಧಿಂ ತಾಂ ತದುದ್ಭವಾಮ್ ॥ ೧೫೮
ತದೇವಂ ಸರ್ವದಾ ಬುದ್ಧೇಃ ಪ್ರಾಧಾನ್ಯಂ ಜಿತಪೌರುಷಮ್ ।
ಈದೃಶೇಷು ಚ ಕಾರ್ಯೇಷು ಕಿಂ ವಿದಧ್ಯಾತ್ ಪರಾಕ್ರಮಃ ॥ ೧೫೯
ತದ್ಯೋಗೇಶ್ವರ ಕುರ್ವೀಥಾಃ ತ್ವಮಪಿ ಪ್ರಜ್ಞಯಾ ತಥಾ ।
ಯಥಾಕಲಿಂಗಸೇನಾಯಾ ದೋಷೋ ಜ್ಞಾಯೇತ ಕಶ್ಚನ ॥ ೧೫೯
ಅಸ್ತಿ ಚೈತದ್ಯಥಾ ತಸ್ಯಾಂ ಲುಭ್ಯಂತೀಹ ಸುರಾಸುರಾಃ ।
ತಥಾ ಚ ದಿವಿ ಕಸ್ಯಾಪಿ ನಿಶಿ ಶಬ್ದಃ ಶ್ರುತಃ ತ್ವಯಾ ॥ ೧೬೦
ಲಬ್ಧೇಽಥ ದೋಷೇ ತಸ್ಯಾಶ್ಚ ಭವೇದಕುಶಲಂ ನ ನಃ ।
ನೋಪಯಚ್ಛೇತ ತಾಂ ರಾಜಾ ನ ಚಾಧರ್ಮಃ ಕೃತೋ ಭವೇತ್ ॥ ೧೬೧
ಇತ್ಯುದಾರಧಿಯಃ ಶ್ರುತ್ವಾ ಸರ್ವಂ ಯೌಗಂಧರಾಯಣಾತ್ ।
ಯೋಗೇಶ್ವರಸ್ತಂ ಸಂತುಷ್ಯ ಜಗಾದ ಬ್ರಹ್ಮರಾಕ್ಷಸಃ ॥ ೧೬೨

೧೬೩–೧೬೪. "ನೀತಿಶಾಸ್ತ್ರದಲ್ಲಿ ಬೃಹಸ್ಪತಿಯನ್ನು ಹೊರತುಪಡಿಸಿದರೆ ನಿನಗೆ ಸಮಾನರು ಯಾರಿದ್ದಾರೆ? ರಾಜ್ಯವಾಳುವವರಿಗೆ ನಿನ್ನ ಮಂತ್ರಾಲೋಚನೆಯು ಅಮೃತದಂತೆ ಇದೆ. ನಾನು ಬುದ್ಧಿಯಿಂದಲೂ ಶಕ್ತಿಯಿಂದಲೂ ಕಳಿಂಗಸೇನೆಯ ನಡವಳಿಕೆ ಯನ್ನು ತಿಳಿಯಲು ಪ್ರಯತ್ನ ಮಾಡುತ್ತೇನೆ' ಎಂದು ಹೇಳಿ ಯೋಗೇಶ್ವರನು ಹೊರಟುಹೋದನು.

೧೬೫. ಆ ಸಮಯದಲ್ಲಿ ತನ್ನ ಉಪ್ಪರಿಗೆಯಲ್ಲಿದ್ದ ಕಳಿಂಗಸೇನೆಯು ಉಪ್ಪರಿಗೆಯಲ್ಲಿ ಓಡಾಡುತ್ತಿದ್ದ ವತ್ಸರಾಜನನ್ನು ನೋಡಿ ನೋಡಿ ವಿರಹವನ್ನು ಅನುಭವಿಸುತ್ತಿದ್ದಳು.

೧೬೬ ಕಾಮಾತುರಳಾಗಿ ಅವನನ್ನೇ ಧ್ಯಾನಿಸುತ್ತಿದ್ದ ಅವಳು ಕಮಲದ ನಾಳಗಳ ಹಾರ ಹಾಕಿಕೊಂಡು ಶ್ರೀಗಂಧವನ್ನು ಲೇಪಿಸಿಕೊಂಡರೂ ಸ್ವಲ್ಪವೂ ನೆಮ್ಮದಿಯನ್ನು ಹೊಂದಲಿಲ್ಲ.

೧೬೭–೧೬೮. ಈ ಮಧ್ಯೆ ಹಿಂದೆ ಅವಳನ್ನು ನೋಡಿ ಕಾಮವಶನಾಗಿದ್ದ ಮದನವೇಗ ಎಂಬ ವಿದ್ಯಾಧರ ರಾಜನು ಅವಳನ್ನು ಪಡೆಯಲು ತಪಸ್ಸು ಮಾಡಿ ಶಿವನಿಂದ ವರವನ್ನು ಪಡೆದನು. ಆದರೆ ಅವಳು ಬೇರೆ ದೇಶದಲ್ಲಿದ್ದು ಮತ್ತೊಬ್ಬನಲ್ಲಿ ಆಸಕ್ತಳಾಗಿದ್ದರಿಂದ ಇವನಿಗೆ ಸುಲಭವಾಗಿ ದೊರೆಯುವಂತಿರಲಿಲ್ಲ.

---

ಕಸ್ತ್ವಯಾ ಸದೃಶೋ ನೀತೌ ಅನ್ಯೋ ದೇವಾತ್ ಬೃಹಸ್ಪತೇಃ ।
ಅಯಂ ತ್ವಮೃತಸೇಕೋಽಸ್ಯ ತ್ವನ್ಮಂತ್ರೋ ರಾಜ್ಯಶಾಖಿನಃ ॥ ೧೬೩
ಸೋಽಹಂ ಕಲಿಂಗಸೇನಾಯಾಃ ಜಿಜ್ಞಾಸಿಷ್ಯೇ ಗತಿಂ ಸದಾ ।
ಬುದ್ಧ್ಯಾ ಶಕ್ತ್ಯಾಪಿ ಚೇತ್ಯುಕ್ತ್ವಾ ತತೋ ಯೋಗೇಶ್ವರೋ ಯಯೌ ॥ ೧೬೪
ತತ್ಕಾಲಂ ಸಾ ಚ ಹರ್ಮ್ಯಾದೌ ಪರ್ಯಟಂತಂ ಸ್ವಹರ್ಮ್ಯಗಾ ।
ಕಲಿಂಗಸೇನಾ ವತ್ಸೇಶಂ ದೃಷ್ಟ್ವಾ ದೃಷ್ಟ್ವಾ ಸ್ಮ ತಾಮ್ಯತಿ ॥ ೧೬೫
ತನ್ಮನಾಃ ಸ್ಮರಸಂತಪ್ತಾ ಮೃಣಾಲಾಂಗದಹಾರಿಣೀ ।
ಸಾ ಶ್ರೀಖಂಡಾಂಗರಾಗಾ ಚ ನ ಲೇಭೇ ನಿರ್ವೃತಿಂ ಕ್ವಚಿತ್ ॥ ೧೬೬
ಅತ್ರಾಂತರೇ ಸ ತಾಂ ಪೂರ್ವಂ ದೃಷ್ಟ್ವಾ ವಿದ್ಯಾಧರಾಧಿಪಃ ।
ತಸ್ಥೌ ಮದನವೇಗಾಖ್ಯೋ ಗಾಢಾನಂಗಶರಾರ್ದಿತಃ ॥ ೧೬೭
ತತ್ಪ್ರಾಪ್ತಯೇ ತಪಃ ಕೃತ್ವಾ ವರೇ ಲಬ್ಧೇಽಪಿ ಶಂಕರಾತ್ ।
ಸಾನ್ಯಾಸಕ್ತಾನ್ಯದೇಶಸ್ಥಾ ಸುಖಪ್ರಾಪ್ಯಾಸ್ಯ ನಾಭವತ್ ॥ ೧೬೮

೧೯. ಆದ್ದರಿಂದ ವಿದ್ಯಾಧರೇಶ್ವರನು ಅವಕಾಶವನ್ನು ಪಡೆಯಲು ರಾತ್ರಿಯ ವೇಳೆ ಅವಳ ಮನೆಯ ಮೇಲೆ ಆಕಾಶದಲ್ಲಿ ಸುತ್ತಾಡುತ್ತಿದ್ದನು.

೧೨೦. ಒಂದು ರಾತ್ರಿ ತನ್ನ ತಪಸ್ಸಿಗೆ ಮೆಚ್ಚಿದ ಶಿವನು ಕೊಟ್ಟ ಆದೇಶವನ್ನು ನೆನೆದು ವತ್ಸರಾಜನ ರೂಪವನ್ನು ತನ್ನ ವಿದ್ಯೆಯಿಂದ ಪಡೆದನು.

೧೨೧. ಅದೇ ರೂಪದಲ್ಲಿ ಅವಳು ವತ್ಸರಾಜನೇ ಮಂತ್ರಿಗಳ ವಿಳಂಬವನ್ನು ಸಹಿಸದೆ ಬಂದುಬಿಟ್ಟನೇನೋ ಎಂಬಂತೆ ಅವಳ ಮನೆಯನ್ನು ಹೊಕ್ಕನು. ಬಾಗಿಲು ಕಾಯುತ್ತಿದ್ದವನು ಅವನಿಗೆ ವಂದಿಸಿ ಒಳಗೆ ಬಿಟ್ಟನು.

೧೨೨–೧೨೩. ಕಳಿಂಗಸೇನೆಯು ಅವನನ್ನು ನೋಡಿ ಗಡಿಬಿಡಿಯಿಂದ ಕಂಪಿಸುತ್ತಾ ಎದ್ದು ನಿಂತಳು. ಅವಳು ಧರಿಸಿದ್ದ ಆಭರಣಗಳು ""ಇವನು ಅವನಲ್ಲ" ಎಂದು ಹೇಳುತ್ತಿವೆಯೋ ಎಂಬಂತೆ ಶಬ್ದಮಾಡುತ್ತಿದ್ದುವು. ಆದರೂ ವತ್ಸರಾಜನ ರೂಪದಿಂದ ಅವನೇ ಎಂದು ಕಳಿಂಗಸೇನೆಯು ನಂಬುವಂತೆ ಮಾಡಿ ವಿದ್ಯಾಧರನು ಗಾಂಧರ್ವರೀತಿಯಲ್ಲಿ ಅವಳನ್ನು ವಿವಾಹ ಮಾಡಿಕೊಂಡನು.

೧೨೪. ಆ ಸಮಯಕ್ಕೆ ಸರಿಯಾಗಿ ಯೋಗೇಶ್ವರನು ಅದೃಶ್ಯನಾಗಿ ಅಲ್ಲಿಗೆ ಬಂದು ಅವನು ವತ್ಸರಾಜನೆಂಬ ಭ್ರಮೆಯಿಂದ ವ್ಯಥೆಪಟ್ಟನು.

---

ಯತಸ್ತೇನಾಂತರಂ ಲಬ್ಧುಮಸೌ ವಿದ್ಯಾಧರೇಶ್ವರಃ ।
ರಜನೀಷು ದಿವಿ ಭ್ರಾಮ್ಯನ್ ಆಸೀತ್ ತನ್ಮಂದಿರೋಪರಿ ॥ ೧೯

ಸಂಸ್ಮೃತ್ಯ ತು ತಮಾದೇಶಂ ತಪಸ್ತುಷ್ಟಸ್ಯ ಧೂರ್ಜಟೇಃ ।
ಏಕಸ್ಯಾಂ ನಿಶಿ ವತ್ಸೇಶರೂಪಂ ಚಕ್ರೇ ಸ್ವವಿದ್ಯಯಾ ॥ ೧೨೦

ತದ್ರೂಪಶ್ಚ ವಿವೇಶಾಸ್ಯ ಮಂದಿರಂ ದ್ವಾಃಸ್ಥವಂದಿತಃ ।
ಕಾಲಕ್ಷೇಪಾಕ್ಷಮೋ ಗುಪ್ತಂ ಮಂತ್ರಿಣಾಂ ಸ ಇವಾಗತಃ ॥ ೧೨೧

ಕಲಿಂಗಸೇನಾಪ್ಯುತ್ತಸ್ಥೌ ತಂ ದೃಷ್ಟ್ವೋತ್ಕಂಪವಿಕ್ಲವಾ ।
ನ ಸೋಽಯಮಿತಿ ಸಾ ರಾವೈಃ ವಾರ್ಯಮಾಣೇವ ಭೂಷಣೈಃ ॥ ೧೨೨

ತತೋ ವತ್ಸೇಶರೂಪೇಣ ಕ್ರಮಾದ್ವಿಶ್ವಾಸ್ಯ ತೇನ ಸಾ ।
ಭಾರ್ಯಾ ಮದನವೇಗೇನ ಗಾಂಧರ್ವವಿಧಿನಾ ಕೃತಾ ॥ ೧೨೩

ತತ್ಕಾಲಂ ಚ ಪ್ರವಿಷ್ಟಃ ತದ್ ದೃಷ್ಟ್ವಾ ಯೋಗಾದಲಕ್ಷಿತಃ ।
ಯೋಗೇಶ್ವರೋ ವಿಷಣ್ಣೋಽಭೂತ್ ವತ್ಸೇಶಾಲೋಕನಭ್ರಮಾತ್ ॥ ೧೨೪

೧೭೫–೧೭೭. ಕೂಡಲೇ ಯೌಗಂಧರಾಯಣನ ಹತ್ತಿರ ಹೋಗಿ ಹೇಳಿದನು. ಅವನ ಸೂಚನೆಯಂತೆ ವಾಸವದತ್ತೆಯ ಮನೆಗೆ ಹೋಗಿ ನೋಡಿದರೆ ಅಲ್ಲಿ ವತ್ಸರಾಜನು ಇದ್ದನು. ಹರ್ಷದಿಂದ ಪುನಃ ಮಂತ್ರಿಯ ಹತ್ತಿರ ಬಂದು ಅವನು ಹೇಳಿದಂತೆ ಕಳಿಂಗಸೇನೆಯ ಮನೆಯಲ್ಲಿ ಅವಳ ಜೊತೆ ಇರುವ ಗುಪ್ತಕಾಮಿಯ ರೂಪವನ್ನು ರಾತ್ರಿವೇಳೆ ಗುರುತಿಸಿದನು. ಕಳಿಂಗಸೇನೆಯ ಜೊತೆಯಲ್ಲಿ ಮದನವೇಗನು ತನ್ನ ರೂಪದಲ್ಲೇ ನಿದ್ರಿಸುತ್ತಿದ್ದುದನ್ನು ನೋಡಿದನು.

೧೭೮. ಅವನ ಪಾದದಲ್ಲಿ ದಿವ್ಯಪುರುಷಲಕ್ಷಣಗಳಲ್ಲೊಂದರಂತೆ ಧ್ವಜಛತ್ರರೇಖೆಗಳಿದ್ದುವು. ಆ ಪಾದದಲ್ಲಿ ಧೂಳಿರಲಿಲ್ಲ. ನಿದ್ರೆಯಲ್ಲಿ ಮನಸ್ಸು ಕ್ರಿಯಾಶೀಲವಾಗಿಲ್ಲದಿದ್ದುದರಿಂದ, ಮಂತ್ರಧಾರಣೆ ಇಲ್ಲದೆ ನಿಜರೂಪವನ್ನೇ ಹೊಂದಿದ್ದನು.

೧೭೯. ಯೋಗೇಶ್ವರನು ಅದೆಲ್ಲವನ್ನು ನೋಡಿ ಹರ್ಷಗೊಂಡು ಯೌಗಂಧರಾಯಣನ ಬಳಿಗೆ ಬಂದು ವಿಷಯವನ್ನು ತಿಳಿಸಿದನು.

---

ಯೌಗಂಧರಾಯಣಾಯೈತತ್ ಗತ್ವೋಕ್ತ್ವಾ ತನ್ನಿದೇಶತಃ ।
ಯುಕ್ತ್ಯಾ ವಾಸವದತ್ತಾಯಾ ವತ್ಸೇಶಂ ವೀಕ್ಷ್ಯ ಪಾರ್ಶ್ವಗಮ್ ॥ ೧೭೫
ಹೃಷ್ಟೋ ಮಂತ್ರಿವರೋಕ್ತ್ಯೈವ ರೂಪಂ ಸುಪ್ತಸ್ಯ ವೇದಿತುಮ್ ।
ಕಲಿಂಗಸೇನಾ ಪ್ರಚ್ಛನ್ನಕಾಮಿನಃ ಸೋಽಗಮತ್ ಪುನಃ ॥ ೧೭೬
ಗತ್ವಾ ಕಲಿಂಗಸೇನಾಯಾಃ ಸುಪ್ತಾಯಾಃ ಶಯನೀಯಕೇ ।
ಸುಪ್ತಂ ಮದನವೇಗಂ ತಂ ಸ್ವರೂಪೇ ಸ್ಥಿತಮೈಕ್ಷತ ॥ ೧೭೭
ಛತ್ರಧ್ವಜಾಂಕನಿರ್ಧೂಲಿಪಾದಾಬ್ಜಂ ದಿವ್ಯಮಾನುಷಮ್ ।
ಸ್ವಾಪಾಂತರ್ಹಿತತದ್ವಿದ್ಯಾವೀತರೂಪವಿವರ್ತನಮ್ ॥ ೧೭೮
ತತ್ರ ಗತ್ವಾ ಯಥಾ ದೃಷ್ಟಂ ನಿವೇದ್ಯ ಪರಿತೋಷವಾನ್ ।
ಯೋಗೇಶ್ವರೋ ಜಗಾದಾಸೌ ಹೃಷ್ಟೋ ಯೌಗಂಧರಾಯಣಮ್ ॥ ೧೭೯

೧೮೦–೧೮೨. ನನ್ನಂಥವರು ಇದನ್ನು ತಿಳಿಯಲಾರರು. ನೀತಿ ಎಂಬ ಕಣ್ಣುಳ್ಳ ನಿನಗೆ ಮಾತ್ರ ತಿಳಿಯುತ್ತದೆ. ನಿನ್ನ ಮಂತ್ರಾಲೋಚನೆಯಿಂದ ರಾಜನಿಗೆ ಯಾವುದೂ ಕಷ್ಟವಾಗಿರುವುದಿಲ್ಲ. ಸೂರ್ಯನಿಲ್ಲದ ಆಕಾಶ, ನೀರಿಲ್ಲದ ಸರೋವರ, ಮಂತ್ರಿಯಿಲ್ಲದ ರಾಜ್ಯ ಮತ್ತು ಸತ್ಯವಿಲ್ಲದ ಮಾತು ಎಂತಹವು, ಎಂದು ಹೇಳಿದ ಯೋಗೇಶ್ವರನನ್ನು ಪ್ರೀತಿಯಿಂದ ಕಳಿಸಿಕೊಟ್ಟು ಯೌಗಂಧರಾಯಣನು ಬೆಳಿಗ್ಗೆ ವತ್ಸರಾಜನನ್ನು ನೋಡಲು ಹೋದನು.

೧೮೩–೧೮೫. ಕಳಿಂಗಸೇನೆಯ ವಿಷಯವನ್ನು ರಾಜನು ಕೇಳಿದಾಗ ಹೀಗೆಂದನು. ರಾಜನೆ, "ಸ್ವಚ್ಛಂದೆಯಾದ ಈ ಕಳಿಂಗಸೇನೆಯು ನಿನ್ನ ಕೈಹಿಡಿಯಲು ಯೋಗ್ಯಳಲ್ಲ. ಇವಳು ತನ್ನ ಇಚ್ಛೆಯಿಂದಲೇ ಪ್ರಸೇನಜಿತನನ್ನು ನೋಡಲು ಬಂದಿದ್ದಾಳೆ. ಅವನು ಮುದುಕನಾಗಿರುವುದನ್ನು ಕಂಡು ನಿಮ್ಮಲ್ಲಿ ಒಳ್ಳೆಯ ರೂಪ ಇರುವುದರಿಂದ ಬಂದಿದ್ದಾಳೆ. ಈಗ ಪರಪುರುಷನಲ್ಲಿಯೂ ಆಸಕ್ತಳಾಗಿದ್ದಾಳೆ' ಎಂದನು.

---

ನ ವೇತ್ತಿ ಮಾದೃಶಃ ಕಿಂಚಿತ್ ವೇತ್ಸಿ ತ್ವಂ ನೀತಿಚಕ್ಷುಷಾ ।
ತವ ಮಂತ್ರೇಣ ದುಃಸಾಧ್ಯಂ ಸಿದ್ಧಂ ಕಾರ್ಯಮಿದಂ ಪ್ರಭೋಃ ॥ ೧೮೦
ಕಿಂ ವಾ ವ್ಯೋಮ ವಿನಾರ್ಕೇಣ ಕಿಂ ತೋಯೇನ ವಿನಾ ಸರಃ ।
ಕಿಂ ಮಂತ್ರೇಣ ವಿನಾ ರಾಜ್ಯಂ ಕಿಂ ಸತ್ಯೇನ ವಿನಾ ವಚಃ ॥ ೧೮೧
ಇತ್ಯುಕ್ತವಂತಮಾಮಂತ್ರ್ಯ ಪ್ರೀತೋ ಯೋಗೇಶ್ವರಂ ತತಃ ।
ಪ್ರಾತರ್ವತ್ಸೇಶ್ವರಂ ದ್ರಷ್ಟುಂ ಅಗಾತ್ ಯೌಗಂಧರಾಯಣಃ ॥ ೧೮೨
ತಮುಪೇತ್ಯ ಯಥಾವಚ್ಚ ಕಥಾಪ್ರಸ್ತಾವತೋಽಬ್ರವೀತ್ ।
ನೃಪಂ ಕಲಿಂಗಸೇನಾರ್ಥೇ ಪೃಷ್ಟಕಾರ್ಯವಿನಿಶ್ಚಯಮ್ ॥ ೧೮೩
ಸ್ವಚ್ಛಂದಾಸೌ ನ ತೇ ರಾಜನ್ ಪಾಣಿಸ್ಪರ್ಶಮಿಹಾರ್ಹತಿ ।
ಏಷಾಹಿ ಸ್ವೇಚ್ಛಯಾ ದ್ರಷ್ಟುಂ ಪ್ರಸೇನಜಿತಮಾಗತಾ ॥ ೧೮೪
ವಿರಕ್ತಾ ವೀಕ್ಷ್ಯ ತಂ ವೃದ್ಧಂ ತ್ವಾಂ ಪ್ರಾಪ್ತಾ ರೂಪಲೋಭತಃ ।
ತದನ್ಯಪುರುಷಾಸಂಗಮಪಿ ಸ್ವೇಚ್ಛಂ ಕರೋತ್ಯಸೌ ॥ ೧೮೫

೧೮೬–೧೮೭. ಅದನ್ನು ಕೇಳಿ ರಾಜನು "ಒಳ್ಳೆಯಕುಲದವಳಾಗಿದ್ದರೂ ಹೀಗೇಕೆ ನಡೆದುಕೊಳ್ಳುತ್ತಿದ್ದಾಳೆ ? ನನ್ನ ಅಂತಃಪುರವನ್ನು ಪ್ರವೇಶಿಸುವ ಸಾಮರ್ಥ್ಯ ಯಾರಿಗುಂಟು ?' ಎಂದನು. ಆಗ ಯೌಗಂಧರಾಯಣನು '"ಈ ರಾತ್ರಿಯೇ ನಿನಗೆ ಪ್ರತ್ಯಕ್ಷವಾಗಿ ತೋರಿಸುತ್ತೇನೆ" ಎಂದು ಹೇಳಿದನು.

೧೮೮–೧೮೯. "ಸಿದ್ಧರು ಮೊದಲಾದ ದಿವ್ಯಪುರುಷರೇ ಇವಳನ್ನು ಬಯಸುತ್ತಾರೆ. ಇನ್ನು ಮನುಷ್ಯರು ಬಯಸಲಾರರೆ ? ದಿವ್ಯಲೋಕದವರನ್ನು ತಡೆಯಲು ಯಾರಿಗೆ ತಾನೇ ಸಾಧ್ಯ ? ಬಾ, ಈ ರಾತ್ರಿಯೇ ಸಾಕ್ಷಾತ್ತಾಗಿ ನೋಡು' ಎಂದು ಹೇಳಿದಾಗ ರಾಜನೂ ಅದಕ್ಕೆ ಒಪ್ಪಿದನು.

೧೯೦–೧೯೧. ಯೌಗಂಧರಾಯಣನು ವಾಸವದತ್ತೆಯ ಬಳಿಗೆ ಹೋಗಿ ಪದ್ಮಾವತಿ ರಾಣಿಯನ್ನು ಬಿಟ್ಟು ಬೇರೆ ಯಾರನ್ನೂ ರಾಜನು ವಿವಾಹವಾಗಲು ಬಿಡುವುದಿಲ್ಲ ಎಂದು ನಾನು ಮಾಡಿದ್ದ ಪ್ರತಿಜ್ಞೆಯನ್ನು ನಡೆಸಿಕೊಟ್ಟಿರುತ್ತೇನೆ ಎಂದು ಹೇಳಿ ಕಳಿಂಗಸೇನೆಯ ವೃತ್ತಾಂತವನ್ನು ಅವಳಿಗೆ ವಿವರವಾಗಿ ತಿಳಿಸಿದನು.

೧೯೨. 'ನನಗೆ ಸಿಕ್ಕಿರುವುದು ನೀನು ಹೇಳಿದಂತೆ ನಡೆದುಕೊಂಡಿದ್ದರ ಫಲ' ಎಂದು ಹೇಳಿ ವಾಸವದತ್ತೆಯು ಅವನಿಗೆ ನಮಸ್ಕರಿಸಿ ಅಭಿನಂದಿಸಿದಳು.

---

ತತ್ ಶ್ರುತ್ವಾ ಕುಲಕನ್ಯೇಯಂ ಕಥಮೇವಂ ಸಮಾಚರೇತ್ ।
ಶಕ್ತಿಃ ಕಸ್ಯ ಪ್ರವೇಷ್ಟುಂ ವಾ ಮದೀಯಾಂತಃಪುರಾಂತರೇ ॥ ೧೮೬
ಇತಿ ರಾಜ್ಞೋದಿತೇऽವಾದೀತ್ ಧೀಮಾನ್ ಯೌಗಂಧರಾಯಣಃ ।
ಅದ್ಯೈವ ದರ್ಶಯಾಮ್ಯೇತತ್ ಪ್ರತ್ಯಕ್ಷಂ ನಿಶಿ ದೇವ ತೇ ॥ ೧೮೭
ದಿವ್ಯಾಸ್ತಾಮಭಿವಾಂಛಂತಿ ಸಿದ್ಧಾದ್ಯಾ ಮಾನುಷೋऽತ್ರ ಕಃ ।
ದಿವ್ಯಾನಾಂ ಚ ಗತೀ ರೋದ್ಧುಂ ರಾಜನ್ ಕೇನೇಹ ಶಕ್ಯತೇ ॥ ೧೮೮
ತದೇಹಿ ಸಾಕ್ಷಾತ್ ಪಶ್ಯೇತಿ ವಾದಿನಾ ತೇನ ಮಂತ್ರಿಣಾ ।
ಸಹ ಗಂತುಂ ಮತಿಂ ಚಕ್ರೇ ತತ್ರ ರಾತ್ರೌ ಸ ಭೂಪತಿಃ ॥ ೧೮೯
ಪದ್ಮಾವತ್ಯಾ ಋತೇ ರಾಜ್ಞ್ಯಾ ನ ವಿವಾಹ್ಯಾಪರೇತಿ ಯತ್ ।
ಪ್ರೋಕ್ತಂ ದೇವಿ ಪ್ರತಿಜ್ಞಾತಂ ಮಯಾ ನಿರ್ವ್ಯೂಢಮದ್ಯ ತತ್ ॥ ೧೯೦
ಇತ್ಯಥಾಭ್ಯೇತ್ಯ ತಾಂ ದೇವೀ ಮುಕ್ತ್ವಾ ಯೌಗಂಧರಾಯಣಃ ।
ಕಲಿಂಗಸೇನಾವೃತ್ತಾಂತಂ ತಂ ತಸ್ಮೈ ಸರ್ವಮುಕ್ತವಾನ್ ॥ ೧೯೧
ತ್ವದೀಯಶಿಕ್ಷಾನುಷ್ಠಾನಫಲಮೇತನ್ಮಮೇತಿ ಸಾ ।
ದೇವೀ ವಾಸವದತ್ತಾಪಿ ಪ್ರಣತಾಭಿನನಂದ ತಮ್ ॥ ೧೯೨

೧೯೩–೧೯೬. ರಾತ್ರಿಹೊತ್ತಿನಲ್ಲಿ ಎಲ್ಲರೂ ಮಲಗಿದ್ದಾಗ ವತ್ಸರಾಜ ಮತ್ತು ಯೌಗಂಧರಾಯಣ ಕಳಿಂಗಸೇನೆಯ ಮನೆಗೆ ಹೋದರು. ಯಾರಿಗೂ ಕಾಣದೆ ಮರೆಯಲ್ಲಿ ನಿಂತು ಕಳಿಂಗಸೇನೆಯೊಡನೆ ಮಲಗಿರುವ ತನ್ನ ವೇಷವನ್ನು ಧರಿಸಿರುವ ಮದನವೇಗನನ್ನು ನೋಡಿದನು. ಅಪರಾಧಿಯಾದ ಅವನನ್ನು ಕೂಡಲೇ ಕೊಲ್ಲಬೇಕೆಂದು ರಾಜನು ಹೊರಟಾಗ ಮದನವೇಗನು ತನ್ನ ವಿದ್ಯೆಯ ಬಲದಿಂದ ಎಚ್ಚರಗೊಂಡು ವಿದ್ಯಾಧರನಾಗಿ ಆಕಾಶಕ್ಕೆ ಹಾರಿಹೋದನು. ತತ್‌ಕ್ಷಣ ಕಳಿಂಗಸೇನೆಯೂ ಎಚ್ಚರಗೊಂಡಳು.

೧೯೭ ಹಾಸಿಗೆಯು ಶೂನ್ಯವಾಗಿರುವುದನ್ನು ಕಂಡು ಅವಳು "ವತ್ಸರಾಜನು ಮೊದಲೇ ಎದ್ದು ನನ್ನನ್ನು ಬಿಟ್ಟು ಹೋದನಲ್ಲ !' ಎಂದು ಹೇಳಿಕೊಂಡಳು.

೧೯೮–೧೯೯. ಅದನ್ನು ಕೇಳಿ ಯೌಗಂಧರಾಯಣನು ವತ್ಸರಾಜನಿಗೆ ಹೇಳಿದನು. ನಿನ್ನ ರೂಪವನ್ನು ಧರಿಸಿದವನಿಂದ ಇವಳು ವಂಚಿತಳಾಗಿದ್ದಾಳೆ. ಅವನು ಯೋಗ ಬಲವುಳ್ಳವನೆಂದು ತಿಳಿದು ನಿನಗೆ ಪ್ರತ್ಯಕ್ಷವಾಗಿ ಅವನನ್ನು ತೋರಿಸಿದ್ದೇನೆ. ಆದರೆ ಅವನು ದಿವ್ಯಪ್ರಭಾವವುಳ್ಳವನಾದ್ದರಿಂದ ಅವನನ್ನು ಕೊಲ್ಲಲು ಸಾಧ್ಯವಾಗುವು ದಿಲ್ಲ

---

ತತೋ ನಿಶೀಥೇ ಸಂಸುಪ್ತೇ ಜನೇ ವತ್ಸೇಶ್ವರೋ ಯಯೌ ।
ಗೃಹಂ ಕಲಿಂಗಸೇನಾಯಾಃ ಸ ಚ ಯೌಗಂಧರಾಯಣಃ ॥ ೧೯೩
ಅದೃಷ್ಟಶ್ಚ ಪ್ರವಿಷ್ಟೋಽತ್ರ ತಸ್ಯಾ ನಿದ್ರಾಜುಷೋಽಂತಿಕೇ ।
ಸುಪ್ತಂ ಮದನವೇಗಂ ತಂ ಸ್ವರೂಪಸ್ಥಂ ದದರ್ಶ ಸಃ ॥ ೧೯೪
ಹಂತುಮಿಚ್ಛತಿ ಯಾವಚ್ಚ ಸ ತಂ ಸಾಹಸಿಕಂ ನೃಪಃ ।
ತಾವತ್ಸ ವಿದ್ಯಯಾ ವಿದ್ಯಾಧರೋಽಭೂತ್ ಪ್ರತಿಬೋಧಿತಃ ॥ ೧೯೫
ಪ್ರಬುದ್ಧಶ್ಚ ಸ ನಿರ್ಗತ್ಯ ಝಟಿತ್ಯುದಪತನ್ನಭಃ ।
ಕ್ಷಣಾತ್ ಕಲಿಂಗಸೇನಾಪಿ ಸಾ ಪ್ರಬುದ್ಧಾಭವತ್ತತಃ ॥ ೧೯೬
ಶೂನ್ಯಂ ಶಯನಮಾಲೋಕ್ಯ ಜಗಾದ ಚ ಕಥಂ ಹಿ ಮಾಮ್ ।
ಪೂರ್ವಂ ಪ್ರಬುಧ್ಯ ವತ್ಸೇಶಃ ಸುಪ್ತಾಂ ಮುಕ್ತ್ವೈವ ಗಚ್ಛತಿ ॥ ೧೯೭
ತದಾಕರ್ಣ್ಯ ಸ ವತ್ಸೇಶಮಾಹ ಯೌಗಂಧರಾಯಣಃ ।
ಏಷಾ ವಿಧ್ವಂಸಿತಾನೇನ ಶೃಣು ತದ್ರೂಪಧಾರಿಣಾ ॥ ೧೯೮
ಸೈಷ ಯೋಗಬಲಾತ್ ಜ್ಞಾತ್ವಾ ಸಾಕ್ಷಾತ್ತೇ ದರ್ಶಿತೋ ಮಯಾ ।
ಕಿಂತು ದಿವ್ಯಪ್ರಭಾವತ್ವಾತ್ ಅಸೌ ಹಂತುಂ ನ ಶಕ್ಯತೇ ॥ ೧೯೯

೨೦೦. ಹೀಗೆಂದು ಹೇಳಿ ರಾಜ ಮತ್ತು ಯೌಗಂಧರಾಯಣ ಇಬ್ಬರೂ ಅವಳ ಹತ್ತಿರ ಹೋದರು. ಕಳಿಂಗ ಸೇನೆಯು ಅವರನ್ನು ಆದರದಿಂದ ಬರಮಾಡಿಕೊಂಡಳು.

೨೦೧–೨೦೩. "ಈಗ ತಾನೇ ಎದ್ದು ಎಲ್ಲಿಗೆ ಹೋಗಿ ಮಂತ್ರಿಯೊಡನೆ ಬಂದೆ ?' ಎಂದು ಅವಳು ರಾಜನನ್ನು ಕೇಳಿದಳು. ಅದಕ್ಕೆ ಉತ್ತರವಾಗಿ ಯೌಗಂಧರಾಯಣನು "ಕಳಿಂಗಸೇನೆ, ಯಾವನೋ ಮಾಯಾವಿಯು ವತ್ಸರಾಜನ ವೇಷದಲ್ಲಿ ಬಂದು ನಿನ್ನನ್ನು ಮದುವೆಯಾಗಿರುವನೇ ಹೊರತು ನಿಜವಾಗಿಯೂ ನಮ್ಮ ರಾಜ ವತ್ಸರಾಜನಲ್ಲ' ಎಂದನು. ಅದನ್ನು ಕೇಳಿ ಗಾಬರಿಗೊಂಡು ಹೃದಯದಲ್ಲಿ ಬಾಣನೆಟ್ಟವಳಂತೆ ಅವಳು ಅಳುತ್ತಾ ವತ್ಸರಾಜನಿಗೆ ಹೀಗೆಂದಳು.

೨೦೪. ""ರಾಜನೆ, ಹಿಂದೆ ದುಷ್ಯಂತನು ಶಕುಂತಲೆಯನ್ನು ಗಾಂಧರ್ವ ರೀತಿಯಲ್ಲಿ ಮದುವೆಯಾಗಿ ಅನಂತರ ಅವಳನ್ನು ಮರೆತಂತೆ ನೀನೂ ನನ್ನನ್ನು ಮದುವೆಯಾಗಿ ಮರೆತಿರುವೆ."

೨೦೫–೨೦೬. ಅವಳು ಹೇಳಿದ್ದನ್ನು ಕೇಳಿ ರಾಜನು ತಲೆ ತಗ್ಗಿಸಿಕೊಂಡು "ಖಂಡಿತವಾಗಿಯೂ ನಿನ್ನನ್ನು ನಾನು ಮದುವೆಯಾಗಿಲ್ಲ. ಈಗ ತಾನೇ ನಾನು ಬಂದಿದ್ದೇನೆ' ಎಂದು ಹೇಳಿದನು. ಆಗ ಮಂತ್ರಿಯಾದ ಯೌಗಂಧರಾಯಣನು ರಾಜನನ್ನು "ಬಾ' ಎಂದು ಹೇಳಿ ಅರಮನೆಗೆ ಕರೆದುಕೊಂಡು ಹೋದನು.

---

ಇತ್ಯುಕ್ತ್ವಾ ಸ ಚ ರಾಜಾ ಚ ಸಹ ತಾಮುಪಜಗ್ಮತುಃ ।
ಕಲಿಂಗಸೇನಾ ಸಾಪ್ಯೇತೌ ದೃಷ್ಟ್ವಾ ತಸ್ಥೌ ಕೃತಾದರಾ ॥ ೨೦೦
ಅಧುನೈವ ಕ್ವ ಗತ್ವಾ ತ್ವಂ ರಾಜನ್ ಪ್ರಾಪ್ತಃ ಸಮಂತ್ರಿಕಃ ।
ಇತಿ ಬ್ರುವಾಣಾಮವದತ್ತಾಂ ಸ ಯೌಗಂಧರಾಯಣಃ ॥ ೨೦೧
ಕಲಿಂಗಸೇನೇ ಕೇನಾಪಿ ಮಾಯಾವತ್ಸೇಶರೂಪಿಣಾ ।
ಸಂಮೋಹ್ಯ ಪರಿಣೀತಾಸಿ ನ ತ್ವಂ ಮತ್ಸ್ವಾಮಿನಾಮುನಾ ॥ ೨೦೨
ತಚ್ಛ್ರುತ್ವಾ ಸಾತಿ ಸುಭ್ರಾಂತಾ ವಿದ್ಧೇವ ಹೃದಿ ಪತ್ತ್ರಿಣಾ ।
ಕಲಿಂಗಸೇನಾ ವತ್ಸೇಶಂ ಜಗಾದೋದಶ್ರುಲೋಚನಾ ॥ ೨೦೩
ಗಾಂಧರ್ವವಿಧಿನಾಹಂ ತೇ ಪರಿಣೀತಾಪಿ ವಿಸ್ಮೃತಾ ।
ಕಿಂ ಸ್ವಿದ್ ರಾಜನ್ ಯಥಾಪೂರ್ವಂ ದುಷ್ಯಂತಸ್ಯ ಶಕುಂತಲಾ ॥ ೨೦೪
ಇತ್ಯುಕ್ತೇ ಸ ತಯಾ ರಾಜಾ ತಾಮುವಾಚಾನತಾನನಃ ।
ಸತ್ಯಂ ನ ಪರಿಣೀತಾಸಿ ಮಯಾದ್ಯೈವಾಗತೋ ಹ್ಯಹಮ್ ॥ ೨೦೫
ಇತ್ಯುಕ್ತವಂತಂ ವತ್ಸೇಶಂ ಮಂತ್ರೀ ಯೌಗಂಧರಾಯಣಃ ।
ಏಹೀತ್ಯುಕ್ತ್ವಾ ತತಃ ಸ್ವೈರಮನೈಷೀದ್ರಾಜಮಂದಿರಮ್ ॥ ೨೦೬

೨೦೭–೨೦೯. ರಾಜನು ಮಂತ್ರಿಯೊಡನೆ ಹೋದಮೇಲೆ ಗುಂಪಿನಿಂದ ಬೇರೆಯಾದ ಜಿಂಕೆಯಂತೆ ಬಂಧುಗಳಿಂದ ದೂರವಾಗಿದ್ದ ಕಳಿಂಗಸೇನೆಯ ಮುಖವು ಆನೆಗಳ ಹಿಂಡು ತುಳಿದ ಕಮಲದಂತಾಗಿತ್ತು. ಅವಳ ತಲೆಗೂದಲು ಚದುರಿಹೋಗಿದ್ದು ಸಂಭೋಗದಿಂದ ಮುಖ ಸೊರಗಿತ್ತು. ಕನ್ಯಾತ್ವವನ್ನು ಕಳೆದುಕೊಂಡಿದ್ದ ಅವಳು ಬೇರೆ ದಾರಿಕಾಣದೆ ಆಕಾಶವನ್ನು ನೋಡುತ್ತಾ ಹೀಗೆಂದಳು.

೨೧೦–೨೧೧. 'ವತ್ಸರಾಜನ ರೂಪದಲ್ಲಿ ಬಂದು ನನ್ನನ್ನು ಮದುವೆಯಾದವನು ಈಗಲೇ ಇಲ್ಲಿ ಪ್ರತ್ಯಕ್ಷವಾಗಲಿ. ಅವನೇ ನನ್ನ ಪತಿ'. ಹೀಗೆ ಹೇಳುತ್ತಿದ್ದಂತೆಯೇ ಆಕಾಶದಿಂದ ಆ ವಿದ್ಯಾಧರನು ದಿವ್ಯರೂಪವನ್ನು ಧರಿಸಿ ಹಾರ ಮತ್ತು ಕೇಯೂರಗಳಿಂದ ಶೋಭಿಸುತ್ತಾ ಕೆಳಗೆ ಇಳಿದು ಬಂದನು.

---

ತತಃ ಸಮಂತ್ರಿಕೇ ರಾಜ್ಞಿ ಗತೇ ಸಾತ್ರ ವಿದೇಶಗಾ ।
ಮೃಗೀವ ಯೂಥವಿಭ್ರಷ್ಟಾ ಪರಿತ್ಯಕ್ತಸ್ವಬಾಂಧವಾ ॥ ೨೦೭
ಸಂಭೋಗವಿದಲತ್ಪತ್ರಮುಖಾಬ್ಜಾ ಗಜಪೀಡಿತಾ ।
ಪದ್ಮಿನೀವ ಪರಿಕ್ಷಿಪ್ತಕಬರೀಭ್ರಮರಾವಲಿಃ ॥ ೨೦೮
ವಿನಷ್ಟಕನ್ಯಕಾಭಾವಾ ನಿರುಪಾಯಕ್ರಮಾ ಸತೀ ।
ಕಲಿಂಗಸೇನಾ ಗಗನಂ ವೀಕ್ಷಮಾಣೇದಮಬ್ರವೀತ್ ॥ ೨೦೯
ವತ್ಸೇಶರೂಪಿಣಾ ಯೇನ ಪರಿಣೀತಾಸ್ಮಿ ಕೇನಚಿತ್ ।
ಪ್ರಕಾಶಃ ಸೋಽಸ್ತು ಕೌಮಾರಃ ಸ ಏವ ಹಿ ಪತಿರ್ಮಮ ॥ ೨೧೦
ಏವಂ ತಯೋಕ್ತೇ ಗಗನಾತ್ ಸೋಽತ್ರ ವಿದ್ಯಾಧರಾಧಿಪಃ ।
ಅವಾತರತ್ ದಿವ್ಯರೂಪೋ ಹಾರಕೇಯೂರರಾಜಿತಃ ॥ ೨೧೧

೨೧೨–೨೧೪. ""ನೀನು ಯಾರು ?" ಎಂದು ಕಳಿಂಗಸೇನೆಯು ಕೇಳಿದಾಗ ಅವನು "ನಾನು ಮದನವೇಗ ಎಂಬ ವಿದ್ಯಾಧರನು. ಹಿಂದೆ ನಿನ್ನ ತಂದೆಯ ಮನೆಯಲ್ಲಿ ನಿನ್ನನ್ನು ನೋಡಿ ನಿನ್ನನ್ನು ಪಡೆಯುವುದಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡಿ ವರವನ್ನು ಪಡೆದೆ. ವತ್ಸರಾಜನಲ್ಲಿ ನೀನು ಅನುರಕ್ತಳಾಗಿದ್ದರಿಂದ ನಾನು ಅವನ ವೇಷದಲ್ಲಿ ಯುಕ್ತಿಯಿಂದ ಬಂದು ನಿನ್ನನ್ನು ವಿವಾಹವಾದೆ" ಎಂದನು.

೨೧೫. ಈ ರೀತಿಯಾಗಿ ಅವನು ಹೇಳಿದ ಅಮೃತದಂತಹ ಮಾತನ್ನು ಕೇಳಿ ಕಳಿಂಗಸೇನೆಯ ಹೃದಯ ಕಮಲವು ಅರಳಿತು.

೨೧೬ ಅನಂತರ ಮದನವೇಗನು ಪ್ರಿಯತಮೆಯನ್ನು ಸಂತೈಸಿ ಬಂಗಾರದ ರಾಶಿಯನ್ನೇ ಸುರಿಸಿದನು. ಔಚಿತ್ಯ ತಿಳಿದು ಅವಳೂ ಅವನನ್ನು ತನ್ನ ಪತಿ ಎಂದು ಗೌರವವನ್ನು ಹೊಂದಿದಳು. ಮದನವೇಗನು ಮತ್ತೆ ಬರುವುದಾಗಿ ಹೇಳಿ ಆಕಾಶಕ್ಕೆ ಹಾರಿದನು.

---

ಕೋ ಭವಾನಿತಿ ಪೃಷ್ಟಶ್ಚ ತಯೈವಂ ಸ ಜಗಾದ ತಾಮ್ ।
ಅಹಂ ಮದನವೇಗಾಖ್ಯಃ ತನ್ವಿ ವಿದ್ಯಾಧರಾಧಿಪಃ ॥ ೨೧೨
ಮಯಾ ಚ ಪ್ರಾಗ್ವಿಲೋಕ್ಯ ತ್ವಾಂ ಪುರಾ ಪಿತೃಗೃಹೇ ಸ್ಥಿತಾಮ್ ।
ತ್ವತ್ಪ್ರಾಪ್ತಿದಃ ತಪಃ ಕೃತ್ವಾ ವರಃ ಪ್ರಾಪ್ತೋ ಮಹೇಶ್ವರಾತ್ ॥ ೨೧೩
ವತ್ಸೇಶ್ವರಾನುರಕ್ತಾ ಚ ತದ್ರೂಪೇಣ ಮಯಾ ದ್ರುತಮ್ ।
ಅವೃತ್ತತದ್ವಿವಾಹೈವ ಪರಿಣೀತಾಸಿ ಯುಕ್ತಿತಃ ॥ ೨೧೪
ಇತಿ ವಾಕ್ಸುಧಯಾ ತಸ್ಯ ಶ್ರುತಿಮಾರ್ಗಪ್ರವಿಷ್ಟಯಾ ।
ಕಿಂಚಿತ್ ಕಲಿಂಗಸೇನಾಭೂತ್ ಉಚ್ಛ್ವಾಸಿತಹೃದಂಬುಜಾ ॥ ೨೧೫
ಅಥ ಸ ಮದನವೇಗಸ್ತಾಂ ಸಮಾಶ್ವಾಸ್ಯ ಕಾಂತಾಂ
ವಿಹಿತಧೃತಿವಿತೀರ್ಣಸ್ವರ್ಣರಾಶಿಃ ಸ ತಸ್ಯೈ ।
ಉಚಿತ ಇತಿ ತಯಾಂತರ್ಬದ್ಧಸದ್ಭರ್ತೃಭಕ್ತಿಃ
ಪುನರುಪಗಮನಾಯ ದ್ಯಾಂ ತದೈವೋತ್ಪಪಾತ ॥ ೨೧೬

೨೧೭ ಗಂಡನ ಮನೆಯು ದಿವ್ಯಲೋಕದಲ್ಲಿದೆ. (ಅಲ್ಲಿಗೆ) ಮನುಷ್ಯಳಾದ ತಾನು ಹೋಗುವಂತಿಲ್ಲ. ತಂದೆಯ ಮನೆಯನ್ನು ಕಾಮಪೀಡಿತಳಾಗಿ ಬಿಟ್ಟು ಬಂದಿದ್ದರಿಂದ ಅಲ್ಲಿ ಹೋಗುವಂತಿಲ್ಲ. ಆದ್ದರಿಂದ ವತ್ಸದೇಶದಲ್ಲಿಯೇ ಇರುವುದೆಂದು ತೀರ್ಮಾನಿಸಿದಳು. ಅದಕ್ಕೆ ಮದನವೇಗನ ಒಪ್ಪಿಗೆಯನ್ನೂ ಪಡೆದಳು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ

'ಮದನಕಂಚುಕಾ'ಲಂಬಕದ ಏಳನೆಯ ತರಂಗ ಮುಗಿಯಿತು.

---

ದಿವ್ಯಾಸ್ಪದಂ ಸ್ವಪತಿಸದ್ಮ ನ ಮರ್ತ್ಯಗಮ್ಯಂ
ಕಾಮಾತ್ಪಿತುರ್ಭವನಮುಜ್ಝಿತಮಿತ್ಯವೇಕ್ಷ್ಯ ।
ತತ್ರೈವ ವಸ್ತುಮಥ ಸಾಪಿ ಕಲಿಂಗಸೇನಾ
ಚಕ್ರೇ ಧೃತಿಂ ಮದನವೇಗಕೃತಾಭ್ಯನುಜ್ಞಾ ॥ ೨೧೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

'ಮದನಕಂಚುಕಾ'ಲಂಬಕೇ ಸಪ್ತಮಸ್ತರಂಗಃ ।

# ಎಂಟನೆಯ ತರಂಗ

೧–೨. ಹೀಗಿರುವಾಗ ಒಮ್ಮೆ ವತ್ಸರಾಜನು ಕಳಿಂಗಸೇನೆಯ ಅನುಪಮವಾದ ದೇಹವನ್ನೇ ನೆನೆಯುತ್ತಾ ಕಾಮಾಸಕ್ತನಾಗಿ ಮೇಲೆದ್ದು ಖಡ್ಗವನ್ನು ಕೈಯಲ್ಲಿ ಹಿಡಿದು ಅವಳ ಮನೆಗೆ ಒಬ್ಬನೇ ಹೋದನು. ಅವಳು ಅವನಿಗೆ ಗೌರವದಿಂದ ಆತಿಥ್ಯವನ್ನು ಮಾಡಿದಳು.

೩–೪. ಅವನು ಅವಳನ್ನು ತನ್ನ ಪತ್ನಿಯಾಗು ಎಂದು ಕೇಳಿಕೊಂಡನು. ಅವಳು ತಾನು ಪರಪುರುಷನ ಪತ್ನಿ ಎಂದು ಹೇಳಿ ಇವನ ಬೇಡಿಕೆಯನ್ನು ತಿರಸ್ಕರಿಸಿದಳು. ಆಗ ಇವನು ಅವಳಿಗೆ ಹೀಗೆಂದನು. "ನೀನು ಮೂರನೆಯ ಪುರುಷನನ್ನು ಪಡೆದಿರುವೆ. ಆದ್ದರಿಂದ ನೀನು ಪತಿವ್ರತೆಯಲ್ಲ. ನಿನ್ನೊಡನೆ ಸಂಬಂಧ ಬೆಳೆಸಿದರೆ ನನಗೆ ಪರಸ್ತ್ರೀ ಸಂಬಂಧದ ದೋಷ ತಟ್ಟುವುದಿಲ್ಲ' ಎಂದನು.

---

# ಅಷ್ಟಮಸ್ತರಂಗಃ

ತತಃ ಕಲಿಂಗಸೇನಾಯಾಃ ಸ್ಮರನ್ನನುಪಮಂ ವಪುಃ ।
ಏಕದಾ ಮನ್ಮಥಾವಿಷ್ಟೋ ನಿಶಿ ವತ್ಸೇಶ್ವರೋಽಬ್ರವೀತ್ ॥ ೧
ಉತ್ಥಾಯ ಖಡ್ಗಹಸ್ತಃ ಸನ್ ಗತ್ವೈವ ಪ್ರವಿವೇಶ ಸಃ ।
ಏಕಾಕೀ ಮಂದಿರಂ ತಸ್ಯಾಃ ಕೃತಾತಿಥ್ಯಾದರಸ್ತಯಾ ॥ ೨
ತತ್ರ ಪ್ರಾರ್ಥಯಮಾನಸ್ತಾಂ ಭಾರ್ಯಾರ್ಥೇ ಸ ಮಹೀಪತಿಃ ।
ಪರಪತ್ನ್ಯಹಮಸ್ಮೀತಿ ಪ್ರತ್ಯಾಖ್ಯಾತಸ್ತಯಾಬ್ರವೀತ್ ॥ ೩
ತೃತೀಯಂ ಪುರುಷಂ ಪ್ರಾಪ್ತಾ ಯತಸ್ತ್ವಮಸಿ ಬಂಧಕೀ ।
ಪರದಾರಗತೌ ದೋಷೋ ನ ಮೇ ತ್ವದ್ಗಮನೇ ತತಃ ॥ ೪

೫-೯. ರಾಜನು ಹೀಗೆ ಹೇಳಿದಾಗ ಅವಳು ಹೇಳಿದಳು. "ರಾಜನೇ, ನಿನಗಾಗಿ ಬಂದ ನನ್ನನ್ನು ನಿನ್ನ ರೂಪ ಧರಿಸಿದ ಮದನವೇಗ ಎಂಬ ವಿದ್ಯಾಧರನು ಮದುವೆಯಾದನು. ಅವನೊಬ್ಬನೇ ನನ್ನ ಪತಿ. ಹಾಗಿರುವಾಗ ನಾನು ಹೇಗೆ ವೇಶ್ಯೆಯಂತೆ ಆಗುತ್ತೇನೆ ? ಬಂಧುಗಳನ್ನು ಬಿಟ್ಟು ಬಂದು ಸ್ವೇಚ್ಛಾಚಾರದಿಂದ ಹಾಳಾದವರಿಗೆ ಇಂತಹ ಕಷ್ಟಗಳು ಒದಗಿಬರುತ್ತವೆ. ಇನ್ನು ಕನ್ಯೆಯರ ಕಥೆ ಏನು ? ಅಪಶಕುನವನ್ನು ಕಂಡ ನನ್ನ ಗೆಳತಿಯು ಬೇಡವೆಂದರೂ ಲೆಕ್ಕಿಸದೆ ಒಬ್ಬ ದೂತನನ್ನು ನಿನ್ನ ಹತ್ತಿರಕ್ಕೆ ಕಳಿಸಿದ್ದಕ್ಕೆ ಈ ಫಲ ನನಗೆ ಸಿಕ್ಕಿದೆ ! ನೀನು ನನ್ನನ್ನು ಬಲಾತ್ಕಾರದಿಂದ ಮುಟ್ಟಿದರೆ ಕೂಡಲೇ ಪ್ರಾಣಕಳೆದುಕೊಳ್ಳುತ್ತೇನೆ. ಒಳ್ಳೆಯ ಕುಲದಲ್ಲಿ ಹುಟ್ಟಿದ ಯಾವ ಹೆಣ್ಣು ಗಂಡನಿಗೆ ದ್ರೋಹ ಬಗೆಯುತ್ತಾಳೆ ? ಒಂದು ಕಥೆ ಹೇಳುತ್ತೇನೆ ಕೇಳು' ಎಂದಳು.

೧೦. ಹಿಂದೆ ಚೇದಿದೇಶದಲ್ಲಿ ಇಂದ್ರದತ್ತ ಎಂಬ ರಾಜನಿದ್ದನು.

---

ಏವಂ ಕಲಿಂಗಸೇನಾ ಸಾ ರಾಜ್ಞೋಕ್ತಾ ಪ್ರತ್ಯುವಾಚ ತಮ್ ।
ತ್ವದರ್ಥಮಾಗತಾ ರಾಜನ್ ಅಹಂ ವಿದ್ಯಾಧರೇಣ ಹಿ ॥ ೫
ವ್ಯೂಢಾ ಮದನವೇಗೇನ ಸ್ವೈರಂ ತ್ವದ್ರೂಪಧಾರಿಣಾ ।
ಸ ಏವೈಕಶ್ಚ ಭರ್ತಾ ಮೇ ತತ್ಕಸ್ಮಾದಸ್ಮಿ ಬಂಧಕೀ ॥ ೬
ಕಿಂ ವಾತಿಕ್ರಾಂತಬಂಧೂನಾಂ ಸ್ವೇಚ್ಛಾಚಾರಹತಾತ್ಮನಾಮ್ ।
ಇಮಾಸ್ತಾ ವಿಪದಃ ಸ್ತ್ರೀಣಾಂ ಕುಮಾರೀಣಾಂ ಕಥೈವ ಕಾ ॥ ೭
ದೃಷ್ಟ್ವಾ ಶಕುನಯಾ ಸಖ್ಯಾ ನಿಷಿದ್ಧಾಪಿ ವ್ಯಸರ್ಜಯಮ್ ।
ತ್ವತ್ಪಾರ್ಶ್ವಂ ಯದಹಂ ದೂತಂ ತಸ್ಯ ಚೇದಂ ಫಲಂ ಮಮ ॥ ೮
ತತ್ಸ್ಪ್ರಕ್ಷ್ಯಸಿ ಬಲಾನ್ಮಾಂ ಚೇತ್ ಪ್ರಾಣಾಂಸ್ತ್ಯಕ್ಷ್ಯಾಮ್ಯಹಂ ತತಃ ।
ಕಾ ನಾಮ ಕುಲಜಾ ಹಿ ಸ್ತ್ರೀ ಭರ್ತೃದ್ರೋಹಂ ಕರಿಷ್ಯತಿ ॥ ೯
ತಥಾ ಚ ಕಥಯಾಮ್ಯತ್ರ ತವ ರಾಜನ್ ಕಥಾಂ ಶೃಣು ।
ಪುರಾಭೂದಿಂದ್ರದತ್ತಾಖ್ಯಃ ಚೇದಿದೇಶಮಹೀಪತಿಃ ॥ ೧೦

೧೧–೧೩. ಅವನು ಪಾಪನಾಶಕವಾದ ಒಂದು ಪುಣ್ಯಕ್ಷೇತ್ರದಲ್ಲಿ ಕೀರ್ತಿಗೋಸ್ಕರ ಒಂದು ದೇವಸ್ಥಾನವನ್ನು ಕಟ್ಟಿಸಿದನು. ಅವನು ಕೀರ್ತಿಶರೀರವನ್ನು ಅಪೇಕ್ಷಿಸಿ ಈ ಶರೀರವು ಕ್ಷಣಿಕವಾದುದು ಎಂದು ಭಾವಿಸಿದ್ದನು. ಭಕ್ತನಾಗಿದ್ದ ಅವನು ಮಂದಿರವನ್ನು ನೋಡಲು ಪ್ರತಿದಿನವೂ ಹೋಗುತ್ತಿದ್ದನು. ತೀರ್ಥಕ್ಷೇತ್ರದಲ್ಲಿ ಸ್ನಾನಮಾಡಲು ಯಾವಾಗಲೂ ಜನರು ಬರುತ್ತಿದ್ದರು. ಒಂದು ಸಲ ಆ ರಾಜನು ತೀರ್ಥದಲ್ಲಿ ಸ್ನಾನಮಾಡುವುದಕ್ಕಾಗಿ ಬಂದಿದ್ದ ಒಬ್ಬ ವ್ಯಾಪಾರಿಯ ಹೆಂಡತಿಯನ್ನು ನೋಡಿದನು. ಅವಳ ಗಂಡನು ದೂರದೇಶಕ್ಕೆ ಹೋಗಿದ್ದನು.

೧೪–೧೬. ಅವಳು ಶುಭ್ರಕಾಂತಿವತಿಯಾಗಿ ಅಮೃತದಿಂದ ಲೇಪಿಸಲ್ಪಟ್ಟಂತೆ, ಬಣ್ಣಬಣ್ಣದ ಆಭರಣಗಳಿಂದ ಶೋಭಿತಳಾಗಿ, ಓಡಾಡುತ್ತಿರುವ ಮನ್ಮಥನ ರಾಜಧಾನಿಯೋ ಎಂಬಂತೆ ಮನೋರಮೆಯಾಗಿದ್ದಳು. ನಿನ್ನಿಂದ ನಾನು ವಿಶ್ವವನ್ನೇ ಗೆಲ್ಲಬಲ್ಲೆ ಎಂದು ಮನ್ಮಥನ ಎರಡು ಬತ್ತಳಿಕೆಯ ಶೋಭೆಯು ಅವಳ ಪಾದಗಳನ್ನು ಪ್ರೀತಿಯಿಂದ ಆಲಿಂಗಿಸಿದೆಯೋ ಎನ್ನುವಂತೆ ಇದ್ದಳು. ಅವಳನ್ನು ರಾಜನು ನೋಡುತ್ತಿದ್ದಂತೆಯೇ ಅವನ ಮನಸ್ಸನ್ನು ಸೆಳೆದಳು. ಅವನು ವಿವಶನಾಗಿ ಅವಳ ಮನೆಯನ್ನು ಹುಡುಕಿಕೊಂಡು ಹೋಗಿ ರಾತ್ರಿ ಪ್ರವೇಶಿಸಿದನು.

---

ಸ ಪಾಪಶೋಧನೇ ತೀರ್ಥೇ ಕೀರ್ತ್ಯೈ ದೇವಕುಲಂ ಮಹತ್ ।
ಚಕ್ರೇ ಯಶಃಶರೀರಾರ್ಥೀ ಶರೀರಂ ವೀಕ್ಷ್ಯ ಭಂಗುರಮ್ ॥ ೧೧
ತಚ್ಚ ಭಕ್ತಿರಸಾತ್ ಶಶ್ವತ್ ವೀಕ್ಷಿತುಂ ಸ ಯಯೌ ನೃಪಃ ।
ಸರ್ವಶ್ಚ ತೀರ್ಥಸ್ನಾನಾಯ ಸದಾ ತತ್ರಾಯಯೌ ಜನಃ ॥ ೧೨
ಏಕದಾ ಚ ದದರ್ಶೈಕಾಂ ತೀರ್ಥಸ್ನಾನಾರ್ಥಮಾಗತಾಮ್ ।
ಸ ರಾಜಾತ್ರ ವಣಿಗ್ಭಾರ್ಯಾಂ ಪ್ರವಾಸಸ್ಥಿತಭರ್ತೃಕಾಮ್ ॥ ೧೩
ಸ್ವಚ್ಛಕಾಂತಿಸುಧಾಸಿಕ್ತಾಂ ಚಿತ್ರರೂಪವಿಭೂಷಣಾಮ್ ।
ಜಂಗಮಾಮಿವ ಕಂದರ್ಪರಾಜಧಾನೀಂ ಮನೋರಮಾಮ್ ॥ ೧೪
ತ್ವಯಾಹಂ ವಿಜಯೇ ವಿಶ್ವಮಿತಿ ಪ್ರೀತ್ಯೇವ ಪಾದಯೋಃ ।
ಆಶ್ಲಿಷ್ಟಾಂ ಪಂಚಬಾಣಸ್ಯ ತೂಣೀರದ್ವಯಶೋಭಯಾ ॥ ೧೫
ಸಾ ದೃಷ್ಟ್ವೈವ ಮನಸ್ತಸ್ಯ ಜಹಾರ ನೃಪತೇಸ್ತಥಾ ।
ಯಥಾನ್ವಿಷ್ಯ ಗೃಹಂ ತಸ್ಯಾಃ ಸ ಯಯೌ ವಿವಶೋ ನಿಶಿ ॥ ೧೬

೧೭–೧೮. ಅವಳನ್ನು ಅವನು ಪ್ರಾರ್ಥಿಸಿದಾಗ ಅವಳು ಹೇಳಿದಳು. "ನೀನು ನಮ್ಮ ರಕ್ಷಕ. ಪರಸ್ತ್ರೀಸಂಬಂಧವು ನಿನಗೆ ಯೋಗ್ಯವಲ್ಲ. ಬಲಾತ್ಕಾರದಿಂದ ನನ್ನನ್ನು ಮುಟ್ಟಿದರೆ ನಿನಗೆ ಮಹಾ ಅಧರ್ಮವು ಉಂಟಾದೀತು. ನಾನೂ ಕೂಡಲೇ ಸತ್ತುಹೋಗುತ್ತೇನೆ. ಅವಮಾನವನ್ನು ಸಹಿಸಲಾರೆ' ಎಂದಳು.

೧೯. ಅವಳು ಹೀಗೆ ಹೇಳಿದರೂ ಬಲಾತ್ಕಾರಮಾಡಲು ರಾಜನು ಬಯಸಿದ್ದರಿಂದ ತನ್ನ ಶೀಲ ಕೆಡುವುದೆಂಬ ಭಯದಿಂದ ಅವಳ ಎದೆಯು ಒಡೆದುಹೋಯಿತು.

೨೦. ಅದನ್ನು ಕಂಡು ನಾಚಿಕೆಪಟ್ಟ ರಾಜನು ಕೂಡಲೇ ಹಿಂದಿರುಗಿ ಹೋಗಿ ಕೆಲವು ದಿನಗಳ ಕಾಲ ಪಶ್ಚಾತ್ತಾಪಪಟ್ಟು ಮರಣಹೊಂದಿದನು.

೨೧. ಈ ರೀತಿಯಾದ ಕಥೆಯನ್ನು ಹೇಳಿ ಕಳಿಂಗಸೇನೆಯು ಭಯದಿಂದ ಅವನಿಗೆ ನಮಸ್ಕರಿಸಿ ಮತ್ತೆ ಹೀಗೆಂದಳು.

೨೨. "ಆದ್ದರಿಂದ ನನ್ನ ಪ್ರಾಣತೆಗೆಯುವ ಇಂತಹ ಅಧರ್ಮವನ್ನು ಮಾಡಬೇಡ. ಇಲ್ಲಿ ವಾಸಮಾಡಲು ನನಗೆ ಅವಕಾಶ ನೀಡು. ಇಲ್ಲವಾದರೆ ಬೇರೆ ಕಡೆಗೆ ಹೋಗುತ್ತೇನೆ'

೨೩. ಕಳಿಂಗಸೇನೆಯು ಹೀಗೆ ಹೇಳಿದ್ದನ್ನು ಕೇಳಿ ವತ್ಸರಾಜನು ವಿಚಾರಮಾಡಿ ಆ ಕಾರ್ಯದಿಂದ ವಿಮುಖನಾಗಿ ಧರ್ಮವನ್ನು ತಿಳಿದವನಾಗಿ ಅವಳಿಗೆ ಇಂತೆಂದನು.

---

ತಾಂ ಚ ಪ್ರಾರ್ಥಯಮಾನಸ್ಸಃ ಸಂಜಗದೇ ಸ ತಯಾ ನೃಪಃ ।
ರಕ್ಷಿತಾಂ ತ್ವಂ ನ ಯುಕ್ತಂ ತೇ ಪರದಾರಾಭಿಮರ್ಶನಮ್ ॥ ೧೭
ಹಠಾತ್ ಸ್ಪೃಶಸಿ ವಾ ಮಾಂ ಚೇತ್ ಅಧರ್ಮಸ್ತೇ ಮಹಾನ್ ಭವೇತ್ ।
ಮರಿಷ್ಯಾಮಿ ಚ ಸದ್ಯೋಽಹಂ ನ ಸಹಿಷ್ಯೇ ಚ ದೂಷಣಮ್ ॥ ೧೮
ಇತ್ಯುಕ್ತೇಽಪಿ ತಯಾ ತಸ್ಮಿನ್ ಬಲಂ ರಾಜ್ಞಿ ಚಿಕೀರ್ಷತಿ ।
ಶೀಲಭ್ರಂಶಭಯಾತ್ತಸ್ಯಾಃ ಸದ್ಯೋ ಹೃದಯಮಸ್ಫುಟತ್ ॥ ೧೯
ತದ್‌ದೃಷ್ಟ್ವಾ ಸಪದಿ ಹ್ರೀತಃ ಸ ಗತ್ವೈವ ಯಥಾಗತಮ್ ।
ದಿನೈಸ್ತೈನಾನುತಾಪೇನ ರಾಜಾ ಪಂಚತ್ವಮಾಯಯೌ ॥ ೨೦
ಇತ್ಯಾಖ್ಯಾಯ ಕಥಾಮೇತಾಂ ಸಭಯಪ್ರಶ್ರಯಾನತಾ ।
ಭೂಯಃ ಕಲಿಂಗಸೇನಾ ಸಾ ವತ್ಸೇಶ್ವರಮಭಾಷತ ॥ ೨೧
ತಸ್ಮಾದಧರ್ಮೋ ಮತ್ಪ್ರಾಣಹರಣೇ ಮಾ ಮತಿಂ ಕೃಥಾಃ ।
ಇಹಾಶ್ರಿತಾಯಾ ವಸ್ತುಂ ಮೇ ದೇಹಿ ಯಾಮ್ಯನ್ಯತೋಽನ್ಯಥಾ ॥ ೨೨
ಏತತ್ಕಲಿಂಗಸೇನಾತಃ ಶ್ರುತ್ವಾ ವತ್ಸೇಶ್ವರೋಽಥ ಸಃ ।
ವಿಚಾರ್ಯ ವಿರತೋ ಭೂತ್ವಾ ಧರ್ಮಜ್ಞಸ್ತಾಮಭಾಷತ ॥ ೨೩

೨೪. "ರಾಜಕುಮಾರಿ, ಇನ್ನು ಮೇಲೆ ನೀನು ನಿನ್ನ ಗಂಡನ ಜೊತೆಯಲ್ಲಿ ಸ್ವತಂತ್ರಳಾಗಿ ಇಲ್ಲಿ ಇರು. ನಾನು ಏನೂ ಹೇಳುವುದಿಲ್ಲ. ಭಯಪಡಬೇಡ.'

೨೫. ಹೀಗೆ ಹೇಳಿ ರಾಜನು ತನ್ನ ಮನೆಗೆ ಹೋದನು. ಈ ವಿಷಯವನ್ನು ತಿಳಿದು ಮದನವೇಗನು ಆಕಾಶದಿಂದ ಇಳಿದು ಬಂದನು.

೨೬. "ಪ್ರಿಯೇ, ನೀನು ಒಳ್ಳೆಯದನ್ನೇ ಮಾಡಿರುವೆ. ಹಾಗೆ ಮಾಡದಿದ್ದರೆ ಒಳ್ಳೆಯದು ಆಗುತ್ತಿರಲಿಲ್ಲ. ಆಗ ನಾನೂ ಸಹ ಇದನ್ನು ಸಹಿಸುತ್ತಿರಲಿಲ್ಲ.'

೨೭. ಎಂದು ಹೇಳಿ ಸಮಾಧಾನಮಾಡುತ್ತಾ ಆ ರಾತ್ರಿಯನ್ನು ಅವಳೊಡನೆ ಕಳೆದು ಮತ್ತೆ ಅಲ್ಲಿಗೆ ಹೋಗಿ ಬಂದು ಮಾಡುತ್ತಿದ್ದನು.

೨೮. ಕಳಿಂಗಸೇನೆಯೂ ಆ ವಿದ್ಯಾಧರೇಶ್ವರನು ಮನುಷ್ಯರೂಪದಲ್ಲಿದ್ದರೂ ದಿವ್ಯವಾದ ಭೋಗಗಳನ್ನು ಅನುಭವಿಸುತ್ತಾ ಇದ್ದಳು.

೨೯-೩೦. ವತ್ಸರಾಜನೂ ಸಹ ಅವಳ ಚಿಂತೆಯನ್ನು ಬಿಟ್ಟು ಮಂತ್ರಿಯ ಮಾತನ್ನು ನೆನೆಯುತ್ತಾ ತನಗೆ ಲಭ್ಯವಾಗಿರುವ ರಾಣಿ, ಮಗ ಮತ್ತು ರಾಜ್ಯದೊಡನೆ (ಅದರ ಮಹತ್ವವನ್ನು ತಿಳಿದು) ಆನಂದದಿಂದ ಇದ್ದನು. ರಾಣಿಯಾದ ವಾಸವದತ್ತೆ ಮತ್ತು ಮಂತ್ರಿ ಯೌಗಂಧರಾಯಣನು ನೀತಿ ಎಂಬ ಕಲ್ಪವೃಕ್ಷದ ಬಳ್ಳಿ ಫಲ ನೀಡಿರುವುದರಿಂದ ಸಂತಸಗೊಂಡರು.

---

ರಾಜಪುತ್ರಿ ವಸ ಸ್ವೇಚ್ಛಂ ಭರ್ತ್ರಾ ಸಮಮಿಹಾಧುನಾ ।
ನಾಹಂ ವಕ್ಷ್ಯಾಮಿ ತೇ ಕಿಂಚಿದಿದಾನೀಂ ಮಾ ಭಯಂ ಕೃಥಾಃ ॥ ೨೪
ಇತ್ಯುಕ್ತ್ವೈವ ಗತೇ ತಸ್ಮಿನ್ ಸ್ವೈರಂ ರಾಜ್ಞಿ ಸ್ವಮಂದಿರಮ್ ।
ಶ್ರುತ್ವಾ ಮದನವೇಗಸ್ತಂ ನಭಸೋಽವತತಾರ ಸಃ ॥ ೨೫
ಪ್ರಿಯೇ ಸಾಧು ಕೃತಂ ನೈವಮಕರಿಷ್ಯಃ ಶುಭೇ ಯದಿ ।
ನಾಭವಿಷ್ಯಚ್ಛುಭಂ ಯಸ್ಮಾತ್ ನಾಸಹಿಷ್ಯತ ತನ್ಮಯಾ ॥ ೨೬
ಇತ್ಯುಕ್ತ್ವಾ ಸಾಂತ್ವಯಿತ್ವಾ ತಾಂ ನಿಶಾಂ ನೀತ್ವಾ ತಯಾ ಸಹ ।
ತತ್ರೈವ ಗಚ್ಛನ್ನಾಗಚ್ಛನ್ನಾಸೀದ್ವಿದ್ಯಾಧರೋಽಥ ಸಃ ॥ ೨೭
ಕಲಿಂಗಸೇನಾಪಿ ಚ ಸಾ ಪತ್ಯೌ ವಿದ್ಯಾಧರೇಶ್ವರೇ ।
ತತ್ರಾಸ್ತಮರ್ತ್ಯಭಾವೇಽಪಿ ದಿವ್ಯಭೋಗಸುಖಾನ್ವಿತಾ ॥ ೨೮
ವತ್ಸರಾಜೋಽಪಿ ತಚ್ಚಿಂತಾಂ ಮುಕ್ತ್ವಾ ಮಂತ್ರಿವಚಃ ಸ್ಮರನ್ ।
ನನಂದ ಲಬ್ಧಂ ಮನ್ವಾನೋ ದೇವೀಂ ರಾಜ್ಯಂ ಸುತಂ ತಥಾ ॥ ೨೯
ದೇವೀ ವಾಸವದತ್ತಾ ಚ ಮಂತ್ರೀ ಯೌಗಂಧರಾಯಣಃ ।
ಅಭೂತಾಂ ನಿರ್ವೃತೌ ಸಿದ್ಧೇ ನೀತಿಕಲ್ಪಲತಾಫಲೇ ॥ ೩೦

೩೧–೩೨. ಕೆಲವು ದಿನಗಳು ಕಳೆದ ಮೇಲೆ ಕಳಿಂಗಸೇನೆಯು ಗರ್ಭವತಿಯಾಗಿ ಅವಳ ಮುಖಕಮಲವು ಬಿಳಿಚಿಕೊಂಡಿತು. ಅವಳ ಶ್ಯಾಮವರ್ಣದ ತುಟಿಯನ್ನು ಹೊಂದಿದ ಸ್ತನಗಳು ಮನ್ಮಥನ ಮುದ್ರಾಂಕಿತವಾದ ಕಾಮನಿಧಿತುಂಬಿದ ಕುಂಭಗಳಂತೆ ಆದುವು.

೩೩–೩೮. ಆಗ ಗಂಡನಾದ ಮದನವೇಗನು ಅವಳಿಗೆ ಹೇಳಿದನು. "ಕಳಿಂಗಸೇನೆ, ದಿವ್ಯರಾದ ನಾವು ಮನುಷ್ಯರಲ್ಲಿ ಅಥವಾ ಅವರಿಂದ ಗರ್ಭ ಉಂಟಾದರೆ ಅವರನ್ನು ಬಿಟ್ಟು ಹೋಗುತ್ತೇವೆ. ಅದು ನಮ್ಮ ಪದ್ಧತಿ. ಕಣ್ವರ ಆಶ್ರಮದಲ್ಲಿ ಮೇನಕೆಯು ಶಕುಂತಲೆಯನ್ನು ಬಿಟ್ಟುಹೋಗಲಿಲ್ಲವೆ ? ನೀನು ಹಿಂದೆ ಅಪ್ಸರೆಯಾಗಿದ್ದರೂ ಸಹ ಇಂದ್ರನ ಶಾಪದಿಂದ ಈಗ ಮನುಷ್ಯಳಾಗಿರುವೆ. ಅದರಿಂದಲೇ ನೀನು ಸಾಧ್ವಿಯಾಗಿದ್ದರೂ ವೇಶ್ಯೆ ಎಂಬ ಕಳಂಕವು ಅಂಟಿಕೊಂಡಿದೆ. ಆದ್ದರಿಂದ ನಿನ್ನ ಮಗುವನ್ನು ಕಾಪಾಡಿಕೊ. ನಾನು ನನ್ನ ಸ್ಥಳಕ್ಕೆ ಹೋಗುತ್ತೇನೆ. ನೆನೆದಾಗ ಬರುತ್ತೇನೆ' ಎಂದು ಹೇಳಿದನು. ಕಣ್ಣೀರು ಹಾಕುತ್ತಿದ್ದ ಅವಳನ್ನು ಸಮಾಧಾನಪಡಿಸಿ ಅವಳಿಗೆ ರತ್ನರಾಶಿಯನ್ನು ನೀಡಿ ಅವಳಲ್ಲೇ ಮನಸ್ಸಿದ್ದರೂ ನಿಯಮವನ್ನು ನೆನೆದು ವಿದ್ಯಾಧರನಾದ ಮದನವೇಗನು ಹೊರಟುಹೋದನು.

---

ಅಥ ಗಚ್ಛತ್ಸು ದಿವಸೇಷ್ವಾಪಾಂಡುಮುಖಪಂಕಜಾ ।
ದಧ್ರೇ ಕಲಿಂಗಸೇನಾ ಸಾ ಗರ್ಭಮುತ್ಪನ್ನದೋಹದಾ ॥ ೩೧
ತುಂಗೌ ವಿರೇಜತುಸ್ತಸ್ಯಾಃ ಸ್ತನಾವಾಶ್ಯಾಮಚೂಚುಕೌ ।
ನಿಧಾನಕುಂಭೌ ಕಾಮಸ್ಯ ಮದಮುದ್ರಾಂಕಿತಾವಿವ ॥ ೩೨
ತತೋ ಮದನವೇಗಸ್ತಾಮುಪೇತ್ಯ ಪತಿರಭ್ಯಧಾತ್ ।
ಕಲಿಂಗಸೇನೇ ದಿವ್ಯಾನಾಮಸ್ಮಾಕಂ ಸಮಯೋಽಸ್ತ್ಯಯಮ್ ॥ ೩೩
ಜಾತಂ ಮಾನುಷಗರ್ಭಂ ಯತ್ ಮುಕ್ತ್ವಾ ಯಾಮೋ ವಿದೂರತಃ ।
ಕಣ್ವಾಶ್ರಮೇ ನ ತತ್ಯಾಜ ಮೇನಕಾ ಕಿಂ ಶಕುಂತಲಾಮ್ ॥ ೩೪
ತ್ವಂ ಯದ್ಯಪ್ಯಪ್ಸರಾಃ ಪೂರ್ವಂ ತದಪ್ಯವಿನಯಾನ್ನಿಜಾತ್ ।
ಶಕ್ರಶಾಪೇನ ಸಂಪ್ರಾಪ್ತಾ ಮಾನುಷ್ಯಂ ದೇವಿ ಸಾಂಪ್ರತಮ್ ॥ ೩೫
ತೇನೈವ ಬಂಧಕೀಶಬ್ದೋ ಜಾತಃ ಸಾಧ್ವ್ಯಾ ಅಪೀಹ ತೇ ।
ತಸ್ಮಾದಪತ್ಯಂ ರಕ್ಷೇಸ್ತ್ವಂ ಸ್ಥಾನಂ ಯಾಸ್ಯಾಮ್ಯಹಂ ನಿಜಮ್ ॥ ೩೬
ಸ್ಮರಿಷ್ಯಸಿ ಯದಾ ಮಾಂ ಚ ಸಂನಿಧಾಸ್ಯೇ ತದಾ ತವ ।
ಏವಂ ಕಲಿಂಗಸೇನಾಂ ತಾಂ ಮುಕ್ತ್ವಾ ಸಾಶ್ರುವಿಲೋಚನಾಮ್ ॥ ೩೭
ಸಮಾಶ್ವಾಸ್ಯ ಚ ದತ್ವಾ ಚ ತಸ್ಯೈ ತದ್ರತ್ನಸಂಚಯಮ್ ।
ತಚ್ಚಿತ್ತಃ ಸಮಯಾಕೃಷ್ಟೋ ಯಯೌ ವಿದ್ಯಾಧರೇಶ್ವರಃ ॥ ೩೮

೩೯. ಕಳಿಂಗಸೇನೆಯು ಮಗುವನ್ನು ಪಡೆಯುವ ಆಸೆಯನ್ನು ಹೊತ್ತು ವತ್ಸರಾಜನ ಭುಜಬಲದ ನೆರಳಿನಲ್ಲಿ ಇದ್ದಳು.

೪೦. ಈ ನಡುವೆ ಸಶರೀರವಾದ ಪತಿಯನ್ನು ಪಡೆಯಲು ತಪಸ್ಸು ಮಾಡುತ್ತಿದ್ದ ಮನ್ಮಥನ ಪತ್ನಿ ರತಿಯನ್ನು ಕರೆದು ಶಿವನು ಹೇಳಿದನು.

೪೧-೪೨. 'ನನ್ನ ಮೇಲೆ ಅತಿಕ್ರಮಣ ಮಾಡಿದ್ದರಿಂದ ಹಿಂದೆ ಸುಟ್ಟುಹೋಗಿದ್ದ ನಿನ್ನ ಗಂಡನು ಈಗ ವತ್ಸರಾಜನ ವಂಶದಲ್ಲಿ ಗರ್ಭಸಂಭವನಾಗಿ ನರವಾಹನದತ್ತ ಎಂಬ ಹೆಸರಿನಿಂದ ಜನಿಸಿದ್ದಾನೆ. ನನ್ನ ಸೇವೆ ಮಾಡಿದ್ದರಿಂದ ನೀನೂ ಸಹ ಮರ್ತ್ಯಲೋಕದಲ್ಲಿ ಆಯೋನಿಜಳಾಗಿ (ಗರ್ಭಸಂಭವವಿಲ್ಲದವಳಾಗಿ) ಹುಟ್ಟಿ ಶರೀರವನ್ನು ಪಡೆದಿರುವ ಗಂಡನೊಡನೆ ಇರುತ್ತೀಯೆ.'

೪೩-೪೪. ಎಂದು ಶಿವನು ರತಿಗೆ ಹೇಳಿ ಅನಂತರ ಬ್ರಹ್ಮನಿಗೆ ಆದೇಶವಿತ್ತನು. ಕಳಿಂಗಸೇನೆಯು ದಿವ್ಯಪುರುಷನ ಸಂಯೋಗದಿಂದ ಒಂದು ಗಂಡು ಮಗುವನ್ನು ಪಡೆಯುತ್ತಾಳೆ. ನೀನು ಅದನ್ನು ಮಾಯೆಯಿಂದ ಅಪಹರಿಸಿ ಅದರ ಜಾಗದಲ್ಲಿ ದಿವ್ಯರೂಪವನ್ನು ಬಿಟ್ಟ ಮಾನವ ಕನ್ಯಾರೂಪವನ್ನು ಈ ರತಿಗೆ ಕೊಟ್ಟು ಇಟ್ಟುಬಿಡು.'

---

ಕಲಿಂಗಸೇನಾಪ್ಯತ್ರಾಸೀದಪತ್ಯಾಶಾಂ ಸಖೀಮಿವ ।
ಆಲಂಬ್ಯ ವತ್ಸರಾಜಸ್ಯ ಭುಜಚ್ಛಾಯಾಮುಪಾಶ್ರಿತಾ ॥ ೩೯
ಅತ್ರಾಂತರೇ ಕೃತವತೀಂ ಸಾಂಗಭರ್ತ್ರಾಪ್ತಯೇ ತಪಃ ।
ಆದಿದೇಶ ರತಿಂ ಭಾರ್ಯಾಮನಂಗಸ್ಯಾಂಬಿಕಾ ಪತಿಃ ॥ ೪೦
ವತ್ಸರಾಜಗೃಹೇ ಜಾತೋ ದಗ್ಧಪೂರ್ವಃ ಸ ತೇ ಪತಿಃ ।
ನರವಾಹನದತ್ತಾಖ್ಯೋ ಯೋನಿಜೋ ಮದ್ವಿಲಂಘನಾತ್ ॥ ೪೧
ಮದಾರಾಧನತಸ್ತ್ವಂ ತು ಮರ್ತ್ಯಲೋಕೇಽಪ್ಯಯೋನಿಜಾ ।
ಜನಿಷ್ಯಸೇ ತತಸ್ತೇನ ಭರ್ತ್ರಾ ಸಾಂಗೇನ ಯೋಕ್ಷ್ಯಸೇ ॥ ೪೨
ಏವಮುಕ್ತ್ವಾ ರತಿಂ ಶಂಭುಃ ಪ್ರಜಾಪತಿಮಥಾದಿಶತ್ ।
ಕಲಿಂಗಸೇನಾ ತನಯಂ ಸೋಷ್ಯತೇ ದಿವ್ಯಸಂಭವಮ್ ॥ ೪೩
ತಂ ಹೃತ್ವಾ ಮಾಯಯಾ ತಸ್ಯಾಃ ತತ್ಸ್ಥಾನೇ ತ್ವಮಿಮಾಂ ರತಿಮ್ ।
ನಿರ್ಮಾಯ ಮಾನುಷೀಂ ಕನ್ಯಾಂ ತ್ಯಕ್ತದಿವ್ಯತನುಂ ಕ್ಷಿಪೇಃ ॥ ೪೪

೪೫–೪೬. ಈಶ್ವರನ ಆಜ್ಞೆಯನ್ನು ಶಿರಸಾ ವಹಿಸಿದ ಬ್ರಹ್ಮನು ಹೊರಟುಹೋದಮೇಲೆ ಕಳಿಂಗಸೇನೆಯು ಯುಕ್ತಕಾಲದಲ್ಲಿ ಮಗುವಿಗೆ ಜನ್ಮನೀಡಿದಳು. ಗಂಡು ಮಗು ಹುಟ್ಟುತ್ತಲೇ ಅದರ ಸ್ಥಾನದಲ್ಲಿ ತನ್ನ ಮಾಯೆಯಿಂದ ರತಿಯನ್ನು ಹೆಣ್ಣುಮಗುವನ್ನಾಗಿ ಮಾಡಿ ಇಟ್ಟು ಬ್ರಹ್ಮನು ಯಾರಿಗೂ ಕಾಣದಂತೆ ಅದೃಶ್ಯನಾದನು.

೪೭–೪೯. ಹಗಲಿನಲ್ಲಿಯೂ ಉದಯಿಸಿದ ಪ್ರತಿಪತ್‌ಚಂದ್ರನಂತೆ ಕಾಂತಿಯುಳ್ಳ ಹೆಣ್ಣು ಮಗುವೇ ಜನಿಸಿದೆಯೆಂದು ಎಲ್ಲರೂ ತಿಳಿದರು. ಆ ಮನೆಯನ್ನು ಬೆಳಗುತ್ತಾ ರತ್ನದೀಪದ ಜ್ವಾಲೆಗಳ ಸಾಲನ್ನೂ ನಾಚಿಕೆಗೊಂಡಂತೆ ಕಾಂತಿಹೀನವಾಗಿ ಮಾಡುತ್ತಾ ಇರುವ ಆ ಅಸಮಾನವಾದ ಕನ್ಯಾಶಿಶುವನ್ನು ನೋಡಿ ಕಳಿಂಗಸೇನೆಯು ಗಂಡು ಮಗು ಜನಿಸಿದ್ದಕ್ಕಿಂತಲೂ ಹೆಚ್ಚು ಸಂತೋಷವನ್ನು ಅನುಭವಿಸಿದಳು.

೫೦. ವತ್ಸರಾಜ, ವಾಸವದತ್ತೆ ಮತ್ತು ಯೌಗಂಧರಾಯಣ ಮೂರೂ ಜನರು ಕಳಿಂಗಸೇನೆಗೆ ಅಂತಹ ಅಸಮಾನ ಹೆಣ್ಣು ಮಗು ಹುಟ್ಟಿರುವುದನ್ನು ಕೇಳಿದರು.

---

ಇತೀಶ್ವರಾಜ್ಞಾಮಾದಾಯ ಮೂರ್ಧ್ನಿ ವೇಧಸ್ಯಥೋ ಗತೇ ।
ಕಲಿಂಗಸೇನಾ ಪ್ರಸವಂ ಪ್ರಾಪ್ತೇ ಕಾಲೇ ಚಕಾರ ಸಾ ॥ ೪೫
ಜಾತಮಾತ್ರಂ ಸುತಂ ತಸ್ಯಾಃ ಹೃತ್ವೈವಾತ್ರ ಸ್ವಮಾಯಯಾ ।
ರತಿಂ ತಾಂ ಕನ್ಯಕಾಂ ಕೃತ್ವಾ ನ್ಯಧಾದ್ವಿಧಿರಲಕ್ಷಿತಮ್ ॥ ೪೬
ಸರ್ವಶ್ಚ ತತ್ರ ತಾಮೇವ ಕನ್ಯಾಂ ಜಾತಾಮಲಕ್ಷತ ।
ದಿವಾಪ್ಯಕಾಂಡಪ್ರತಿಪಚ್ಚಂದ್ರಲೇಖಾಮಿವೋದಿತಾಮ್ ॥ ೪೭
ಕಾಂತಿದ್ಯೋತಿತತದ್ವಾಸಗೃಹಾಂ ನಿರ್ಜಿತ್ಯ ಕುರ್ವತೀಮ್ ।
ರತ್ನದೀಪಶಿಖಾಶ್ರೇಣೀರ್ಲಜ್ಜಿತಾ ಇವ ನಿಷ್ಪ್ರಭಾಃ ॥ ೪೮
ಕಲಿಂಗಸೇನಾ ತಾಂ ದೃಷ್ಟ್ವಾ ಜಾತಾಮಸದೃಶೀಂ ಸುತಾಮ್ ।
ಪುತ್ರಜನ್ಮಾಧಿಕಂ ತೋಷಾತ್ ಉತ್ಸವಂ ವಿತತಾನ ಸಾ ॥ ೪೯
ಅಥ ವತ್ಸೇಶ್ವರೋ ರಾಜಾ ಸದೇವೀಕಃ ಸಮಂತ್ರಿಕಃ ।
ಕನ್ಯಾಂ ಕಲಿಂಗಸೇನಾಯಾ ಜಾತಾಂ ಶುಶ್ರಾವ ತಾದೃಶೀಮ್ ॥ ೫೦

೫೧–೫೩. ಅದನ್ನು ಕೇಳುತ್ತಿದ್ದಂತೆಯೇ ವತ್ಸರಾಜನು ದೈವ ಪ್ರೇರಣೆಯಿಂದ ಯೌಗಂಧರಾಯಣನ ಎದುರಿನಲ್ಲಿ ವಾಸವದತ್ತೆಗೆ ಹೇಳಿದನು. "ಕಳಿಂಗಸೇನೆಯು ಒಬ್ಬ ದಿವ್ಯಸ್ತ್ರೀಯಾಗಿದ್ದು ಶಾಪಗ್ರಸ್ತಳಾಗಿದ್ದಾಳೆಂದು ನನಗೆ ತಿಳಿದಿದೆ. ಇವಳಲ್ಲಿ ಹುಟ್ಟಿದ ಮಗುವು ದಿವ್ಯವಾಗಿ ಆಶ್ಚರ್ಯಕರವಾದ ರೂಪವನ್ನು ಧರಿಸಿದೆ. ಈ ಕನ್ಯೆಯು ನನ್ನ ಮಗ ನರವಾಹನದತ್ತನಿಗೆ ಅನುರೂಪಳಾಗಿದ್ದು ಅವನ ರಾಣಿಯಾಗಲು ಅರ್ಹಳಾಗಿದ್ದಾಳೆ' ಎಂದನು.

೫೪–೫೫. ಅದನ್ನು ಕೇಳಿ ವಾಸವದತ್ತೆಯು ರಾಜನಿಗೆ ಹೇಳಿದಳು. "ಮಹಾರಾಜರೇ, ಇದ್ದಕ್ಕಿದ್ದಂತೆ ಏನೋ ಮಾತನಾಡುತ್ತಿದ್ದೀರಲ್ಲ! ಎರಡು ಕುಲಗಳನ್ನು ಶುದ್ಧಿಗೊಳಿಸುವ ಈ ಪುತ್ರನೆಲ್ಲಿ ? ವೇಶ್ಯೆಯಗರ್ಭದಲ್ಲಿ ಜನಿಸಿದ ಕಳಿಂಗಸೇನೆಯ ಮಗುವೆಲ್ಲಿ ?' ಎಂದಳು.

---

ಶ್ರುತ್ವಾ ಚ ಸ ನೃಪೋಽಕಸ್ಮಾದುವಾಚೇಶ್ವರಚೋದಿತಃ ।
ದೇವೀಂ ವಾಸವದತ್ತಾಂ ತಾಂ ಸ್ಥಿತೇ ಯೌಗಂಧರಾಯಣೇ ॥ ೫೧
ಜಾನೇ ಕಲಿಂಗಸೇನೈಷಾ ದಿವ್ಯಾ ಸ್ತ್ರೀ ಶಾಪತಶ್ಚ್ಯುತಾ ।
ಅಸ್ಯಾಂ ಜಾತಾ ಚ ಕನ್ಯೇಯಂ ದಿವ್ಯೈವಾಶ್ಚರ್ಯರೂಪಧೃತ್ ॥ ೫೨
ತದಸೌ ಕನ್ಯಕಾ ತುಲ್ಯಾ ರೂಪೇಣ ತನಯಸ್ಯ ಮೇ ।
ನರವಾಹನದತ್ತಸ್ಯ ಮಹಾದೇವೀತ್ವಮರ್ಹತಿ ॥ ೫೩
ತತ್ ಶ್ರುತ್ವಾ ಜಗದೇ ರಾಜಾ ದೇವ್ಯಾ ವಾಸವದತ್ತಯಾ ।
ಮಹಾರಾಜ ಕಿಮೇವಂ ತ್ವಮಕಸ್ಮಾದದ್ಯ ಭಾಷಸೇ ॥ ೫೪
ಕುಲದ್ವಯವಿಶುದ್ಧೋಽಯಂ ಕ್ವ ಪುತ್ರಸ್ತೇ ಬತ ಕ್ವ ಸಾ ।
ಕಲಿಂಗಸೇನಾ ತನಯಾ ಬಂಧಕೀಗರ್ಭಸಂಭವಾ ॥ ೫೫

೫೬–೫೮. ಈ ಮಾತನ್ನು ಕೇಳಿ ವಿಚಾರ ಮಾಡುತ್ತಾ ರಾಜನು ಹೇಳಿದನು. "ನಾನು ಸ್ವತಃ ಈ ಮಾತನ್ನು ಹೇಳುತ್ತಿಲ್ಲ. ಯಾರೋ ನನ್ನೊಳಗೆ ಸೇರಿ ಹೀಗೆ ಮಾತನಾಡಿಸಿದಂತಿದೆ. ಈ ಕನ್ಯೆಯು ನರವಾಹನದತ್ತನ ಪತ್ನಿ ಎಂದು ಮೊದಲೇ ತೀರ್ಮಾನವಾಗಿದೆ ಎಂದು ದಿವ್ಯವಾಣಿಯನ್ನು ನಾನು ಕೇಳಿದಂತೆ ಆಗಿದೆ. ಅಲ್ಲದೆ, ಈ ಕಳಿಂಗಸೇನೆಯು ಒಬ್ಬನಿಗೆ ಏಕೈಕಪತ್ನಿಯಾಗಿದ್ದು ಒಳ್ಳೆಯ ಕುಲದಲ್ಲಿ ಹುಟ್ಟಿದ್ದಾಳೆ. ಹಿಂದಿನ ಜನ್ಮದ ಕರ್ಮದ ಫಲದಿಂದ ವೇಶ್ಯೆ ಎಂಬ ಮಾತು ಕೇಳಿಬಂದಿದೆ'

೫೯–೬೧. ಎಂದು ರಾಜನು ಹೇಳಿದಾಗ ಮಂತ್ರಿ ಯೌಗಂಧರಾಯಣನು ಹೇಳಿದನು. "ರಾಜನೆ, ಮನ್ಮಥನು ಸುಟ್ಟುಹೋದ ಮೇಲೆ ರತಿಯು ತಪಸ್ಸು ಮಾಡಿದಳು ಎಂದು ಕೇಳಿದ್ದೇವೆ. ಮನುಷ್ಯ ರೂಪದಲ್ಲಿ ಭೂಲೋಕದಲ್ಲಿ ಅವತರಿಸಿದ ನಿನ್ನ ಗಂಡನೊಡನೆ ಭೂಲೋಕದಲ್ಲಿ ಜನಿಸುವ ನಿನಗೆ ಸಮಾಗಮವು ಆಗುವುದು ಎಂದು ಗಂಡನನ್ನು ಬಯಸಿದ್ದ ರತಿಗೆ ಶಿವನು ವರವನ್ನು ಕೊಟ್ಟನು. ನಿನ್ನ ಮಗನು ಮನ್ಮಥನ ಅವತಾರ ಎಂದು ದಿವ್ಯವಾಣಿಯು ಹೇಳಿದೆ.

---

ಶ್ರುತ್ವೈತತ್ ವಿಮೃಶನ್ ರಾಜಾ ಸೋಽಬ್ರವೀನ್ನ ಹ್ಯಹಂ ಸ್ವತಃ ।
ವದಾಮ್ಯೇತತ್ ಪ್ರವಿಶ್ಯಾಂತಃ ಕೋಽಪಿ ಜಲ್ಪಯತೀವ ಮಾಮ್ ॥ ೫೬
ನರವಾಹನದತ್ತಸ್ಯ ಕನ್ಯೇಯಂ ಪೂರ್ವನಿರ್ಮಿತಾ ।
ಭಾರ್ಯೇತ್ಯೇವಂ ವದಂತೀಂ ಚ ಶೃಣೋಮೀವ ಗಿರಂ ದಿವಃ ॥ ೫೭
ಕಲಿಂಗಸೇನಾ ಕಿಂಚಾಸಾವೇಕಪತ್ನೀ ಕುಲೋದ್ಗತಾ ।
ಪೂರ್ವಕರ್ಮವಶಾತ್ತ್ವಸ್ಯಾಃ ಬಂಧಕೀಶಬ್ದಸಂಭವಃ ॥ ೫೮
ಇತಿ ರಾಜ್ಞೋದಿತೇ ಪ್ರಾಹ ಮಂತ್ರೀ ಯೌಗಂಧರಾಯಣಃ ।
ಶ್ರೂಯತೇ ದೇವ ಯಚ್ಚಕ್ರೇ ರತಿರ್ದಗ್ಧೇ ಸ್ಮರೇ ತಪಃ ॥ ೫೯
ಮರ್ತ್ಯಲೋಕಾವತೀರ್ಣೇನ ಸಶರೀರೇಣ ಸಂಗಮಃ ।
ಮರ್ತ್ಯಭಾವಗತಾಯಾಸ್ತೇ ಸ್ವೇನ ಭರ್ತ್ರಾ ಭವಿಷ್ಯತಿ ॥ ೬೦
ಇತಿ ಚಾದಾದ್ವರಂ ಶರ್ವೋ ರತ್ಯೈ ಸ್ವಪತಿಮೀಪ್ಸವೇ ।
ಕಾಮಾವತಾರಶ್ಚೋಕ್ತಃ ಪ್ರಾಕ್ ದಿವ್ಯವಾಚಾ ಸುತಸ್ತವ ॥ ೬೧

೬೨–೬೬. ಶಿವನ ಆದೇಶದಂತೆ ರತಿಯು ಭೂಲೋಕದಲ್ಲಿ ಜನಿಸಿದ್ದಾಳೆ. ಇಂದು ಸೂಲಗಿತ್ತಿಯು ನನಗೆ ಗುಟ್ಟಾಗಿ ಹೀಗೆ ಹೇಳಿದಳು. ಕಳಿಂಗಸೇನೆಯ ಮಗುಹುಟ್ಟಿದಾಗ ಗರ್ಭಾಶಯ ಇತ್ತು. ಆಮೇಲೆ ನೋಡಿದರೆ ಇರಲಿಲ್ಲ. ಅಂತಹ ಆಶ್ಚರ್ಯವನ್ನು ನಿಮಗೆ ತಿಳಿಸಲು ನಾನು ಬಂದೆ ಎಂದು ಅವಳು ಹೇಳಿದಳು. ನನಗೂ ಹೀಗೆ ಹೊಳೆಯುತ್ತಿದೆ. ದೇವತೆಗಳು ಅಯೋನಿಜೆಯಾದ ರತಿಯನ್ನು ಕಳಿಂಗಸೇನೆಯ ಮಗುವಿಗೆ ಬದಲಾಗಿ ಇಟ್ಟಿದ್ದಾರೆ. ಮನ್ಮಥನ ಅವತಾರವಾದ ನಿನ್ನ ಮಗನಿಗೆ ಅವಳನ್ನು ಪತ್ನಿಯಾಗಿ ಮಾಡುವ ಉದ್ದೇಶದಿಂದ ಹೀಗೆ ಗರ್ಭಚೌರ್ಯವನ್ನು ಮಾಡಿದ್ದಾರೆ. ಯಕ್ಷರಿಗೆ ಸಂಬಂಧಿಸಿದ ಒಂದು ಕಥೆಯು ಈ ಸಂದರ್ಭದಲ್ಲಿ ಕೇಳಲು ಉಚಿತವಾಗಿದೆ ಕೇಳು' ಎಂದನು.

೬೭–೬೮. ಕುಬೇರನಿಗೆ ವಿರೂಪಾಕ್ಷ ಎಂಬ ಒಬ್ಬ ಸೇವಕನು ಇದ್ದನು. ಆ ಯಕ್ಷನು ಒಂದು ಲಕ್ಷನಿಧಿಗೆ ಪ್ರಧಾನಾಧ್ಯಕ್ಷನಾಗಿದ್ದನು. ಮಧುರಾನಗರಿಯ ಹೊರಗಡೆ ಇದ್ದ ಆ ನಿಧಿಯನ್ನು ಕಾಪಾಡಲು ಅವನು ಕಲ್ಲುಗಂಬದಂತೆ ಅಚಲವಾಗಿ ಇದ್ದ ಒಬ್ಬ ಯಕ್ಷನನ್ನು ನೇಮಿಸಿದನು.

---

ರತ್ಯಾವತರಣೀಯಂ ಚ ಮರ್ತ್ಯಭಾವೇ ಹರಾಜ್ಞಯಾ ।
ಗರ್ಭಗ್ರಾಹಿಕಯಾ ಚಾದ್ಯ ಮಮೈವಂ ವರ್ಣಿತಂ ರಹಃ ॥ ೬೨
ಮಯಾ ಕಲಿಂಗಸೇನಾಯಾ ಗರ್ಭಃ ಪ್ರಾಗ್ಗರ್ಭಶಯ್ಯಯಾ ।
ಯುಕ್ತೋ ದೃಷ್ಟಸ್ತದೈವಾನ್ಯದಪಶ್ಯಂ ತದ್ವಿವರ್ಜಿತಮ್ ॥ ೬೩
ತದಾಶ್ಚರ್ಯಂ ವಿಲೋಕ್ಯಾಹಂ ತವಾಖ್ಯಾತುಮಿಹಾಗತಾ ।
ಇತಿ ಸ್ತ್ರಿಯಾ ತಯೋಕ್ತು ಮೇ ಜಾತೈಷಾ ಪ್ರತಿಭಾಪಿ ತೇ ॥ ೬೪
ತಜ್ಞಾನೇ ಮಾಯಯಾ ದೇವೈಃ ಸೈಷಾ ರತಿರಯೋನಿಜಾ ।
ಕಲಿಂಗಸೇನಾತನಯಾ ಗರ್ಭಚೌರ್ಯೇಣ ನಿರ್ಮಿತಾ ॥ ೬೫
ಭಾರ್ಯಾರ್ಥಂ ಕಾಮಾವತಾರಸ್ಯ ಪುತ್ರಸ್ಯ ತವ ಭೂಪತೇ ।
ತಥಾ ಚಾತ್ರ ಕಥಾಮೇತಾಂ ಯಕ್ಷಸಂಬಂಧಿನೀಂ ಶೃಣು ॥ ೬೬
ಭೃತ್ಯೋ ವೈಶ್ರವಣಸ್ಯಾಭೂತ್ ವಿರೂಪಾಕ್ಷ ಇತಿ ಶ್ರುತಃ ।
ಯಕ್ಷೋ ನಿಧಾನಲಕ್ಷಾಣಾಂ ಪ್ರಧಾನಾಧ್ಯಕ್ಷತಾಂ ಗತಃ ॥ ೬೭
ಮಥುರಾಯಾಂ ಬಹಿಃ ಸಂಸ್ಥಂ ನಿಧಾನಂ ಸ ಚ ರಕ್ಷಿತುಮ್ ।
ಯಕ್ಷಂ ನಿಯುಕ್ತವಾನೇಕಂ ಶಿಲಾಸ್ತಂಭಮಿವಾಚಲಮ್ ॥ ೬೮

೯–೧೧. ಆ ಊರಿನಲ್ಲಿ ಒಬ್ಬ ಪಾಶುಪತ ಬ್ರಾಹ್ಮಣನು ನಿಧಿಯನ್ನು ಹುಡುಕುತ್ತಾ ಬಂದು ತನ್ನ ಕೈಯಲ್ಲಿದ್ದ ಮಾನವ ಕೊಬ್ಬಿನಿಂದ ಮಾಡಿದ ದೀಪವು ಕೆಳಗೆ ಬಿದ್ದ ಜಾಗದಲ್ಲಿ ನಿಧಿ ಇದೆ ಎಂದು ತಿಳಿದು ತನ್ನ ಬ್ರಾಹ್ಮಣ ಗೆಳೆಯರ ಸಹಾಯದಿಂದ ಅದನ್ನು ಅಗೆಯುತ್ತಿದ್ದನು.

೧೨–೧೩. ನಿಧಿಯನ್ನು ರಕ್ಷಿಸಲು ನೇಮಕಗೊಂಡಿದ್ದ ಯಕ್ಷನು ಅದನ್ನು ನೋಡಿ ವಿರೂಪಾಕ್ಷನ ಹತ್ತಿರ ಹೋಗಿ ವಿಷಯವನ್ನೆಲ್ಲ ತಿಳಿಸಿದನು. ಕೋಪಗೊಂಡ ವಿರೂಪಾಕ್ಷನು ನಿಧಿಯನ್ನು ಅಗೆಯುತ್ತಿರುವವರನ್ನು ಕೂಡಲೇ ಕೊಂದುಹಾಕು ಎಂದು ಯಕ್ಷನಿಗೆ ಆಜ್ಞೆಮಾಡಿದನು.

---

ತತ್ರ ತಂ ನಗರೀವಾಸೀ ಕಶ್ಚಿತ್ ಪಾಶುಪತೋ ದ್ವಿಜಃ ।
ನಿಧಾನಾನ್ವೇಷಣಾಯಾಗಾತ್ ಖನ್ಯವಾದೀ ಕದಾಚನ ॥ ೯
ಸ ಮಾನುಷವಸಾದೀಪಹಸ್ತೋ ಯಾವತ್ ಪರೀಕ್ಷತೇ ।
ಸ್ಥಾನಂ ತತ್ತಾವದಸ್ಯಾತ್ರ ಕರಾದ್ದೀಪಃ ಪಪಾತ ಸಃ ॥ ೧೦
ಲಕ್ಷಣೇನ ಚ ತೇನಾತ್ರ ಸ್ಥಿತಂ ನಿಧಿಮವೇತ್ಯ ಸಃ ।
ಉದ್ಘಾಟಯಿತುಮಾರೇಭೇ ಸಹಾನ್ಯೈಃ ಸುಖಿಭಿರ್ದ್ವಿಜೈಃ ॥ ೧೧
ಅಥ ಯೋಽಸೌ ನಿಯುಕ್ತೋಽಭೂತ್ ಯಕ್ಷೋ ರಕ್ಷಾವಿಧೌ ಸ ತತ್ ।
ದೃಷ್ಟ್ವಾ ಗತ್ವಾ ಯಥಾವಸ್ತು ವಿರೂಪಾಕ್ಷಂ ವ್ಯಜಿಜ್ಞಪತ್ ॥ ೧೨
ಗಚ್ಛ ವ್ಯಾಪಾದಯ ಕ್ಷಿಪ್ರಂ ಕ್ಷುದ್ರಾಂಸ್ತಾನ್ ಖನ್ಯವಾದಿನಃ ।
ಇತ್ಯಾದಿದೇಶ ತಂ ಯಕ್ಷಂ ವಿರೂಪಾಕ್ಷಃ ಸ ಕೋಪನಃ ॥ ೧೩

೭೪–೭೭ ಅನಂತರ ಯಕ್ಷನು ಅಲ್ಲಿಗೆ ಹೋಗಿ ನಿಧಿಯನ್ನು ಪಡೆಯಲು ತವಕಿಸುತ್ತಿದ್ದು ಇನ್ನೂ ಮನದಾಸೆಯು ಸಿದ್ಧಿಸದಿದ್ದ ಆ ಬ್ರಾಹ್ಮಣರನ್ನು ಕೊಂದನು. ವಿಷಯವನ್ನು ತಿಳಿದು ಕುಬೇರನು ಕೋಪಗೊಂಡು ವಿರೂಪಾಕ್ಷನಿಗೆ ಹೇಳಿದನು. "ನೀನು ವಿವೇಕವಿಲ್ಲದೆ ಬ್ರಹ್ಮಹತ್ಯೆಯನ್ನು ಮಾಡಿದ್ದೀಯೆ. ನಿರ್ಗತಿಕರು ದುಡ್ಡಿನ ಆಸೆಗೆ ಏನು ತಾನೆ ಮಾಡುವುದಿಲ್ಲ ? ಅವರನ್ನು ವಿಘ್ನಗಳನ್ನು ಒಡ್ಡಿ ಹೆದರಿಸಿ ತಡೆಯಬೇಕೇ ಹೊರತು ಕೊಲ್ಲಬಾರದು ಎಂದು ಹೇಳಿ ಕುಬೇರನು ಪಾಪಕರ್ಮವನ್ನು ಮಾಡಿದ್ದಕ್ಕೆ ಭೂಲೋಕದಲ್ಲಿ ಹುಟ್ಟು ಎಂದು ಶಾಪಕೊಟ್ಟನು.

---

ತತಃ ಸ ಯಕ್ಷೋ ಗತ್ವೈವ ಸ್ವಯುಕ್ತ್ಯಾ ನಿಜಘಾನ ತಾನ್ ।
ನಿಧಾನವಾದಿನೋ ವಿಪ್ರಾನ್ ಅಸಂಪ್ರಾಪ್ತಮನೋರಥಾನ್ ॥ ೭೪
ತದ್ ಬುದ್ಧ್ವಾ ಧನದಃ ಕ್ರುದ್ಧೋ ವಿರೂಪಾಕ್ಷಮುವಾಚ ತಮ್ ।
ಬ್ರಹ್ಮಹತ್ಯಾ ಕಥಂ ಪಾಪ ಕಾರಿತಾ ಸಹಸಾ ತ್ವಯಾ ॥ ೭೫
ದುರ್ಗತೋ ವಾರ್ತಿಕಜನೋ ಲೋಭಾತ್ ಕಿಂ ನಾಮ ನಾಚರೇತ್ ।
ನಿವಾರ್ಯತೇ ಸ ವಿತ್ರಾಸ್ಯ ವಿಘ್ನೈಸ್ತೈಸ್ತೈರ್ನ ಹನ್ಯತೇ ॥ ೭೬
ಇತ್ಯುಕ್ತ್ವಾಥ ಶಶಾಪೈನಂ ವಿರೂಪಾಕ್ಷಂ ಧನಾಧಿಪಃ ।
ಮರ್ತ್ಯಯೋನೌ ಪ್ರಜಾಯಸ್ವ ದುಷ್ಕೃತಾಚರಣಾದಿತಿ ॥ ೭೭

೭೮–೮೩. ಶಾಪಗ್ರಸ್ತನಾದ ವಿರೂಪಾಕ್ಷನು ಅಗ್ರಹಾರದ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಮಗನಾಗಿ ಹುಟ್ಟಿದನು. ಅವನ ಪತ್ನಿ ಯಕ್ಷಿಣಿಯು ಕುಬೇರನಿಗೆ ಅರಿಕೆ ಮಾಡಿಕೊಂಡಳು. "ಸ್ವಾಮಿ, ನನ್ನ ಗಂಡನು ಇರುವ ಕಡೆಯೇ ನನ್ನನ್ನೂ ಹಾಕಿರಿ. ಅವರಿಲ್ಲದೆ ನಾನು ಬದುಕಲಾರೆ ಎಂದಳು. ಆಗ ಕುಬೇರನು ಹೀಗೆಂದನು. ಒಬ್ಬ ಬ್ರಾಹ್ಮಣನ ಮನೆಯಲ್ಲಿ ನಿನ್ನ ಗಂಡನು ಹುಟ್ಟಿದ್ದಾನೆ. ನೀನು ಅವನ ದಾಸಿಯ ಮನೆಯಲ್ಲಿ ಅಯೋನಿಜೆಯಾಗಿ ಬೀಳುವೆ. ಅಲ್ಲಿ ನಿನ್ನ ಗಂಡನೊಡನೆ ಸಮಾಗಮವು ಆಗುವುದು. ನಿನ್ನ ಜೊತೆಯಲ್ಲಿದ್ದು ಶಾಪ ಕಳೆದ ಮೇಲೆ ಪುನಃ ನನ್ನ ಹತ್ತಿರಕ್ಕೆ ಬರುವನು ಎಂದು ಕುಬೇರನು ಆಜ್ಞೆಮಾಡಿದನು. ಅದರಂತೆ ಆ ಪತಿವ್ರತೆ ಯಕ್ಷಿಣಿಯು ದಾಸಿಯ ಮನೆಯ ಬಾಗಿಲಲ್ಲಿ ಮಾನವ ಕನ್ಯೆಯಾಗಿ ಬಿದ್ದಳು.

---

ಪ್ರಾಪ್ತಶಾಪೋಽಥ ಕಸ್ಯಾಪಿ ಭೂತಲೇ ಬ್ರಾಹ್ಮಣಸ್ಯ ಸಃ ।
ವಿರೂಪಾಕ್ಷ ಸುತೋ ಜಾತೋ ಬ್ರಾಹ್ಮಣ್ಯಸ್ಯಾಗ್ರಹಾರಿಣಃ ॥ ೭೮
ತತೋಽಸ್ಯ ಯಕ್ಷಿಣೀ ಪತ್ನೀ ಧನಾಧ್ಯಕ್ಷಂ ವ್ಯಜಿಜ್ಞಪತ್ ।
ದೇವ ಯತ್ರ ಸ ಭರ್ತಾ ಮೇ ಕ್ಷಿಪ್ತಸ್ತತ್ರೈವ ಮಾಂ ಕ್ಷಿಪ ॥ ೭೯
ಪ್ರಸೀದ ನಹಿ ಶಕ್ನೋಮಿ ವಿಯುಕ್ತಾ ತೇನ ಜೀವಿತುಮ್ ।
ಏವಂ ತಯಾ ಸ ವಿಜ್ಞಪ್ತಃ ಸಾಧ್ವ್ಯಾ ವೈಶ್ರವಣೋಽಭ್ಯಧಾತ್ ॥ ೮೦
ತಸ್ಯ ವಿಪ್ರಸ್ಯ ಸದನೇ ಜಾತೋ ಭರ್ತಾ ಸ ತೇಽನಘೇ ।
ತಸ್ಯೈವ ದಾಸ್ಯಾ ಗೇಹೇ ತ್ವಂ ನಿಪತಿಷ್ಯಸ್ಯಯೋನಿಜಾ ॥ ೮೧
ತತ್ರ ತೇನ ಸಮಂ ಭರ್ತ್ರಾ ಸಂಗಮಸ್ತೇ ಭವಿಷ್ಯತಿ ।
ತ್ವತ್ ಪ್ರಸಾದಾತ್ಸ ಶಾಪಂ ಚ ತೀರ್ತ್ವಾ ಮತ್ಪಾರ್ಶ್ವಮೇಷ್ಯತಿ ॥ ೮೨
ಇತಿ ವೈಶ್ರವಣಾದೇಶಾತ್ ಸಾಧ್ವೀ ಸಾ ಪತಿತಾ ತತಃ ।
ದಾಸ್ಯಾಸ್ತಸ್ಯಾ ಗೃಹದ್ವಾರಿ ಕನ್ಯಾ ಭೂತ್ವೈವ ಮಾನುಷಿ ॥ ೮೩

೮೪–೮೮. ಅನಿರೀಕ್ಷಿತವಾಗಿ ಕಂಡ ಅದ್ಭುತ ರೂಪವುಳ್ಳ ಹೆಣ್ಣುಮಗುವನ್ನು ಎತ್ತಿಕೊಂಡು ಆ ದಾಸಿಯು ಬ್ರಾಹ್ಮಣನಿಗೆ ತೋರಿಸಿದಳು. ಆಗ ಬ್ರಾಹ್ಮಣನು ಅದನ್ನು ನೋಡಿ ""ನಿಜವಾಗಿಯೂ ಇದು ದಿವ್ಯಲೋಕದ ಅಯೋನಿಜೆಯಾದ ಹೆಣ್ಣುಮಗು ಎಂದು ನನ್ನ ಆತ್ಮ ಹೇಳುತ್ತಿದೆ. ಮಗುವನ್ನು ಕೊಡು. ಇದು ನನ್ನ ಮಗನ ಪತ್ನಿ ಆಗಲು ಅರ್ಹವಾಗಿದೆ" ಎಂದು ಬ್ರಾಹ್ಮಣನು ಸಂತೋಷದಿಂದ ದಾಸಿಗೆ ಹೇಳಿದನು. ಕ್ರಮೇಣ ಆ ಹೆಣ್ಣು ಮಗುವೂ ಬ್ರಾಹ್ಮಣನ ಗಂಡು ಮಗುವೂ ಬೆಳೆದು ದೊಡ್ಡವರಾದರು. ಪರಸ್ಪರ ಪ್ರೀತಿಯೂ ಅವರಿಬ್ಬರಲ್ಲಿ ಚಿಗುರಿತು. ಅನಂತರ ಬ್ರಾಹ್ಮಣನು ಅವರಿಬ್ಬರಿಗೂ ಮದುವೆಮಾಡಿದನು. ಅವರೂ ಸಹ ತಮ್ಮ ಪೂರ್ವಜನ್ಮದ ಸ್ಮರಣೆ ಇಲ್ಲದೆ ವಿರಹವನ್ನು ದಾಟಿದವರಂತೆ ಸುಖವಾಗಿದ್ದರು.

೮೯. ಕಾಲಕ್ರಮೇಣ ಹೆಂಡತಿಯೊಡನೆಯೇ ಮರಣಹೊಂದಿದ ಆ ಯಕ್ಷನು ಅವಳ ತಪಸ್ಸಿನ ಫಲವಾಗಿ ಶಾಪದಿಂದ ಬಿಡುಗಡೆ ಹೊಂದಿ ತನ್ನ ಮೊದಲಿನ ಸ್ಥಾನವನ್ನು ಪಡೆದನು.

---

ಅಕಸ್ಮಾಚ್ಚ ತಯಾ ದಾಸ್ಯಾ ಕನ್ಯಾ ದೃಷ್ಟಾದ್ಭುತಾಕೃತಿಃ ।
ಗೃಹೀತ್ವಾ ದರ್ಶಿತಾ ಚಾಸ್ಯ ಸ್ವಾಮಿನೋಽತ್ರ ದ್ವಿಜನ್ಮನಃ ॥ ೮೪
ದಿವ್ಯೇಯಂ ಕನ್ಯಕಾ ಕ್ವಾಪಿ ನಿಃಸಂದೇಹಮಯೋನಿಜಾ ।
ಇತ್ಯಾತ್ಮಾ ಮಮ ವಕ್ತೀಹಾನಯ ತಾಂ ತ್ವಮಶಂಕಿತಮ್ ॥ ೮೫
ಇಯಂ ಹಿ ಮಮ ಪುತ್ರಸ್ಯ ಮನ್ಯೇ ಭಾರ್ಯಾತ್ವಮರ್ಹತಿ ।
ಇತಿ ಸೋಽಪಿ ದ್ವಿಜೋ ದಾಸೀಂ ತಮುವಾಚ ನನಂದ ಚ ॥ ೮೬
ಕ್ರಮಾದತ್ರ ವಿವೃದ್ಧಾ ಸಾ ಕನ್ಯಾ ವಿಪ್ರಾತ್ಮಜಶ್ಚ ಸಃ ।
ಅನ್ಯೋನ್ಯದರ್ಶನಾಬದ್ಧಗಾಢಸ್ನೇಹೌ ಬಭೂವತುಃ ॥ ೮೭
ತತಃ ಕೃತವಿವಾಹೌ ತೌ ತೇನ ವಿಪ್ರೇಣ ದಂಪತೀ ।
ಅಜಾತಿಸ್ಮರಣೇಽಪ್ಯಾಸ್ತಾಂ ಉತ್ತೀರ್ಣವಿರಹಾವಿವ ॥ ೮೮
ಅಥ ಕಾಲೇನ ದೇಹಾಂತೇ ತಯಾ ಸೋಽನುಗತಃ ಪತಿಃ ।
ತತ್ತಪಃಕ್ಷತಪಾಪಃ ಸನ್ ಯಕ್ಷಃ ಸ್ವಂ ಪ್ರಾಪ್ತವಾನ್ ಪದಮ್ ॥ ೮೯

೯೦-೯೨. ಹೀಗೆ ಅಯೋನಿಜರು ದೈವ ಪ್ರೇರಣೆಯಿಂದ ಯಾವುದೋ ಕಾರಣದಿಂದ ಯಾವ ದೋಷವೂ ಇಲ್ಲದವರಾದ್ದರಿಂದ ಅಯೋನಿಜರಾಗಿ ಭೂಲೋಕದಲ್ಲಿ ಜನಿಸುತ್ತಾರೆ. ಆದ್ದರಿಂದ ರಾಜನೆ, ಇವಳ ಕುಲಯಾವುದಾದರೇನು ? ಕಳಿಂಗಸೇನೆಯ ಈ ಹೆಣ್ಣುಮಗು ನಿನ್ನ ಮಗನ ಪತ್ನಿಯಾಗುವಳು ಎಂದು ದೇವತೆಗಳೇ ತೀರ್ಮಾನಿಸಿದ್ದಾರೆ' ಎಂದು ಯೌಗಂಧರಾಯಣನು ಹೇಳಿದನು. ಅದನ್ನು ಕೇಳಿ ವತ್ಸರಾಜ ಮತ್ತು ವಾಸವದತ್ತೆ ಹಾಗೆಯೇ ಆಗಲಿ ಎಂದು ತೀರ್ಮಾನಿಸಿದರು.

೯೩. ಮಂತ್ರಿಯಾದ ಯೌಗಂಧರಾಯಣನು ತನ್ನ ಮನೆಗೆ ಹೊರಟುಹೋದಮೇಲೆ ವತ್ಸರಾಜನು ಪಾನ ಇತ್ಯಾದಿ ಕ್ರೀಡೆಯಿಂದ ಹೆಂಡತಿಯೊಡನೆ ಸುಖವಾಗಿ ಕಾಲಕಳೆದನು.

೯೪-೯೫. ಹೀಗೆ ಕೆಲವು ಕಾಲ ಕಳೆದ ಮೇಲೆ ಕಳಿಂಗಸೇನೆಯ ಮಗಳು ಮೋಹದಿಂದ ಮುಚ್ಚಿಹೋದ ತನ್ನ ಸ್ಮರಣೆಯುಳ್ಳವಳಾಗಿ ಬೆಳೆದಳು. ಅವಳೊಡನೆ ಅವಳ ರೂಪಸಂಪತ್ತು ಬೆಳೆಯಿತು. ಮದನವೇಗನ ಆ ಮಗಳಿಗೆ ಅವಳತಾಯಿ ಮತ್ತು ಇತರ ಜನರು ಸೇರಿ ಮದನಮಂಚುಕಾ ಎಂದು ಹೆಸರಿಟ್ಟರು.

೯೬. ಆ ಕನ್ಯೆಯು ಇತರ ಎಲ್ಲ ಶ್ರೇಷ್ಠ ಸ್ತ್ರೀಯರ ರೂಪವನ್ನೂ ಒಟ್ಟಾಗಿ ಪಡೆದಿದ್ದಳು. ಹಾಗಿಲ್ಲದೆ ಹೋಗಿದ್ದರೆ ಅವಳ ಮುಂದೆ ಅವರೆಲ್ಲರೂ ಹೇಗೆ ತಾನೆ ರೂಪಹೀನರಾಗಿರುತ್ತಿದ್ದರು ?

---

ಇತೀಹಾವತರಂತ್ಯೇವ ನಿರಾಗಸ್ತ್ವಾದಯೋನಿಜಾಃ ।
ಭೂತಲೇ ಕಾರಣವಶಾದ್ದಿವ್ಯಾ ದೈವತನಿರ್ಮಿತಾಃ ॥ ೯೦
ಕುಲಂ ಕಿಂ ನೃಪತೇ ತೇಽಸ್ಯಾಸ್ತಸ್ಮಾದ್ಭಾರ್ಯಾ ಸುತಸ್ಯ ತೇ ।
ಕಲಿಂಗಸೇನಾಪುತ್ರೀಯಂ ಯಥೋಕ್ತಾ ದೈವನಿರ್ಮಿತಾ ॥ ೯೧
ಯೌಗಂಧರಾಯಣೇನೈವಮುಕ್ತೇ ವತ್ಸೇಶ್ವರಶ್ಚ ತತ್ ।
ದೇವೀ ವಾಸವದತ್ತಾ ಚ ತಥೇತಿ ಹೃದಿ ಚಕ್ರತುಃ ॥ ೯೨
ತತಸ್ತಸ್ಮಿನ್ ಗೃಹಂ ಯಾತೇ ಮಂತ್ರಿಮುಖ್ಯೇ ಸ ಭೂಪತಿಃ ।
ಪಾನಾದಿಕ್ರೀಡಯಾ ನಿನ್ಯೇ ಸಭಾರ್ಯಸ್ತದ್ದಿನಂ ಸುಖೀ ॥ ೯೩
ತತೋ ದಿನೇಷು ಗಚ್ಛತ್ಸು ಮೋಹಭ್ರಷ್ಟಸ್ವಕಸ್ಮೃತಿಃ ।
ಕಲಿಂಗಸೇನಾತನಯಾ ಸಾ ಸಮಂ ರೂಪಸಂಪದಾ ॥ ೯೪
ಕ್ರಮೇಣ ವವೃಧೇ ನಾಮ್ನಾ ಕೃತಾ ಮದನಮಂಚುಕಾ ।
ಸುತಾ ಮದನವೇಗಸ್ಯೇತ್ಯತೋ ಮಾತ್ರಾ ಜನೇನ ಚ ॥ ೯೫
ನೂನಂ ಸಾ ಶಿಶ್ರಿಯೇ ರೂಪಂ ಸರ್ವಾನ್ಯವರಯೋಷಿತಾಮ್ ।
ಅನ್ಯಥಾ ತಾಃ ಪುರಸ್ತಸ್ಯಾಃ ವಿರೂಪಾಃ ಜಜ್ಞಿರೇ ಕಥಮ್ ॥ ೯೬

೯೭. ಅವಳು ಸುಂದರವಾಗಿದ್ದಾಳೆಂದು ಕೇಳಿ ಕುತೂಹಲಗೊಂಡ ವಾಸವದತ್ತೆಯು ಅವಳನ್ನು ತನ್ನ ಹತ್ತಿರಕ್ಕೆ ಕರೆಸಿಕೊಂಡಳು.

೯೮. ಅಲ್ಲಿ ದಾದಿಯ ಮುಖವನ್ನೇ ನೋಡುತ್ತಿದ್ದ ದೀಪದ ಬತ್ತಿಯ ಜ್ವಾಲೆಯಂತಿದ್ದ ಮದನ ಮಂಚುಕೆಯನ್ನು ವತ್ಸರಾಜನೂ ಯೌಗಂಧರಾಯಣ ಮೊದಲಾದವರೂ ನೋಡಿದರು.

೯೯. ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದ ಅವಳ ಅಪೂರ್ವವಾದ ಶರೀರವನ್ನು ನೋಡಿ ರತಿಯೇ ಅವತರಿಸಿ ಬಂದಿದ್ದಾಳೆಂದು ಎಲ್ಲರೂ ಭಾವಿಸಿದರು.

೧೦೦. ಆಮೇಲೆ ವಾಸವದತ್ತೆಯು ಜಗತ್ತಿನ ಕಣ್ಣಿಗೆ ಆನಂದದಾಯಕನಾಗಿದ್ದ ನರವಾಹನದತ್ತನನ್ನು ಕರೆಸಿದಳು.

೧೦೧. ಅರಳಿದ ಕಮಲದಂಥ ಮುಖದ ಅವನು ಕಮಲದ ಸರೋವರವು ಸೂರ್ಯನ ಎಳೆ ಬಿಸಿಲನ್ನು ನೋಡುವಂತೆ ತೇಜಸ್ವಿನಿಯಾಗಿದ್ದ ಮದನ ಮಂಚುಕೆಯನ್ನು ನೋಡಿದನು.

೧೦೨. ಅರಳಿದ ಮುಖದ ಅವಳೂ ಕೂಡ ಚಕೋರಿಯು ಚಂದ್ರಬಿಂಬವನ್ನು ನೋಡುವಂತೆ ತನ್ನ ಕಣ್ಣುಗಳಿಗೆ ಆನಂದದಾಯಕನಾಗಿದ್ದ ಅವನನ್ನು ಎಷ್ಟು ನೋಡಿದರೂ ತೃಪ್ತಿಯನ್ನು ಹೊಂದಲಿಲ್ಲ.

---

ಶ್ರುತ್ವಾ ರೂಪವತೀಂ ತಾಂ ಚ ಕೌತುಕಾತ್ ಸ್ವಯಮೇಕದಾ ।
ದೇವೀ ವಾಸವದತ್ತಾ ತಾಮಾನಿನಾಯಾತ್ಮನೋಽಂತಿಕಮ್ ॥ ೯೭
ತತ್ರ ಧಾತ್ರ್ಯಾ ಮುಖಾಸಕ್ತಾಂ ವತ್ಸರಾಜೋ ದದರ್ಶ ತಾಮ್ ।
ಯೌಗಂಧರಾಯಣಾದ್ಯಾಶ್ಚ ವರ್ತೇರ್ದೀಪಶಿಖಾಮಿವ ॥ ೯೮
ದೃಷ್ಟ್ವಾ ಚಾದೃಷ್ಟಪೂರ್ವಂ ತತ್ ತಸ್ಯಾ ನೇತ್ರಾಮೃತಂ ವಪುಃ ।
ರತಿರೇವಾವತೀರ್ಣೇಯಮಿತಿ ಮೇನೇ ನ ತತ್ರ ಕಃ ॥ ೯೯
ತತಶ್ಚಾನಯಯಾಂಚಕ್ರೇ ದೇವ್ಯಾ ವಾಸವದತ್ತಯಾ ।
ನರವಾಹನದತ್ತೋಽತ್ರ ಜಗನ್ನೇತ್ರೋತ್ಸವಃ ಸುತಃ ॥ ೧೦೦
ಸೋಽತ್ರಫುಲ್ಲಮುಖಾಂಭೋಜೋ ದೀಪ್ತಾಂ ಮದನಮಂಚುಕಾಮ್ ।
ತಾಮಪಶ್ಯನ್ನವಾಂ ಸೌರೀಮಿವ ಪದ್ಮಾಕರಃ ಪ್ರಭಾಮ್ ॥ ೧೦೧
ಸಾಪಿ ತಂ ಲೋಚನಾನಂದಂ ಪಶ್ಯಂತೀ ವಿಕಚಾನನಾ ।
ನ ತೃಪ್ತಿಮಾಯಯೌ ಬಾಲಾ ಚಕೋರೀವಾಮೃತತ್ವಿಷಮ್ ॥ ೧೦೨

೧೦೩. ಅಂದಿನಿಂದ ಅವರಿಬ್ಬರೂ ಚಿಕ್ಕವರಾಗಿದ್ದರೂ ಸಹ ಬೇರೆಯಾಗಿರಲು ಸಾಧ್ಯವಾಗಲಿಲ್ಲ

೧೦೪. ದಿನಗಳು ಕಳೆಯುತ್ತಿದ್ದಂತೆ ಅವರಿಬ್ಬರ ಸಂಬಂಧವು ದೈವದಿಂದಲೇ ತೀರ್ಮಾನವಾಗಿರುವುದು ಎಂದು ನಿಶ್ಚಯಿಸಿ ವತ್ಸರಾಜನು ಅವರಿಬ್ಬರಿಗೂ ವಿವಾಹಕ್ಕೆ ಸಿದ್ಧತೆ ಮಾಡಲು ತೀರ್ಮಾನಿಸಿದನು.

೧೦೫. ಅದನ್ನು ತಿಳಿದು ಕಳಿಂಗಸೇನೆಯು ಆನಂದಪಟ್ಟಳು. ನರವಾಹನದತ್ತನನ್ನು ಅಳಿಯನೆಂಬ ಪ್ರೀತಿಯಿಂದ ನೋಡಿದಳು.

೧೦೬. ವತ್ಸರಾಜನು ಮಂತ್ರಿಗಳೊಡನೆ ಸಮಾಲೋಚಿಸಿ ತನ್ನ ಮಗನಿಗೇ ಪ್ರತ್ಯೇಕವಾಗಿ ತನ್ನದಂತಹುದೇ ಅರಮನೆಯನ್ನು ಕಟ್ಟಿಸಿದನು.

೧೦೭. ಅನಂತರ ಒಳ್ಳೆಯ ಅರ್ಹತೆಗಳಿಂದ ಕೂಡಿದ್ದ ತನ್ನ ಮಗನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು.

೧೦೮. ನರವಾಹನದತ್ತನ ತಲೆಯ ಮೇಲೆ ಮೊದಲು ತಂದೆಯ ಆನಂದಬಾಷ್ಪವು ಬಿದ್ದಿತು. ಅನಂತರ ವೇದೋಕ್ತರೀತ್ಯಾ ತೀರ್ಥಕ್ಷೇತ್ರಗಳ ಜಲದಿಂದ ಅಭಿಷೇಕವು ನಡೆಯಿತು.

---

ತತಃ ಪ್ರಭೃತಿ ತೌ ಬಾಲಾವಪಿ ಸ್ಥಾತುಂ ನ ಶೇಕತುಃ ।
ದೃಷ್ಟಿಪಾಶೈರಿವಾಬದ್ಧೌ ಪೃಥಗ್ಭೂತಾವಪಿ ಕ್ಷಣಮ್ ॥ ೧೦೩

ದಿನೈರ್ನಿಶ್ಚಿತ್ಯ ಸಂಬಂಧಂ ದೇವನಿರ್ಮಿತಮೇವ ತು ।
ವಿವಾಹವಿಧಯೇ ಬುದ್ಧಿಂ ವ್ಯಧಾತ್ ವತ್ಸೇಶ್ವರಸ್ತಯೋಃ ॥ ೧೦೪

ಕಲಿಂಗಸೇನಾ ತದ್ ಬುದ್ಧ್ವಾ ನನಂದ ಚ ಬಬಂಧ ಚ ।
ನರವಾಹನದತ್ತೇಽಸ್ಮಿನ್ ಜಾಮಾತೃಪ್ರೀತಿತೋ ಧೃತಿಮ್ ॥ ೧೦೫

ಸಂಮಂತ್ರ್ಯ ಮಂತ್ರಿಭಿಃ ಸಾರ್ಧಂ ತತಶ್ಚಾಕಾರಯತ್ ಪೃಥಕ್ ।
ವತ್ಸರಾಜಃ ಸ್ವಪುತ್ರಸ್ಯ ತಸ್ಯ ಸ್ವಮಿವ ಮಂದಿರಮ್ ॥ ೧೦೬

ತತಃ ಸಂಭೃತ್ಯ ಸಂಭಾರಾನ್ ಪುತ್ರಂ ರಾಜಾ ಸ ಕಾಲವಿತ್ ।
ಯೌವರಾಜ್ಯೇಽಭಿಷಿಂಚತ್ತಂ ದೃಷ್ಟಶ್ಲಾಘ್ಯಗುಣಗ್ರಹಮ್ ॥ ೧೦೭

ಪೂರ್ವಂ ತಸ್ಯಾಪತನ್ ಮೂರ್ಧ್ನಿ ಪಿತ್ರೋರಾನಂದಬಾಷ್ಪಜಮ್ ।
ತತಃ ಶ್ರೌತಮಹಾಮಂತ್ರಪೂತಂ ಸತ್ತೀರ್ಥಜಂ ಪಯಃ ॥ ೧೦೮

೧೦೯-೧೧೦. ಅಭಿಷೇಕದ ನೀರಿನಿಂದ ನರವಾಹನದತ್ತನ ಮುಖವೆಂಬ ಕಮಲವು ಶುಭ್ರವಾಗಿದ್ದಲ್ಲದೆ ಅದರಿಂದ ದಿಕ್ಕುಗಳೂ ನಿರ್ಮಲಗೊಂಡವು. ಅವನ ತಾಯಂದಿರು ಮಂಗಳಕರವಾದ ಪುಷ್ಪಮಾಲೆಗಳನ್ನು ಅವನಿಗೆ ಹಾಕುತ್ತಿರುವಾಗಲೇ ಸ್ವರ್ಗಲೋಕವೂ ದಿವ್ಯಮಾಲೆಗಳ ವೃಷ್ಟಿಯನ್ನು ಸುರಿಸಿತು.

೧೧೧. ದೇವಲೋಕದ ನಗಾರಿಗಳ ಶಬ್ದಕ್ಕೆ ಸ್ಪರ್ಧೆಯೊಡ್ಡುವಂತೆ ಆನಂದದ ಕಹಳೆಗಳ ಜಯಘೋಷವು ಆಕಾಶದಲ್ಲಿ ಪ್ರತಿಧ್ವನಿಸಿತು.

೧೧೨. ಯುವರಾಜನಾಗಿ ಅಭಿಷಿಕ್ತನಾದ ಅವನಿಗೆ ಯಾರು ತಾನೇ ಬಗ್ಗಲಿಲ್ಲ ? ತನ್ನ ಪ್ರಭಾವವನ್ನು ಉಪಯೋಗಿಸದೆಯೇ ಇವನು ಹಾಗೆಯೇ ತಲೆಯೆತ್ತಿದನು.

೧೧೩. ಆಮೇಲೆ ವತ್ಸರಾಜನು ತನ್ನ ಮಗನಿಗೆ ಅವನ ಬಾಲ್ಯದ ಗೆಳೆಯರಾದ ಮಂತ್ರಿ ಪುತ್ರರನ್ನೇ ಮಂತ್ರಿಗಳನ್ನಾಗಿ ಮಾಡಿದನು.

೧೧೪-೧೧೬. ಯೌಗಂಧರಾಯಣನ ಮಗನಾದ ಮರುಭೂತಿಯನ್ನು ಮಂತ್ರಿಯನ್ನಾಗಿ ರುಮಣ್ವಂತನ ಮಗ ಹರಿಶಿಖನನ್ನು ಸೇನಾಪತಿಯನ್ನಾಗಿ ವಸಂತಕನ ಮಗನಾದ ತಪಂತಕನನ್ನು ಕ್ರೀಡಾಸಚಿವನನ್ನಾಗಿ ಮತ್ತು ಇತ್ಯಕನ ಮಗನಾದ ಗೋಮುಖನನ್ನು ಪ್ರತೀಹಾರನನ್ನಾಗಿ ಮಾಡಿದನು. ಪಿಂಗಳಿಕೆಯ ಮಕ್ಕಳಾದ ವೈಶ್ವಾನರ ಮತ್ತು ಶಾಂತಿಸೋಮನನ್ನು ಪುರೋಹಿತರನ್ನಾಗಿಯೂ ಮಾಡಿದನು.

---

ಅಭಿಷೇಕಾಂಬುಭಿಸ್ತಸ್ಯ ಧೌತೇ ವದನಪಂಕಜೇ ।
ಚಿತ್ರಂ ನಿರ್ಮಲತಾಂ ಪ್ರಾಪುಃ ಮುಖಾನಿ ಕಕುಭಾಮಪಿ ॥ ೧೦೯
ಮಂಗಲ್ಯಮಾಲ್ಯಪುಷ್ಪೇಷು ತಸ್ಯ ಕ್ಷಿಪ್ತೇಷು ಮಾತೃಭಿಃ ।
ಮುಮೋಚ ದಿವ್ಯಮಾಲ್ಯೌಘವರ್ಷಂ ದ್ಯೌರಪಿ ತತ್ಕ್ಷಣಮ್ ॥ ೧೧೦
ದೇವದುಂದುಭಿನಿರ್ಹ್ರಾದಸ್ಪರ್ಧಯೇವ ಜಜೃಂಭಿರೇ ।
ಆನಂದತೂರ್ಯನಿಘೋಷಪ್ರತಿಶಬ್ದಾ ನಭಸ್ಥಲೇ ॥ ೧೧೧
ಪ್ರಣನಾಮಾಭಿಷಿಕ್ತಂ ತಂ ಯುವರಾಜಂ ನ ತತ್ರ ಕಃ ।
ಸ್ವಪ್ರಭಾವಾದೃತೇ ತೇನೈವೋನ್ನನಾಮ ತದಾ ಹಿ ಸಃ ॥ ೧೧೨
ತತೋ ವತ್ಸೇಶ್ವರಸ್ತಸ್ಯ ಸೂನೋರ್ಬಾಲಸಖೀನ್ ಸತಃ ।
ಸ್ವಮಂತ್ರಿಪುತ್ರಾನಾಹೂಯ ಸಚಿವತ್ವೇ ಸಮಾದಿಶತ್ ॥ ೧೧೩
ಯೌಗಂಧರಾಯಣಸುತಂ ಮಂತ್ರಿತ್ವೇ ಮರುಭೂತಿಕಮ್ ।
ಸೇನಾಪತ್ಯೇ ಹರಿಶಿಖಂ ರುಮಣ್ವತ್ತನಯಂ ತತಃ ॥ ೧೧೪
ವಸಂತಕಸುತಂ ಕ್ರೀಡಾಸಖಿತ್ವೇ ತು ತಪಂತಕಮ್ ।
ಗೋಮುಖಂ ಚ ಪ್ರತೀಹಾರಧುರಾಯಾಮಿತ್ಯಕಾತ್ಮಜಮ್ ॥ ೧೧೫
ಪೌರೋಹಿತ್ಯೇ ಚ ಪೂರ್ವೋಕ್ತಾವುಭೌ ಪಿಂಗಲಿಕಾಸುತೌ ।
ವೈಶ್ವಾನರಂ ಶಾಂತಿಸೋಮಂ ಭ್ರಾತುಃ ಪುತ್ರೌ ಪುರೋಧಸಃ ॥ ೧೧೬

೧೧೭. ಈ ರೀತಿಯಾಗಿ ರಾಜನು ಅವರನ್ನೆಲ್ಲ ತನ್ನ ಮಗನ ಮಂತ್ರಿಗಳನ್ನಾಗಿ ಮಾಡಿದಾಗ ಪುಷ್ಪವೃಷ್ಟಿಯೊಡನೆ ಆಕಾಶವಾಣಿಯು ಹೊರಹೊಮ್ಮಿತು.

೧೧೮. "ಇವನ ಮಂತ್ರಿಗಳೆಲ್ಲರೂ ಎಲ್ಲ ರೀತಿಯಲ್ಲೂ ಒಳ್ಳೆಯದನ್ನೇ ಮಾಡುತ್ತಾರೆ. ಗೋಮುಖನು ಇವನಿಗೆ ಅತ್ಯಂತ ನಿಕಟದಲ್ಲಿಯೇ ಒಂದೇ ಶರೀರದಂತೆಯೇ ಇರುವನು.'

೧೧೯. ಹೀಗೆಂಬ ದಿವ್ಯವಾಣಿಯಿಂದ ಹರ್ಷಗೊಂಡ ವತ್ಸರಾಜನು ಅವರೆಲ್ಲರಿಗೂ ವಸ್ತ್ರಗಳನ್ನೂ ಆಭರಣಗಳನ್ನೂ ನೀಡಿ ಗೌರವಿಸಿದನು.

೧೨೦. ತನ್ನನ್ನು ಆಶ್ರಯಿಸಿದವರಿಗೆಲ್ಲ ಐಶ್ವರ್ಯದ ವೃಷ್ಟಿ ಮಾಡುತ್ತಿರುವಾಗ 'ದರಿದ್ರ' ಎಂಬ ಶಬ್ದದ ಅರ್ಥವೇ ಕಾಣುತ್ತಿರಲಿಲ್ಲ.

೧೨೧. ಗಾಳಿ ಬೀಸಿದ್ದರಿಂದ ಬಾವುಟದ ಬಟ್ಟೆಗಳು ಹಾರಾಡುತ್ತಿದ್ದು ಅವುಗಳಿಂದಲೇ ಆಹ್ವಾನಿತವಾದುವೋ ಎಂಬಂತೆ ಇರುವ ನರ್ತಕಿಯರ ನಡೆಗಳಿಂದ ಆ ಪಟ್ಟಣವು ತುಂಬಿ ಹೋಗಿತ್ತು.

೧೨೨. ಕಳಿಂಗಸೇನೆಯ ಅಳಿಯನ ಈ ಉತ್ಸವದಲ್ಲಿ ಸಾಕ್ಷಾತ್ ವಿದ್ಯಾಧರ ಲಕ್ಷ್ಮಿಯೇ ಬಂದಂತೆ ಇತ್ತು.

೧೨೩. ಆಗ ವಾಸವದತ್ತೆ ಕಳಿಂಗಸೇನೆ ಮತ್ತು ಪದ್ಮಾವತಿಯರು ಮೂರು ಶಕ್ತಿಗಳ ಮಿಲನವೋ ಎಂಬಂತೆ ಸೇರಿ ನರ್ತಿಸಿದರು.

---

ಇತ್ಯಾಜ್ಞಪ್ತೇಷು ಪುತ್ರಸ್ಯ ಸಾಚಿವ್ಯೇ ತೇಷು ಭೂಭೃತಾ ।
ಗಗನಾದುದಭೂದ್ವಾಣೀ ಪುಷ್ಪವೃಷ್ಟಿಪುರಃಸರಾ ॥ ೧೧೭

ಸರ್ವಾರ್ಥಸಾಧಕಾ ಏತೇ ಭವಿಷ್ಯಂತ್ಯಸ್ಯ ಮಂತ್ರಿಣಃ ।
ಶರೀರಾದವಿಭಿನ್ನೋಽಸ್ಯ ಗೋಮುಖಸ್ತು ಭವಿಷ್ಯತಿ ॥ ೧೧೮

ಇತ್ಯುಕ್ತೋ ದಿವ್ಯಯಾ ವಾಚಾ ಹೃಷ್ಟೋ ವತ್ಸೇಶ್ವರಶ್ಚ ಸಃ ।
ಸರ್ವಾನ್ ಸಂಮಾನಯಾಮಾಸ ವಸ್ತ್ರೈರಾಭರಣೈಶ್ಚ ತಾನ್ ॥ ೧೧೯

ಅನುಜೀವಿಷು ತಸ್ಮಿಂಶ್ಚ ವಸು ವರ್ಷತಿ ರಾಜನಿ ।
ದರಿದ್ರಶಬ್ದಸ್ಯೈಕಸ್ಯ ನಾಸೀತ್ತತ್ರಾರ್ಥಸಂಗತಿಃ ॥ ೧೨೦

ಪವನೋಲ್ಲಾಸಿತಾಕ್ಷಿಪ್ತಪತಾಕಾಪಟಪಂಕ್ತಿಭಿಃ ।
ಆಹೂತೈರಿವ ಸಾಪೂರಿ ನರ್ತಕೀಚರಣೈಃ ಪುರೀ ॥ ೧೨೧

ಆಗಾದ್ವೈದ್ಯಾಧರೀ ಸಾಕ್ಷಾತ್ ಲಕ್ಷ್ಮೀಸ್ತತ್ರೈವ ಭಾವಿನೀ ।
ಕಲಿಂಗಸೇನಾಜಾಮಾತುರುತ್ಸವೇಽತ್ರ ಭವಿಷ್ಯತಃ ॥ ೧೨೨

ತತೋ ವಾಸವದತ್ತಾ ಚ ಸಾ ಚ ಪದ್ಮಾವತೀ ತಥಾ ।
ಹರ್ಷೇಣ ನನೃತುಸ್ತಿಸ್ರೋ ಮಿಲಿತಾ ಇವ ಶಕ್ತಯಃ ॥ ೧೨೩

೧೨೪. ಗಾಳಿಬೀಸಿದ್ದರಿಂದ ಬಳ್ಳಿಗಳೂ, ಉದ್ಯಾನದ ಮರಗಳೂ ನೃತ್ಯ ಮಾಡುವಂತೆ ಇರುವಾಗ ಜೀವಿಗಳು ನೃತ್ಯ ಮಾಡದೇ ಇರುತ್ತಾರೆಯೇ ?

೧೨೫. ಆಮೇಲೆ ಅಭಿಷಿಕ್ತನಾದ ಯುವರಾಜ ನರವಾಹನದತ್ತನು ಜಯಕುಂಜರ ಎಂಬ ಆನೆಯ ಮೇಲೆ ಕುಳಿತು ಹೊರಟನು.

೧೨೬. ನೀಲಿ ಕಮಲವೆಂಬ ಅರಳನ್ನು ಪದ್ಮವೆಂಬ ಅಂಜಲಿಯಲ್ಲಿ ಹಾಕಿಕೊಂಡಂತೆ ನೀಲಿ ಮತ್ತು ನಸುಗೆಂಪು ಬಣ್ಣದ ಕಣ್ಣುಗಳನ್ನು ಮೇಲೆತ್ತಿ ಪೌರಸ್ತ್ರೀಯರು ಅವನನ್ನು ನೋಡಿದರು.

೧೨೭. ಆ ನಗರದ ಪೂಜ್ಯದೇವತೆಯ ದರ್ಶನಮಾಡಿ ವಂದಿಮಾಗಧರಿಂದ ಪ್ರಶಂಸಿಸಲ್ಪಡುತ್ತಾ ಯುವರಾಜನು ಮಂತ್ರಿಗಳೊಡನೆ ತನ್ನ ಅರಮನೆಗೆ ಬಂದನು.

೧೨೮-೧೨೯. ಅಲ್ಲಿ ಕಳಿಂಗಸೇನೆಯು ತನ್ನ ಶಕ್ತಿಗೂ ಮೀರಿದ ದಿವ್ಯವಾದ ಭಕ್ಷ್ಯ ಭೋಜ್ಯಪಾನಾದಿಗಳನ್ನು ಅವನಿಗೆ ಒದಗಿಸಿದಳು. ಅಳಿಯನ ಮೇಲಿನ ಸ್ನೇಹದಿಂದ ಉತ್ಸುಕಳಾಗಿ ದಿವ್ಯವಾದ ಆಭರಣಗಳನ್ನೂ ಒಳ್ಳೆಯ ವಸ್ತ್ರಗಳನ್ನೂ ಅವನಿಗೂ ಅವನ ಮಂತ್ರಿಗಳಿಗೂ ಸೇವಕರಿಗೂ ಕೊಟ್ಟಳು.

೧೩೦. ಹೀಗೆ ಮಹೋತ್ಸವದಿಂದ ವತ್ಸರಾಜ ಮೊದಲಾದವರೆಲ್ಲರೂ ಇಡೀ ದಿನವನ್ನು ಕಳೆದರು.

---

ಮಾರುತಾಂದೋಲಿತಲತಾಃ ಪ್ರನೃತ್ಯನ್ನಿವ ಪರ್ವತಃ ।
ಉದ್ಯಾನತರವೋಽಪ್ಯತ್ರ ಚೇತನೇಷು ಕಥೈವ ಕಾ ॥ ೧೨೪

ತತಃ ಕೃತಾಭಿಷೇಕಃ ಸನ್ ಆರುಹ್ಯ ಜಯಕುಂಜರಮ್ ।
ನರವಾಹನದತ್ತಃ ಸ ಯುವರಾಜೋ ವಿನಿರ್ಯಯೌ ॥ ೧೨೫

ಅವಾಕೀರ್ಯತ ಚೋತ್ಕ್ಷಿಪ್ತೈಃ ನೇತ್ರೈರ್ನೀಲಸಿತಾರುಣೈಃ ।
ಪೌರಸ್ತ್ರೀಭಿಃ ಸ ನೀಲಾಬ್ಜಲಾಜಪದ್ಮಾಂಜಲಿಪ್ರಭೈಃ ॥ ೧೨೬

ದೃಷ್ಟ್ವಾ ಚ ತತ್ಪುರೀಪೂಜ್ಯದೇವತಾ ವಂದಿಮಾಗಧೈಃ ।
ಸ್ತೂಯಮಾನಃ ಸಸಚಿವಃ ಸ ವಿವೇಶ ಸ್ವಮಂದಿರಮ್ ॥ ೧೨೭

ತತ್ರ ದಿವ್ಯಾನಿ ಭೋಜ್ಯಾನಿ ತಥಾ ಪಾನಾನ್ಯುಪಾಹರತ್ ।
ಕಲಿಂಗಸೇನಾಜಾಮಾತುರುತ್ಸವೇಽತ್ರ ಭವಿಷ್ಯತಃ ॥ ೧೨೮

ದದೌ ತಸ್ಮೈ ಸುವಸ್ತ್ರಾಣಿ ದಿವ್ಯಾನ್ಯಾಭರಣಾನಿ ಚ ।
ಸಮಂತ್ರಿಸವಿಭೃತ್ಯಾಯ ಜಾಮಾತೃಸ್ನೇಹಕಾತರಾ ॥ ೧೨೯

ಏವಮ್ ಮಹೋತ್ಸವೇನಾಸಾವಮೃತಸ್ವಾದಸುಂದರಃ ।
ಏಷಾಂ ವತ್ಸೇಶ್ವರಾದೀನಾಂ ಸರ್ವೇಷಾಂ ವಾಸರೋ ಯಯೌ ॥ ೧೩೦

೧೩೧. ರಾತ್ರಿಯಾದಾಗ ಮಗಳ ಮದುವೆಯ ಬಗ್ಗೆ ವಿಚಾರಮಾಡುತ್ತಿದ್ದ ಕಳಿಂಗಸೇನೆಯು ತನ್ನ ಗೆಳತಿಯಾದ ಸೋಮಪ್ರಭೆಯನ್ನು ನೆನೆದಳು.

೧೩೨–೧೩೩. ಕಳಿಂಗಸೇನೆಯು ಜ್ಞಾಪಿಸಿಕೊಳ್ಳುತ್ತಿರುವುದನ್ನು ಅರಿತ ಅವಳ ಪತಿಯಾದ ನಳಕೂಬರನು ಕಳಿಂಗ ಸೇನೆಯು ಆ ಉತ್ಸುಕತೆಯಿಂದ ಸ್ಮರಿಸುತ್ತಿದ್ದಾಳೆ. ನೀನು ಹೋಗು. ನಿನ್ನ ಗೆಳತಿಯ ಮಗಳಿಗಾಗಿ ದಿವ್ಯವಾದ ಉದ್ಯಾನವೊಂದನ್ನು ನಿರ್ಮಿಸು.

೧೩೪. ಎಂದು ಹೇಳಿ ಅವಳ ಭೂತ ಭವಿಷ್ಯತ್ತುಗಳನ್ನು ಹೇಳಿ ಕಳಿಸಿಕೊಟ್ಟನು.

೧೩೫ ಬಹುಕಾಲದ ನಂತರ ಬಂದದ್ದರಿಂದ ಉತ್ಕಂಠೆಗೆ ಒಳಗಾಗಿದ್ದ ಕಳಿಂಗಸೇನೆಯು ಅವಳನ್ನು ಬಿಗಿಯಾಗಿ ಅಪ್ಪಿಕೊಂಡಳು. ಕಳಿಂಗಸೇನೆಯ ಕುಶಲವನ್ನು ವಿಚಾರಿಸಿ ಸೋಮಪ್ರಭೆಯು ಹೀಗೆಂದಳು.

೧೩೬ "ನೀನು ಶ್ರೀಮಂತನಾದ ವಿದ್ಯಾಧರನನ್ನು ಮದುವೆಯಾಗಿರುವೆ. ವರಶಿವನ ಅನುಗ್ರಹದಿಂದ ರತಿಯು ಮಗಳಾಗಿ ಅವತರಿಸಿದ್ದಾಳೆ.

---

ತತೋ ನಿಶಾಯಾಂ ಪ್ರಾಪ್ತಾಯಾಂ ಸುತೋದ್ವಾಹವಿಮರ್ಶಿನೀ ।
ಕಲಿಂಗಸೇನಾ ಸಸ್ಮಾರ ತಾಂ ಸಾ ಸೋಮಪ್ರಭಾಂ ಸಖೀಮ್ ॥ ೧೩೧
ಏತಯಾ ಸ್ಮೃತಮಾತ್ರಾಂ ತಾಂ ಮಯಾಸುರಸುತಾಂ ತದಾ ।
ಭವ್ಯಾಂ ಭರ್ತಾ ಮಹಾಜ್ಞಾನೀ ಜಗಾದ ನಲಕೂಬರಃ ॥ ೧೩೨
ಕಲಿಂಗಸೇನಾ ತ್ವಾಮದ್ಯ ಸೋತ್ಸುಕಾ ಸ್ಮರತಿ ಪ್ರಿಯೇ ।
ತದ್ಗಚ್ಛ ದಿವ್ಯಮುದ್ಯಾನಂ ಕುರು ಚೈತತ್ ಸುತಾಕೃತೇ ॥ ೧೩೩
ಇತ್ಯುಕ್ತ್ವಾ ಭಾವಿ ಭೂತಂ ಚ ಕಥಯಿತ್ವಾ ಚ ತದ್ಗತಮ್ ।
ತದೈವ ಪ್ರೇಷಯಾಮಾಸ ಪತ್ನೀಂ ಸೋಮಪ್ರಭಾಂ ಪತಿಃ ॥ ೧೩೪
ಸಾ ಚಾಗತ್ಯ ಚಿರೋತ್ಕಂಠಾಕೃತಕಂಠಗ್ರಹಾಂ ಸಖೀಮ್ ।
ಕಲಿಂಗಸೇನಾಂ ಕುಶಲಂ ಪೃಷ್ಟ್ವಾ ಸೋಮಪ್ರಭಾಬ್ರವೀತ್ ॥ ೧೩೫
ವಿದ್ಯಾಧರೇಣ ತಾವತ್ ತ್ವಂ ಪರಿಣೀತಾ ಮಹರ್ಧಿನಾ ।
ಅವತೀರ್ಣಾ ರತಿಸ್ತೇ ಚ ಸುತಾ ಶಾರ್ವಾದನುಗ್ರಹಾತ್ ॥ ೧೩೬

೧೩೭-೧೪೧. "ಮನ್ಮಥನು ಅವತಾರವೆತ್ತಿ ವತ್ಸರಾಜನ ಮಗನಾಗಿ ನರವಾಹನದತ್ತನೆಂದು ಪ್ರಖ್ಯಾತನಾಗಿದಾನೆ. ನಿನ್ನ ಮಗಳು ಅವನ ಮೊದಲ ಪತ್ನಿಯಾಗಿ ನಿಯೋಜಿತಳಾಗಿದ್ದಾಳೆ. ಅವನು ದಿವ್ಯವಾದ ವಿದ್ಯಾಧರ ರಾಜ್ಯವನ್ನು ಪಡೆದು ಒಂದು ದಿವ್ಯಕಲ್ಪದವರೆಗೆ ಆಳುತ್ತಾನೆ. ಈ ನಿನ್ನ ಮಗಳು ಅವನ ರಾಣಿಯರಲ್ಲೆಲ್ಲಾ ಗೌರವಕ್ಕೆ ಪಾತ್ರಳಾಗಿರುವಳು. ನೀನಾದರೋ ಇಂದ್ರನ ಶಾಪಕ್ಕೆ ಒಳಗಾದ ಅಪ್ಸರೆಯಾಗಿದ್ದು ಭೂಲೋಕಕ್ಕೆ ಬಂದಿರುವೆ. ನಿನ್ನ ಕೆಲಸ ಮುಗಿದ ಮೇಲೆ ಶಾಪಮುಕ್ತಳಾಗುವೆ. ಇದೆಲ್ಲವನ್ನೂ ಜ್ಞಾನಿಯಾದ ನನ್ನ ಗಂಡನು ನನಗೆ ಹೇಳಿದನು. ಆದ್ದರಿಂದ ಚಿಂತಿಸಬೇಡ. ಎಲ್ಲವೂ ಶುಭವಾಗುವುದು. ನಾನೂ ಸಹ ನಿನ್ನ ಮಗಳಿಗೋಸ್ಕರ ಸ್ವರ್ಗಭೂಮಿ ಪಾತಾಳಗಳಲ್ಲಿ ಎಲ್ಲೂ ಇಲ್ಲದಂತಹ ಒಂದು ಉದ್ಯಾನವನ್ನು ನಿರ್ಮಿಸುತ್ತೇನೆ."

೧೪೨. ಹೀಗೆ ಹೇಳಿ ಸೋಮಪ್ರಭೆಯು ದಿವ್ಯವಾದ ಉದ್ಯಾನವನ್ನು ತನ್ನ ಮಾಯೆಯಿಂದ ನಿರ್ಮಿಸಿ ಕಳಿಂಗಸೇನೆಗೆ ಹೇಳಿ ಹೊರಟುಹೋದಳು.

---

ಕಾಮಾವತಾರಸ್ಯೈಷಾ ಚ ವತ್ಸೇಶಾಲ್ಲಬ್ಧಜನ್ಮನಃ ।
ನರವಾಹನದತ್ತಸ್ಯ ಪೂರ್ವಭಾರ್ಯಾ ವಿನಿರ್ಮಿತಾ ॥ ೧೩೭

ವಿದ್ಯಾಧರಾಧಿರಾಜ್ಯಂ ಸ ದಿವ್ಯಂ ಕಲ್ಪಂ ಕರಿಷ್ಯತಿ ।
ತಸ್ಯೈಷಾನ್ಯಾವರೋಧಾನಾಂ ಮೂರ್ಧ್ನಿ ಮಾನ್ಯಾ ಭವಿಷ್ಯತಿ ॥ ೧೩೮

ತ್ವಂ ಚಾವತೀರ್ಣಾ ಭೂಲೋಕೇ ಶಕ್ರಶಾಪಚ್ಯುತಾಪ್ಸರಾಃ ।
ನಿಷ್ಪನ್ನಕಾರ್ಯಶೇಷಾ ಚ ಶಾಪಮುಕ್ತಿಮವಾಪ್ಸ್ಯಸಿ ॥ ೧೩೯

ಏತನ್ಮೇ ಸರ್ವಮಾಖ್ಯಾತಂ ಭರ್ತ್ರಾ ಜ್ಞಾನವತಾ ಸಖಿ ।
ತಸ್ಮಾಚ್ಚಿಂತಾ ನ ತೇ ಕಾರ್ಯಾ ಭಾವಿ ಸರ್ವಂ ಶುಭಂ ತವ ॥ ೧೪೦

ಅಹಂ ಚೇಹ ಕರೋಮ್ಯೇಷಾ ದಿವ್ಯಂ ತ್ವತ್ತನಯಾಕೃತೇ ।
ಉದ್ಯಾನಂ ನಾಸ್ತಿ ಪಾತಾಲೇ ನ ಭೂಮೌ ಯನ್ನ ವಾ ದಿವಿ ॥ ೧೪೧

ಇತ್ಯುಕ್ತ್ವಾ ದಿವ್ಯಮುದ್ಯಾನಂ ಸಾ ನಿರ್ಮಾಯ ಸ್ವಮಾಯಯಾ ।
ಕಲಿಂಗಸೇನಾಮಾಮಂತ್ರ್ಯ ಸೋತ್ಕಾಂ ಸೋಮಪ್ರಭಾ ಯಯೌ ॥ ೧೪೨

೧೪೩–೧೪೪. ರಾತ್ರಿ ಕಳೆದು ಬೆಳಗಾದಾಗ ಇದ್ದಕ್ಕಿದ್ದಂತೆ ಸ್ವರ್ಗದಿಂದ ನಂದನವು ಭೂಮಿಗೆ ಇಳಿದು ಬಂದಿದೆಯೇನೋ ಎಂಬಂತೆ ಜನರು ಆ ಉದ್ಯಾನವನ್ನು ನೋಡಿದರು. ಆ ವಿಷಯವನ್ನು ತಿಳಿದು ವತ್ಸರಾಜನು ಪತ್ನಿ, ಮಂತ್ರಿ ನರವಾಹನದತ್ತ ಮೊದಲಾದವರೊಡನೆ ಅಲ್ಲಿಗೆ ಬಂದನು.

೧೪೫–೧೪೬. ಆ ಉದ್ಯಾನವು ಹೂವು ಹಣ್ಣುಗಳು ಬಿಡುವ ಮರಗಳು, ನಾನಾರತ್ನಗಳಿಂದ ರಚಿತವಾದ ಸ್ತಂಭ ಮತ್ತು ಗೋಡೆಗಳು, ಸರೋವರ, ಬಂಗಾರದ ಪಕ್ಷಿಗಳು, ದಿವ್ಯವಾದ ಸುಗಂಧದಿಂದ ಕೂಡಿದ ಗಾಳಿ ಇವುಗಳಿಂದ ಕೂಡಿ ದೇವತೆಗಳ ಆದೇಶದಿಂದ ಭೂಮಿಯ ಮೇಲೆ ಇಳಿದ ಬೇರೆ ಸ್ವರ್ಗದಂತೆ ಕಾಣುತ್ತಿತ್ತು.

೧೪೭ ಅದ್ಭುತವಾದ ಆ ಉದ್ಯಾನವನ್ನು ನೋಡಿ ವತ್ಸರಾಜನು ಆತಿಥ್ಯ ಮಾಡುವುದರಲ್ಲಿ ಮಗ್ನಳಾಗಿದ್ದ ಕಳಿಂಗಸೇನೆಯನ್ನು ಉದ್ಯಾನದ ಬಗ್ಗೆ ಕೇಳಿದನು.

---

ತತೋ ನಿಶಿ ಪ್ರಭಾತಾಯಾಮಕಸ್ಮಾನ್ನಂದನಂ ದಿವಃ ।
ಭೂಮಾವಿವ ಚ್ಯುತಂ ಲೋಕೋ ದದರ್ಶೋದ್ಯಾನಮತ್ರ ತತ್ ॥ ೧೪೩
ಬುದ್ಧ್ವಾಥ ರಾಜಾ ವತ್ಸೇಶಃ ಸಭಾರ್ಯಃ ಸಚಿವೈಃ ಸಹ ।
ನರವಾಹನದತ್ತಶ್ಚ ಸಾನುಗೋಽತ್ರ ಸಮಾಯಯೌ ॥ ೧೪೪
ದದೃಶುಸ್ತೇ ತಮುದ್ಯಾನಂ ಸದಾ ಪುಷ್ಪಫಲದ್ರುಮಮ್ ।
ನಾನಾಮಣಿಮಯಸ್ತಂಭಭಿತ್ತಿಭೂಭಾಗವಾಪಿಕಮ್ ॥ ೧೪೫
ಸುವರ್ಣವರ್ಣವಿಹಗಂ ದಿವ್ಯಸೌರಭಮಾರುತಮ್ ।
ದೇವಾದೇಶಾವತೀರ್ಣಂ ತತ್ಸ್ವರ್ಗಾಂತರಮಿವ ಕ್ಷಿತೌ ॥ ೧೪೬
ದೃಷ್ಟ್ವಾ ತದದ್ಭುತಂ ರಾಜಾ ಕಿಮೇತದಿತಿ ಪೃಷ್ಟವಾನ್ ।
ಕಲಿಂಗಸೇನಾಮಾತಿಥ್ಯವ್ಯಗ್ರಾಂ ವತ್ಸೇಶ್ವರಸ್ತದಾ ॥ ೧೪೭

೧೪೮–೧೫೦. ಅವಳು ಹೇಳಿದಳು. "ವಿಶ್ವಕರ್ಮನ ಅವತಾರವಾದ "ಮಯ' ಎಂಬ ಮಹಾ ಅಸುರನು ಇದ್ದಾನೆ. ಅವನು ಯುಧಿಷ್ಠಿರನಿಗೂ ಇಂದ್ರನಿಗೂ ಮನೋಹರವಾದ ನಗರವನ್ನು ನಿರ್ಮಿಸಿಕೊಟ್ಟಿದ್ದನು. ಅವನ ಮಗಳು ಸೋಮಪ್ರಭಾ ಎಂಬುವಳು ನನ್ನ ಗೆಳತಿ. ಅವಳು ಕಳೆದ ರಾತ್ರಿ ನನ್ನ ಹತ್ತಿರ ಬಂದು ಪ್ರೀತಿಯಿಂದ ನನ್ನ ಮಗಳಿಗೋಸ್ಕರ ದಿವ್ಯವಾದ ಉದ್ಯಾನವನ್ನು ತನ್ನ ಮಾಯೆಯಿಂದ ನಿರ್ಮಿಸಿದಳು.'

೧೫೧. ಹೀಗೆ ಹೇಳಿ ತನ್ನ ಹಿಂದಿನ ಮತ್ತು ಮುಂದಿನ ಚರಿತ್ರೆಯನ್ನು ಅವಳೇ ತನಗೆ ಹೇಳಿದ್ದೆಂದು ಎಲ್ಲರಿಗೂ ವಿವರಿಸಿದಳು.

೧೫೨. ಆಗ ಕಳಿಂಗಸೇನೆ ಹೇಳಿದ್ದೆಲ್ಲವೂ ನಿಜವೆಂದು ತಿಳಿದು ಸಂಶಯ ನಿವಾರಣೆಗೊಂಡ ಅವರೆಲ್ಲರೂ ಪರಮಾನಂದಗೊಂಡರು.

೧೫೩. ಕಳಿಂಗ ಸೇನೆಯ ಆತಿಥ್ಯವನ್ನು ಅನುಭವಿಸುತ್ತಾ ವತ್ಸರಾಜನು ಪತ್ನಿ, ಪುತ್ರ ಮೊದಲಾದವರೊಡನೆ ಉದ್ಯಾನದಲ್ಲಿ ಇಡೀ ದಿವಸವನ್ನು ಕಳೆದನು.

---

ಸಾ ಪ್ರತ್ಯುವಾಚ ಸರ್ವೇಷು ಶೃಣ್ವತ್ಸು ನೃಪತಿಂ ಚ ತಮ್ ।
ವಿಶ್ವಕರ್ಮಾವತಾರೋಽಸ್ತಿ ಮಯೋ ನಾಮ ಮಹಾಸುರಃ ॥ ೧೪೮
ಯುಧಿಷ್ಠಿರಸ್ಯ ಯಶ್ಚಕ್ರೇ ಪುರಂ ರಮ್ಯಂ ಚ ವಜ್ರಿಣಃ ।
ತಸ್ಯ ಸೋಮಪ್ರಭಾ ನಾಮ ತನಯಾಸ್ತಿ ಸಖೀ ಮಮ ॥ ೧೪೯
ತಯಾ ರಾತ್ರಾವಿಹಾಗತ್ಯ ಮತ್ಸಮೀಪಂ ಸ್ವಮಾಯಯಾ ।
ಪ್ರೀತ್ಯಾ ಕೃತಮಿದಂ ದಿವ್ಯಮುದ್ಯಾನಂ ಮತ್ಸುತಾಕೃತೇ ॥ ೧೫೦
ಇತ್ಯುಕ್ತ್ವಾ ಯಚ್ಚ ಸಖ್ಯಾಸ್ಯಾ ಭೂತಂ ಭಾವ್ಯುದಿತಂ ತಯಾ ।
ತತ್ತಯೈವೋಕ್ತಮಿತ್ಯುಕ್ತ್ವಾ ತದಾ ಸರ್ವಂ ಶಶಂಸ ಸಾ ॥ ೧೫೧
ತತಃ ಕಲಿಂಗಸೇನೋಕ್ತಿಂ ಸಸಂವಾದಾಮವೇಕ್ಷ್ಯ ತಾಮ್ ।
ನಿರಸ್ತಸಂಶಯಾಃ ಸರ್ವೇ ತೋಷಂ ತತ್ರಾತುಲಂ ಯಯುಃ ॥ ೧೫೨
ಕಲಿಂಗಸೇನಾತಿಥ್ಯೇನ ನಿನಾಯ ದಿವಸಂ ಚ ತಮ್ ।
ಉದ್ಯಾನೇಽತ್ರೈವ ವತ್ಸೇಶೋ ಭಾರ್ಯಾಪುತ್ರಾದಿಭಿಃ ಸಹ ॥ ೧೫೩

೧೫೪–೧೫೬. ಮಾರನೆಯ ದಿನ ರಾಜನು ದೇವತಾದರ್ಶನಕ್ಕೆಂದು ದೇವಮಂದಿರಕ್ಕೆ ಹೋದಾಗ ಒಳ್ಳೆಯ ವಸ್ತ್ರಗಳು ಮತ್ತು ಆಭರಣಗಳನ್ನು ಧರಿಸಿದ್ದ ಅನೇಕ ಜನ ಸ್ತ್ರೀಯರು ಅಲ್ಲಿದ್ದುದನ್ನು ನೋಡಿ "ನೀವು ಯಾರು' ಎಂದು ಕೇಳಿದನು. ಆಗ ಅವರು "ನಾವು ರಾಜನ ಮಗನಿಗೋಸ್ಕರ ಬಂದಿರುವ ವಿದ್ಯೆಗಳು ಮತ್ತು ಕಲೆಗಳು. ನಾವು ಅವನನ್ನು ಪ್ರವೇಶಿಸುತ್ತೇವೆ' ಎಂದು ಹೇಳಿ ಅದೃಶ್ಯರಾದರು. ಆಶ್ಚರ್ಯಗೊಂಡ ರಾಜನೂ ಸಹ ಒಳಗೆ ಹೋದನು.

೧೫೭. ಅಲ್ಲಿ ವಾಸವದತ್ತೆಗೂ ಮಂತ್ರಿಗಳಿಗೂ ಈ ವಿಷಯವನ್ನು ತಿಳಿಸಿದಾಗ ಅವರೂ ಅದನ್ನು ದೇವರ ಅನುಗ್ರಹ ಎಂದು ಹೇಳಿ ಸಂತೋಷಪಟ್ಟರು.

೧೫೮–೧೫೯. ರಾಜನ ಆದೇಶದಂತೆ ವಾಸವದತ್ತೆಯು ವೀಣೆಯನ್ನು ನುಡಿಸುತ್ತಿದ್ದಾಗ ನರವಾಹನದತ್ತನು ಅಲ್ಲಿಗೆ ಬಂದು ವಿನಯದಿಂದ ತಾಯಿಯನ್ನು ಕುರಿತು "ವೀಣೆಯಲ್ಲಿ ಸ್ವರಸ್ಥಾನ ತಪ್ಪಾಯಿತಲ್ಲವೆ' ಎಂದು ಹೇಳಿದನು.

೧೬೦. "ಹಾಗಾದರೆ ಇದನ್ನು ತೆಗೆದುಕೊಂಡು ನೀನು ನುಡಿಸು' ಎಂದು ರಾಜನು ಹೇಳಿದಾಗ ನರವಾಹನದತ್ತನು ಗಂಧರ್ವರಿಗೂ ಆಶ್ಚರ್ಯವಾಗುವ ರೀತಿಯಲ್ಲಿ ನುಡಿಸಿದನು.

---

ಅನ್ಯೇದ್ಯುರ್ನಿರ್ಗತೋ ದ್ರಷ್ಟುಂ ದೇವಂ ದೇವಕುಲೇ ಚ ಸಃ ।
ದದರ್ಶ ನೃಪತಿರ್ಬಹ್ವೀಃ ಸುವಸ್ತ್ರಾಭರಣಾಃ ಸ್ತ್ರಿಯಃ ॥ ೧೫೪
ಕಾ ಯೂಯಮಿತಿ ಪೃಷ್ಟಾಶ್ಚ ತೇನ ತಾಸ್ತಂ ಬಭಾಷಿರೇ ।
ವಯಂ ವಿದ್ಯಾಃ ಕಲಾಶ್ಚೈತಾಃ ತ್ವತ್ಪುತ್ರಾರ್ಥಮಿಹಾಗತಾಃ ॥ ೧೫೫
ಗತ್ವಾ ವಿಶಾಮಸ್ತಸ್ಯಾಂತರಿತ್ಯುಕ್ತ್ವಾ ತಾಸ್ತಿರೋಽಭವನ್ ।
ಸವಿಸ್ಮಯಃ ಸ ರಾಜಾಪಿ ವತ್ಸೇಶೋಽಭ್ಯಂತರಂ ಯಯೌ ॥ ೧೫೬
ತತ್ರ ವಾಸವದತ್ತಾಯೈ ದೇವ್ಯೈ ಮಂತ್ರಿಗಣಾಯ ಚ ।
ತಚ್ಛಶಂಸಾಭ್ಯನಂದಂಸ್ತೇ ದೇವತಾನುಗ್ರಂ ಚ ತಮ್ ॥ ೧೫೭
ತತೋ ರಾಜನಿದೇಶೇನ ವೀಣಾ ವಾಸವದತ್ತಯಾ ।
ನರವಾಹನದತ್ತೇಽತ್ರ ಪ್ರವಿಷ್ಟೇ ಜಗೃಹೇ ಕ್ಷಣಾತ್ ॥ ೧೫೮
ವಾದಯಂತೀಂ ತತಸ್ತಾಂ ಚ ಮಾತರಂ ವಿನಯೇನ ಸಃ ।
ರಾಜಪುತ್ರೋಽಬ್ರವೀದ್ವೀಣಾ ಚ್ಯುತಾ ಸ್ಥಾನಾದಸಾವಿತಿ ॥ ೧೫೯
ತ್ವಂ ವಾದಯ ಗೃಹಾಣೈತಾಮಿತಿ ಪಿತ್ರೇರಿತೇಽಥ ಸಃ ।
ವೀಣಾಮವಾದಯತ್ ಕುರ್ವನ್ ಗಂಧರ್ವಾನಪಿ ವಿಸ್ಮಿತಾನ್ ॥ ೧೬೦

೧೬೧-೧೬೨. ಹೀಗೆ ಎಲ್ಲ ವಿದ್ಯೆಗಳೂ ಕಲೆಗಳೂ ಅವನಿಗೆ ಒಲಿದಿರುವುದನ್ನು ರಾಜನು ಪರೀಕ್ಷಿಸಿ ತಿಳಿದುಕೊಂಡನು. ಮಗನು ಗುಣವಂತನಾಗಿರುವುದನ್ನು ಕಂಡು ವತ್ಸರಾಜನು ಕಳಿಂಗಸೇನೆಯ ಮಗಳಾದ ಮದನಮಂಚುಕೆಗೆ ನೃತ್ಯವನ್ನು ಕಲಿಸಿದನು.

೧೬೩. ಚಂದ್ರನು ಕಲಾಪೂರ್ಣನಾಗುತ್ತಿದ್ದಂತೆ ಸಮುದ್ರವು ಉಕ್ಕುವಂತೆ, ಮದನಮಂಚುಕೆಯ ನೃತ್ಯಕಲೆಯು ಸಂಪೂರ್ಣವಾದಾಗ ನರವಾಹನದತ್ತನು ಸಂತಸದಿಂದ ಉಕ್ಕಿದನು.

೧೬೪. ಅವಳು ಹಾಡುವುದನ್ನೂ, ನರ್ತಿಸುವುದನ್ನೂ ಅಂಗಾಭಿನಯದಿಂದ ಕಾಮನ ಆಜ್ಞೆಯನ್ನು ಓದುತ್ತಿರುವವಳಂತಿದ್ದ ಅವಳನ್ನು ನೋಡಿ ಸಂತೋಷಪಟ್ಟನು.

೧೬೫-೧೬೭ ಅವಳೂ ಒಂದು ಕ್ಷಣಕಾಲ ಅಮೃತಮಯವಾದ ಅವನನ್ನು ನೋಡದೇ ಇದ್ದರೆ ಉಷಃ ಕಾಲದ ಕನ್ನೈದಿಲೆಯಂತೆ ಕಣ್ಣೀರು ಸುರಿಸುವಳು. ನರವಾಹನದತ್ತನೂ ಸಹ ಅವಳ ಮುಖವು ಸತತವಾಗಿ ತನಗೆ ಕಾಣಿಸದಿದ್ದರೆ ಉದ್ಯಾನಕ್ಕೆ ಹೋಗುತ್ತಿದ್ದನು. ಅಲ್ಲಿ ಕಳಿಂಗಸೇನೆಯು ಮದನ ಮಂಚುಕೆಯನ್ನು ಹತ್ತಿರ ಕರೆದುಕೊಂಡು ಬಂದು ಅವನನ್ನು ಸಂತೋಷಪಡಿಸುತ್ತಿದ್ದಳು.

---

ಏವಂ ಸರ್ವಾಸು ವಿದ್ಯಾಸು ಕಲಾಸು ಚ ಪರೀಕ್ಷಿತಃ ।
ಪಿತ್ರಾ ಯಾವದ್ವೃತಸ್ತಾಭಿಃ ಸ್ವಯಂ ಸರ್ವಂ ವಿವೇದ ಸಃ ॥ ೧೬೧
ವೀಕ್ಷ್ಯ ತಂ ಸಗುಣಂ ಪುತ್ರಂ ವತ್ಸೇಶಸ್ತಾಮಶಿಕ್ಷಯತ್ ।
ಕಲಿಂಗಸೇನಾತನಯಾಂ ನೃತ್ತಂ ಮದನಮಂಚುಕಾಮ್ ॥ ೧೬೨
ಯಥಾ ಯಥಾ ಪೂರ್ಣಕಲಾ ಸಾಭೂತ್ತನುರಿವೈಂದವೀ ।
ನರವಾಹನದತ್ತಾಬ್ಧಿಃ ಚುಕ್ಷುಭೇ ಸ ತಥಾ ತಥಾ ॥ ೧೬೩
ಅರಂಸ್ತ ತಾಂ ಚ ಗಾಯಂತೀಂ ನೃತ್ಯಂತೀಂ ಚ ವಿಲೋಕಯನ್ ।
ಪಠಂತೀಮಿವ ಕಾಮಾಜ್ಞಾಮಂಗಾದ್ಯಭಿನಯೈರ್ವೃತಾಮ್ ॥ ೧೬೪
ಸಾಪಿ ಕ್ಷಣಮಪಶ್ಯಂತೀ ತಮುದಶ್ರುಃ ಸುಧಾಮಯಮ್ ।
ಕಾಂತಮಾಸೀದುಷಃಕಾಲೇ ಜಲಾರ್ದ್ರೇವ ಕುಮುದ್ವತೀ ॥ ೧೬೫
ಸತತಂ ಚಾಸಹಃ ಸ್ಥಾತುಂ ತನ್ಮುಖಾಲೋಕನಂ ವಿನಾ ।
ನರವಾಹನದತ್ತೋಽಸೌ ತತ್ತದುದ್ಯಾನಮಾಯಯೌ ॥ ೧೬೬
ತತ್ರ ಪಾರ್ಶ್ವಂ ತಯಾನೀಯ ಸುತಾಂ ಮದನಮಂಚುಕಾಮ್ ।
ಕಲಿಂಗಸೇನಯಾ ಪ್ರೀತ್ಯಾ ರಜ್ಯಮಾನಃ ಸ ತಸ್ಥಿವಾನ್ ॥ ೧೬೭

೧೬೮–೧೭೨. ಅವನ ಮನಸ್ಸನ್ನು ಅರಿತಿದ್ದ ಗೋಮುಖನು ರಾಜಕುಮಾರನು ಬಹಳ ಹೊತ್ತು ಅಲ್ಲೇ ಇರುವಂತೆ ಮಾಡಲು ಕಳಿಂಗಸೇನೆಗೆ ಒಂದೊಂದೇ ಕಥೆಯನ್ನು ಹೇಳುತ್ತಿದ್ದನು. ಅದರಿಂದ ರಾಜಕುಮಾರನು ಸಂತೋಷಪಟ್ಟನು. ರಾಜನ ಹೃದಯವನ್ನು ಗೆಲ್ಲುವುದೇ ಪ್ರಭುವಿಗೆ ಮಾಡುವ ಶ್ರೇಷ್ಠವಾದ ಸೇವೆ. ಮದನಮಂಚುಕೆಯು ನೃತ್ಯದಲ್ಲಿ ನಿಪುಣಳಾದಳು. ನರವಾಹನದತ್ತನು ಉದ್ಯಾನದಲ್ಲಿರುವ ಸಂಗೀತಶಾಲೆಯಲ್ಲಿ ಗಂಧರ್ವರನ್ನೂ ನಾಚಿಸುವಂತೆ ಗಾಯನ ಮಾಡುತ್ತಿದ್ದನು. ಅವನ ಪ್ರಿಯತಮೆಯು ನರ್ತನ ಮಾಡುತ್ತಿದ್ದಾಗ ವಾದ್ಯಗಳನ್ನು ನುಡಿಸುತ್ತಿದ್ದನು. ಆನೆ, ಕುದುರೆ, ಅಸ್ತ್ರ ಶಸ್ತ್ರ ಚಿತ್ರ ಶಿಲ್ಪ ಮೊದಲಾದ ವಿದ್ಯೆಗಳಲ್ಲಿ ಪರಿಣತನಾಗಿ ವಿವಿಧ ದೇಶಗಳಿಂದ ಬಂದಿದ್ದ ಪಂಡಿತರನ್ನು ಸೋಲಿಸಿದನು.

೧೭೩. ಹೀಗೆ ವಿದ್ಯೆಗಳಿಂದ ಸ್ವತಃ ವರಿಸಲ್ಪಟ್ಟು ವಿಹರಿಸುತ್ತಿರುವಂತೆಯೇ ಅವನ ಬಾಲ್ಯಾವಸ್ಥೆಯು ಕಳೆಯಿತು.

೧೭೪. ಒಮ್ಮೆ ರಾಜಕುಮಾರನು ತನ್ನ ಗೆಳೆಯರು ಮತ್ತು ಮಂತ್ರಿಗಳೊಡನೆ ಪ್ರವಾಸಕ್ಕೆ ಹೋಗುತ್ತಾ ನಾಗವನ ಎಂಬ ಉದ್ಯಾನಕ್ಕೆ ಹೋದನು.

---

ಗೋಮುಖಶ್ಚಾಸ್ಯ ಚಿತ್ತಜ್ಞಃ ಸ್ವಾಮಿನೋಽತ್ರ ಚಿರಸ್ಥಿತಿಮ್ ।
ಇಚ್ಛನ್ ಕಲಿಂಗಸೇನಾಯೈ ತಾಂ ತಾಮಕಥಯತ್ ಕಥಾಮ್ ॥ ೧೬೮
ಚಿತ್ತಗ್ರಹೇಣ ತೇನಾಸ್ಯಾ ರಾಜಪುತ್ರಸ್ತುತೋಷ ಸಃ ।
ಹೃದಯಾನುಪ್ರವೇಶೋ ಹಿ ಪ್ರಭೋಃ ಸಂವಹನಂ ಪರಮ್ ॥ ೧೬೯
ನೃತ್ತಾದಿಯೋಗ್ಯಾಂ ಕುರುತೇ ತಸ್ಮಿನ್ ಮದನಮಂಚುಕಾಮ್ ।
ತತ್ರ ಸ್ವಯಂ ಚ ಸಂಗೀತವೇಶ್ಮನ್ಯುದ್ಯಾನವರ್ತಿನಿ ॥ ೧೭೦
ನರವಾಹನದತ್ತಃ ಸಃ ಕ್ಷೇಪಯನ್ ವರಚಾರಣಾನ್ ।
ತಸ್ಯಾಂ ಪ್ರಿಯಾಯಾಂ ನೃತ್ಯಂತ್ಯಾಂ ಸರ್ವಾತೋದ್ಯಾನ್ಯವಾದಯತ್ ॥ ೧೭೧
ಜಿಗಾಯ ಚಾಗತಾನ್ ದಿಗ್ಭ್ಯೋ ವಿವಿಧಾನ್ ಪಂಡಿತಾಂಸ್ತಥಾ ।
ಗಜಾಶ್ವರಥಶಾಸ್ತ್ರಚಿತ್ರಪುಸ್ತಾದಿಕೋವಿದಃ ॥ ೧೭೨
ಏವಂ ವಿಹರತೋ ವಿದ್ಯಾಸ್ವಯಂವರವೃತಸ್ಯ ತೇ ।
ನರವಾಹನದತ್ತಸ್ಯ ಶೈಶವೇ ವಾಸರಾ ಯಯುಃ ॥ ೧೭೩
ಏಕದಾ ಚಾತ್ರ ಯಾತ್ರಾಯಾಮುದ್ಯಾನಂ ಸ ಪ್ರಿಯಾಸಖಃ ।
ಯಯೌ ನಾಗವನಂ ನಾಮ ರಾಜಪುತ್ರಃ ಸಮಂತ್ರಿಕಃ ॥ ೧೭೪

೧೭೫-೧೭೬. ಅಲ್ಲಿ ಒಬ್ಬ ವ್ಯಾಪಾರಿಯ ಹೆಂಡತಿ ಗೋಮುಖನನ್ನು ಮೋಹಿಸಿದಳು. ಅವನು ನಿರಾಕರಿಸಿದಾಗ ಅವಳು ವಿಷಪೂರಿತ ಪಾನಕವನ್ನು ಕೊಟ್ಟು ಅವನನ್ನು ಸಾಯಿಸಲು ಇಚ್ಛಿಸಿದಳು. ಅವಳ ಗೆಳತಿಯಿಂದ ಅದನ್ನು ತಿಳಿದು ಗೋಮುಖನು ಪಾನಕವನ್ನು ಕುಡಿಯಲಿಲ್ಲ. ಅಲ್ಲದೆ ಅವಳನ್ನು ಹೀಗೆ ನಿಂದಿಸಿದನು.

೧೭೭-೧೭೯. "ಬ್ರಹ್ಮನು ಹಿಂದೆ ಸಾಹಸವನ್ನು ಸೃಷ್ಟಿಮಾಡಿ ಅನಂತರ ಸ್ತ್ರೀಸೃಷ್ಟಿ ಮಾಡಿದನು. ಇವರು ಮಾಡಲು ಅಸಾಧ್ಯವಾದುದೆಂಬುದೇ ಇಲ್ಲ. ನಿಜವಾಗಿಯೂ ಅಮೃತ ಮತ್ತು ವಿಷದೊಡನೆ ಹೆಣ್ಣಿನ ಸೃಷ್ಟಿಯಾಗಿದೆ. ಅವಳು ಅನುರಕ್ತಳಾದರೆ ಅಮೃತ. ಶತ್ರುವಾದರೆ ವಿಷವೇ. ಸುಂದರವಾದ ಮುಖವು ಅದರ ಹಿಂದೆ ಪಾಪಕಾರ್ಯವನ್ನು ಅಡಗಿಸಿ ಇಟ್ಟುಕೊಂಡಿರುವುದು ಯಾರಿಗೆ ತಾನೇ ಗೊತ್ತಾಗುತ್ತದೆ ? ಕೆಟ್ಟ ಹೆಣ್ಣಾದರೋ ಮೊಸಳೆ ಇರುವ ಕಮಲದ ಸರೋವರದಂತೆ.

೧೮೦-೧೮೧. ಒಳ್ಳೆಯ ಗುಣಗಳನ್ನು ಪ್ರೋತ್ಸಾಹಿಸುವ ಒಬ್ಬಳು ಸ್ವರ್ಗದಿಂದ ಬೀಳುತ್ತಾಳೆ. ಮತ್ತೊಬ್ಬಳು ಗಂಡನ ಪ್ರಶಂಸೆಯನ್ನು ಸಹಿಸಲಾರಳು. ಒಳ್ಳೆಯ ಹೆಂಡತಿಯಾದರೋ ಸೂರ್ಯನ ಶುದ್ಧವಾದ ಕಾಂತಿಯಂತೆ ಇರುತ್ತಾಳೆ. ಪಾಪಿಹೆಣ್ಣು ಪರಪುರುಷನಲ್ಲಿ ಆಸಕ್ತಳಾಗಿದ್ದು ಗಂಡನಲ್ಲಿ ಆಸೆಯನ್ನು ಬಿಟ್ಟು ವಿಷಪೂರಿತವಾದ ಹಾವಿನಂತೆ ತನ್ನ ಗಂಡನನ್ನು ಕೊಂದು ಹಾಕುತ್ತಾಳೆ.

---

ತತ್ರಾಭಿಲಾಷಿಣೀ ಕಾಚಿತ್ ವಣಿಗ್ಭಾರ್ಯಾ ನಿರಾಕೃತಾ ।
ಇಯೇಷ ಗೋಮುಖಂ ಹಂತುಂ ಸವಿಷಾಹೃತಪಾನಕಾ ॥ ೧೭೫
ತದ್ವಿವೇದ ಚ ತತ್ಸಖ್ಯಾ ಮುಖಾದತ್ರ ಸ ಗೋಮುಖಃ ।
ನಾದದೇ ಪಾನಕಂ ತಚ್ಚ ಸ್ತ್ರಿಯ ಏವಂ ನಿನಿಂದ ಚ ॥ ೧೭೬
ಅಹೋ ಧಾತ್ರಾ ಪುರಾ ಸೃಷ್ಟಂ ಸಾಹಸಂ ತದನು ಸ್ತ್ರಿಯಃ ।
ನೈತಾಸಾಂ ದುಷ್ಕರಂ ಕಿಂಚಿತ್ ನಿಸರ್ಗಾದಿಹ ವಿದ್ಯತೇ ॥ ೧೭೭
ನೂನಂ ಸ್ತ್ರೀ ನಾಮ ಸೃಷ್ಟೇಯಮಮೃತೇನ ವಿಷೇಣ ಚ ।
ಅನುರಕ್ತಾಮೃತಂ ಸಾ ಹಿ ವಿರಕ್ತಾ ವಿಷಮೇವ ಚ ॥ ೧೭೮
ಜ್ಞಾಯತೇ ಕಾಂತವದನಾ ಕೇನ ಪ್ರಚ್ಛನ್ನಪಾತಕಾ ।
ಕುಸ್ತ್ರೀ ಪ್ರಫುಲ್ಲಕಮಲಾ ಗೂಢನಕ್ರೇವ ಪದ್ಮಿನೀ ॥ ೧೭೯
ದಿವಃ ಪತತಿ ಕಾಚಿತ್ತು ಗುಣಚಕ್ರಪ್ರಚೋದಿನೀ ।
ಭರ್ತೃಶ್ಲಾಘಾಸಹಾ ಸುಸ್ತ್ರೀ ಪ್ರಭಾ ಭಾನೋರಿವಾಮಲಾ ॥ ೧೮೦
ಹಂತ್ಯೇವಾಶು ಗೃಹೀತಾನ್ಯಾ ಪರರಕ್ತಾ ಗತಸ್ಪೃಹಾ ।
ಪಾಪಾ ವಿರಾಗವಿಷಭೃದ್ಭರ್ತಾರಂ ಭುಜಗೀವ ಸಾ ॥ ೧೮೧

೧೮೨–೧೮೬. ಒಂದು ಹಳ್ಳಿಯಲ್ಲಿ ಶತ್ರುಘ್ನ ಎಂಬುವನಿದ್ದನು. ಅವನ ಹೆಂಡತಿಯು ವ್ಯಭಿಚಾರಿಣಿಯಾಗಿದ್ದಳು. ಅವನು ಒಂದು ಸಂಜೆ ತನ್ನ ಪತ್ನಿಯು ನಡತೆಗೆಟ್ಟವನ ಜೊತೆ ಇದ್ದುದನ್ನು ಕಂಡನು. ತನ್ನ ಮನೆಯಲ್ಲೇ ಇದ್ದ ಅವನನ್ನು ಖಡ್ಗದಿಂದ ಹೊಡೆದು ಸಾಯಿಸಿದನು. ಹೆಂಡತಿಯನ್ನು ಮನೆಯಲ್ಲೇ ತಡೆದು ರಾತ್ರಿ ಆಗುವ ತನಕ ಕಾಯುತ್ತಿದ್ದನು. ಅಷ್ಟು ಹೊತ್ತಿಗೆ ಒಬ್ಬ ಯಾತ್ರಿಕನು ವಾಸ ಮಾಡಲು ಜಾಗವನ್ನು ಕೇಳಿ ಅವನ ಹತ್ತಿರ ಬಂದನು. ಅವನಿಗೆ ಆಶ್ರಯವನ್ನು ಕೊಟ್ಟು ಜಾಣತನದಿಂದ ಅವನನ್ನು ಜೊತೆಯಲ್ಲಿ ಕರೆದುಕೊಂಡು ನಡತೆಗೆಟ್ಟವನ ಶವವನ್ನು ತೆಗೆದುಕೊಂಡು ರಾತ್ರಿಯಲ್ಲಿ ಕಾಡಿಗೆ ಹೋದನು. ಅಲ್ಲಿ ಒಂದು ಪಾಳುಬಾವಿಗೆ ಹೆಣವನ್ನು ಎಸೆಯುತ್ತಿದ್ದಂತೆಯೇ ಹಿಂದಿನಿಂದ ಬಂದ ಅವನ ಹೆಂಡತಿಯು ಗಂಡನನ್ನೂ ಅದೇ ಬಾವಿಗೆ ತಳ್ಳಿದಳು.

೧೮೭. ಹೀಗೆ ಕೆಟ್ಟ ಹೆಂಗಸು ಯಾವ ಸಾಹಸವನ್ನು ತಾನೇ ಮಾಡುವುದಿಲ್ಲ ?' ಎಂದು ಇನ್ನೂ ಚಿಕ್ಕವನಾದ ಗೋಮುಖನೂ ಸಹ ಸ್ತ್ರೀಯರ ನಡವಳಿಕೆಯನ್ನು ಟೀಕಿಸಿದನು.

೧೮೮. ಆಮೇಲೆ ಆ ನಾಗವನದಲ್ಲಿ ನಾಗಗಳನ್ನು ಸ್ವತಃ ಪೂಜಿಸಿದ ನರವಾಹನದತ್ತನು ತನ್ನ ಜೊತೆಗಾರರೊಡನೆ ಮನೆಗೆ ಹಿಂತಿರುಗಿದನು.

---

ತಥಾ ಹಿ ಕುತ್ರಚಿತ್ ಗ್ರಾಮೇ ಶತ್ರುಘ್ನ ಇತಿ ಕೋಽಪ್ಯಭೂತ್ ।
ಪುರುಷಸ್ತಸ್ಯ ಭಾರ್ಯಾ ಚ ಬಭೂವ ವ್ಯಭಿಚಾರಿಣೀ ॥ ೧೮೨
ಸ ದದರ್ಶೈಕದಾ ಸಾಯಂ ಭಾರ್ಯಾಂ ತಾಂ ಜಾರಸಂಗತಾಮ್ ।
ಜಘಾನ ತಂ ಚ ತಜ್ಜಾರಂ ಖಡ್ಗೇನಾಂತರ್ಗೃಹಸ್ಥಿತಮ್ ॥ ೧೮೩
ರಾತ್ರ್ಯಪೇಕ್ಷೀ ಚ ತಸ್ಥೌ ಸ ದ್ವಾರಿ ಭಾರ್ಯಾಂ ನಿರುಧ್ಯ ತಾಮ್ ।
ತತ್ಕಾಲಂ ಚ ನಿವಾಸಾರ್ಥೀ ತಮತ್ರ ಪಥಿಕೋಽಭ್ಯಗಾತ್ ॥ ೧೮೪
ದತ್ವಾ ತಸ್ಯಾಶ್ರಯಂ ಯುಕ್ತ್ಯಾ ತೇನೈವ ಸಹ ತಂ ಹತಮ್ ।
ಪಾರದಾರಿಕಮಾದಾಯ ರಾತ್ರೌ ತತ್ರಾಟವೀಂ ಯಯೌ ॥ ೧೮೫
ತತ್ರಾಂಧಕೂಪೇ ಯಾವತ್ಸ ಶವಂ ಕ್ಷಿಪತಿ ತಂ ತಯಾ ।
ತಾವದಾಗತಯಾ ಪಶ್ಚಾತ್ ಕ್ಷಿಪ್ತಃ ಸೋಽಪ್ಯತ್ರ ಭಾರ್ಯಯಾ ॥ ೧೮೬
ಏವಂ ಕುಯೋಷಿತ್ ಕುರುತೇ ಕಿಂ ಕಿಂ ನಾಮ ನ ಸಾಹಸಮ್ ।
ಇತಿ ಸ್ತ್ರೀಚರಿತಂ ಬಾಲೋಽಪ್ಯನಿಂದತ್ ಸೋಽತ್ರ ಗೋಮುಖಃ ॥ ೧೮೭
ತತೋ ನಾಗವನೇ ತತ್ರ ನಾಗಾನಭ್ಯರ್ಚ್ಯ ಸ ಸ್ವಯಮ್ ।
ನರವಾಹನದತ್ತೋಽಗಾತ್ ಸ್ವಾವಾಸಂ ಸಪರಿಚ್ಛದಃ ॥ ೧೮೮

೧೪೯. ಒಂದು ದಿನ ರಾಜಕುಮಾರನು ರಾಜನೀತಿಯನ್ನು ತಿಳಿದಿದ್ದರೂ ಮತ್ತಷ್ಟು ತಿಳಿಯಲು ಬಯಸಿ ಗೋಮುಖ ಮೊದಲಾದ ಸಚಿವರನ್ನು ಪ್ರಶ್ನಿಸಿದನು.

೧೫೦. "ನೀನು ಸರ್ವಜ್ಞನು. ಆದರೂ ನೀನು ಕೇಳಿರುವುದರಿಂದ ಹೇಳುತ್ತೇವೆ' ಎನ್ನುತ್ತಾ ಅವರು ಸಾರಾಂಶವನ್ನು ಹೀಗೆ ತಿಳಿಸಿದರು.

೧೫೧–೧೫೨. ರಾಜನು ಮೊದಲಿಗೆ ಇಂದ್ರಿಯಗಳೆಂಬ ಕುದುರೆಗಳನ್ನು ವಶಮಾಡಿಕೊಂಡು ಅವುಗಳ ಮೇಲೆ ಕುಳಿತು ಅಂತರಂಗದ ಶತ್ರುಗಳಾದ ಕಾಮಕ್ರೋಧಾದಿಗಳನ್ನು ಗೆದ್ದು ಹೊರಗಿನ ಶತ್ರುಗಳನ್ನು ಗೆಲ್ಲುವುದಕ್ಕಾಗಿ ಮೊದಲು ತನ್ನನ್ನು ಗೆಲ್ಲಬೇಕು. ತನ್ನನ್ನೇ ವಶಮಾಡಿಕೊಳ್ಳದೆ ಪರವಶನಾಗಿರುವವನು ಶತ್ರುಗಳನ್ನು ಹೇಗೆ ತಾನೆ ವಶಪಡಿಸಿಕೊಂಡಾನು ?

೧೫೩–೧೫೪. ಅನಂತರ ನೀತಿಯ ಅಂತಃಸಾರವನ್ನು ಚೆನ್ನಾಗಿ ಅರಿತ ರಾಜನು ಜಾನಪದರ ಸ್ವಭಾವ ಮುಂತಾದುವುಗಳನ್ನು ತಿಳಿದಿರುವವರನ್ನು ಮಂತ್ರಿಗಳನ್ನಾಗಿ ನಿಯೋಜಿಸಬೇಕು. ಅಥರ್ವವನ್ನು ತಿಳಿದ ದಕ್ಷನಾದ ತಪೋನಿಷ್ಠನಾದವನನ್ನು ಪುರೋಹಿತನನ್ನಾಗಿ ನೇಮಿಸಬೇಕು. ಭಯದಲ್ಲಿ, ಧರ್ಮಾರ್ಥಕಾಮಗಳಲ್ಲಿ ಚೆನ್ನಾಗಿ ಪರೀಕ್ಷಿಸಿ ಯೋಗ್ಯರಾದವರನ್ನು ಮಂತ್ರಿಗಳನ್ನಾಗಿ ಮಾಡಿ ಅಂತರಂಗವನ್ನು ತಿಳಿದು ಕರ್ತವ್ಯಗಳನ್ನು ನಿಯೋಜಿಸಬೇಕು.

೧೫೫. ತಮ್ಮ ತಮ್ಮ ಕೆಲಸಗಳಲ್ಲಿ ಜಂಬ ಕೊಚ್ಚಿಕೊಳ್ಳುವ ಅಂತಹ ಜನರು ನುಡಿಯುವ ಸತ್ಯವು ದ್ವೇಷದಿಂದ ಕೂಡಿದೆಯೇ ಮತ್ತು ಸ್ನೇಹದಿಂದ ಆಡಿದ ಮಾತು ಸ್ವಾರ್ಥದಿಂದ ಕೂಡಿದೆಯೇ ಎಂದು ಪರೀಕ್ಷಿಸಬೇಕು.

---

ತತ್ರ ಜಿಜ್ಞಾಸುರನ್ಯೇದ್ಯುಃ ಸಚಿವಾನ್ ಗೋಮುಖಾದಿಕಾನ್ ।
ಜಾನನ್ನಪಿ ಸ ಪಪ್ರಚ್ಛ ರಾಜನೀತೇಃ ಸಮುಚ್ಚಯಮ್ ॥ ೧೪೯
ಸರ್ವಜ್ಞಸ್ತ್ವಂ ತಥಾಪ್ಯೇತತ್ ಬ್ರೂಮಃ ಪೃಷ್ಟಾ ವಯಂ ತ್ವಯಾ ।
ಇತ್ಯುಕ್ತ್ವಾ ಸಾರಮನ್ಯೋನ್ಯಂ ತೇ ನಿಶ್ಚಿತ್ಯೈವಮಬ್ರುವನ್ ॥ ೧೫೦
ಆರುಹ್ಯ ನೃಪತಿಃ ಪೂರ್ವಮಿಂದ್ರಿಯಾಶ್ವಾನ್ ವಶೀಕೃತಾನ್ ।
ಕಾಮಕ್ರೋಧಾದಿಕಾನ್ ಜಿತ್ವಾ ರಿಪೂನಾಭ್ಯಂತರಾಂಶ್ಚ ತಾನ್ ॥ ೧೫೧
ಜಯೇದಾತ್ಮಾನಮೇವಾದೌ ವಿಜಯಾಯಾನ್ಯವಿದ್ವಿಷಾಮ್ ।
ಅಜಿತಾತ್ಮಾ ಹಿ ವಿವಶೀ ವಶೀಕುರ್ಯಾತ್ ಕಥಂ ಪರಮ್ ॥ ೧೫೨
ತತೋ ಜಾನಪದತ್ವಾದಿ ಗುಣಯುಕ್ತಾಂಶ್ಚ ಮಂತ್ರಿಣಃ ।
ಪುರೋಹಿತಂ ಚಾಥರ್ವಜ್ಞಂ ಕುರ್ಯಾದ್ದಕ್ಷಂ ತಪೋನ್ವಿತಮ್ ॥ ೧೫೩
ಉಪಾಧಿಭಿರ್ಭಯೇ ಲೋಭೇ ಧರ್ಮೇ ಕಾಮೇ ಪರೀಕ್ಷಿತಾನ್ ।
ಯೋಗ್ಯೇಷ್ವಮಾತ್ಯಾನ್ ಕಾರ್ಯೇಷು ಯುಂಜೀತಾಂತರವಿತ್ತಮಃ ॥ ೧೫೪
ಸತ್ಯಂ ದ್ವೇಷಪ್ರಯುಕ್ತಂ ವಾ ಸ್ನೇಹೋಕ್ತಂ ಸ್ವಾರ್ಥಸಂಹತಮ್ ।
ವಚಸ್ತೇಷಾಂ ಪರೀಕ್ಷೇತ ಮಿಥಃ ಕಾರ್ಯೇಷು ಜಲ್ಪತಾಮ್ ॥ ೧೫೫

೧೯೬. ಅವರ ಮಾತು ಸತ್ಯವಾಗಿದ್ದರೆ ಸಂತೋಷಪಡಬೇಕು. ಸುಳ್ಳಾಗಿದ್ದರೆ ಸೂಕ್ತವಾದ ಶಿಕ್ಷೆಯನ್ನು ವಿಧಿಸಬೇಕು. ಅವರ ನಡವಳಿಕೆಯನ್ನು ಗೂಢಚಾರರ ಮೂಲಕ ತಿಳಿಯಬೇಕು.

೧೯೭. ಹೀಗೆ ಕಣ್ಣುತೆರೆದು ಕೆಲಸಗಳನ್ನು ನೋಡುತ್ತಾ, ವಿಘ್ನಗಳನ್ನು ಬೇರು ಸಹಿತ ಕಿತ್ತುಹಾಕುತ್ತಾ ಕೋಷ ದಂಡ ಮೊದಲಾದುವುನ್ನು ದೃಢವಾಗಿ ನೆಲೆಸುವಂತೆ ಮಾಡಬೇಕು.

೧೯೮. ಆಮೇಲೆ ಉತ್ಸಾಹ ಶಕ್ತಿ, ಪ್ರಭುಶಕ್ತಿ, ಮಂತ್ರಶಕ್ತಿ ಎಂಬ ಮೂರುಶಕ್ತಿಗಳಿಂದ ಕೂಡಿ ತನ್ನವರು ಮತ್ತು ಬೇರೆಯವರ ನಡುವೆ ಅಂತರವನ್ನು (ಬಲಾಬಲಗಳನ್ನು) ತಿಳಿದು ಪರದೇಶವನ್ನು ಗೆಲ್ಲಲು ಬಯಸಬೇಕು.

೧೯೯. ಶಾಸ್ತ್ರಜ್ಞರೂ ಪ್ರಾಜ್ಞರೂ ಆದ ಆತ್ಮೀಯರೊಡನೆ ಸಂಕ್ಷಿಪ್ತವಾಗಿ ಚರ್ಚೆ ನಡೆಸಬೇಕು. ಅವರು ತೀರ್ಮಾನಿಸಿದ್ದನ್ನು ತನ್ನ ಸ್ವಂತ ಬುದ್ಧಿಯಿಂದ ಆಳವಾಗಿ ಪರಿಶೀಲಿಸಬೇಕು.

೨೦೦. ಸಾಮ, ದಾನ ಮೊದಲಾದ ಉಪಾಯಗಳನ್ನು ತಿಳಿದವನಾಗಿ ಯೋಗಕ್ಷೇಮವನ್ನು ಸಾಧಿಸಬೇಕು. ಅನಂತರ ಸಂಧಿ, ವಿಗ್ರಹ ಮೊದಲಾದ ಆರು ಗುಣಗಳನ್ನು ಪ್ರಯೋಗಿಸಬೇಕು.

೨೦೧. ಹೀಗೆ ಸ್ವದೇಶ–ಪರದೇಶಗಳ ಬಗ್ಗೆ ಎಚ್ಚರದಿಂದ ಚಿಂತೆಯನ್ನು ಮಾಡುವ ರಾಜನು ಗೆದ್ದೇ ಗೆಲ್ಲುತ್ತಾನೆ. ಎಂದೂ ಸೋಲುವುದಿಲ್ಲ.

---

ಸತ್ಯೇ ತುಷ್ಯೇದಸತ್ಯೇತು ಯಥಾರ್ಹಂ ದಂಡಮಾಚರೇತ್ ।
ಜಿಜ್ಞಾಸೇತ ಪೃಥಕ್ ಚೈಷಾಂ ಚಾರೈರಾಚರಿತಂ ಸದಾ ॥ ೧೯೬

ಇತ್ಯನಾವೃತದೃಕ್ ಪಶ್ಯನ್ ಕಾರ್ಯಾಣ್ಯುತ್ಖಾಯ ಕಂಟಕಾನ್ ।
ಉಪಾರ್ಜ್ಯ ಕೋಷದಂಡಾದಿ ಸಾಧಯೇದ್ ಬದ್ಧಮೂಲತಾಮ್ ॥ ೧೯೭

ಉತ್ಸಾಹಪ್ರಭುತಾಮಂತ್ರಶಕ್ತಿ ತ್ರಯಯುತಸ್ತತಃ ।
ಪರದೇಶಜಿಗೀಷುಃಸ್ಯಾತ್ ವಿಚಾರ್ಯ ಸ್ವಪರಾಂತರಮ್ ॥ ೧೯೮

ಆಪ್ತೈಃ ಶ್ರುತಾನ್ವಿತೈಃ ಪ್ರಾಜ್ಞೈರ್ಮಂತ್ರಂ ಕುರ್ಯಾದನಾಯತಮ್ ।
ತೈರ್ನಿಶ್ಚಿತಂ ಸ್ವಬುದ್ಧ್ಯಾತತ್ ಸರ್ವಾಂಗಂ ಪರಿಶೋಧಯೇತ್ ॥ ೧೯೯

ಸಾಮದಾನಾದ್ಯುಪಾಯಜ್ಞೋ ಯೋಗಕ್ಷೇಮಂ ಪ್ರಸಾಧಯೇತ್ ।
ಪ್ರಯುಂಜೀತ ತತಃ ಸಂಧಿವಿಗ್ರಹಾದೀನ್ ಗುಣಾಂಶ್ಚ ಷಟ್ ॥ ೨೦೦

ಏವಂ ವಿತಂದ್ರೋ ವಿದಧತ್ ಸ್ವದೇಶಪರದೇಶಯೋಃ ।
ಚಿಂತಾಂ ರಾಜಾ ಜಯತ್ಯೇವ ನ ಪುನರ್ಜಾತು ಜೀಯತೇ ॥ ೨೦೧

೨೦೨. ಅವಿವೇಕಿಯಾದ ರಾಜನಾದರೋ ಕಾಮಕ್ರೋಧಗಳಿಗೆ ತುತ್ತಾಗುತ್ತಾನೆ. ದಾರಿತಪ್ಪಿಸುವ ದುಷ್ಟಸೇವಕರು ಕುತಂತ್ರದಿಂದ ಅವನನ್ನು ಹಳ್ಳಕ್ಕೆ ತಳ್ಳಿ ಅವನನ್ನು ದೋಚುತ್ತಾರೆ.

೨೦೩-೨೦೪. ಬುದ್ಧಿವಂತರಾದ ರೈತರು ಭತ್ತದಗದ್ದೆಗೆ ಬೇಲಿಯನ್ನು ಹಾಕಿದಂತೆ ಅಂತಹ ರಾಜನ ಹತ್ತಿರಕ್ಕೆ ಬೇರೆಯವರು ಬರಲು ಸಾಧ್ಯವಾಗುವುದಿಲ್ಲ. ರಹಸ್ಯ ವಿಷಯಗಳಲ್ಲಿ ಅವರು ಅವನೊಡನೆ ಒಂದಾಗಿ ಅವನನ್ನು ವಶಮಾಡಿಕೊಳ್ಳುತ್ತಾರೆ. ಅನಂತರ ಅವಿವೇಕಿಯಾದ ಅವನಿಂದ ಜಿಗುಪ್ಸೆಗೊಂಡು ರಾಜ್ಯಲಕ್ಷ್ಮಿಯು (ಸಂಪತ್ತು) ಓಡಿಹೋಗುತ್ತಾಳೆ.

೨೦೫. ಆದ್ದರಿಂದ ಆತ್ಮಸಂಯಮಿಯಾದ ರಾಜನು ಆಡಳಿತವನ್ನು ಹಿಡಿದು ವಿಶೇಷಜ್ಞಾನವನ್ನು ಪಡೆದು ಪ್ರಜೆಗಳ ಪ್ರೀತಿಯಿಂದಲೇ ಸಂಪತ್ತಿಗೆ ಪಾತ್ರನಾಗುತ್ತಾನೆ

೨೦೬-೨೦೮. ಹಿಂದೆ ಶೂರಸೇನ ಎಂಬ ರಾಜನು ಸೇವಕರನ್ನೇ ನಂಬಿಕೊಂಡು ಇದ್ದನು. ಮಂತ್ರಿಗಳು ದುಷ್ಟಕೂಟಮಾಡಿಕೊಂಡು ಅವನನ್ನು ವಶಪಡಿಸಿಕೊಂಡು ತಾವು ಹೇಳಿದಂತೆ ಆಡಿಸಿಕೊಂಡಿದ್ದರು. ಅವರು ರಾಜನ ಸೇವಕನಿಗೆ ರಾಜನು ಅಪೇಕ್ಷೆಪಟ್ಟರೂ ಒಂದು ಹುಲ್ಲುಕಡ್ಡಿಯನ್ನೂ ಕೊಡುತ್ತಿರಲಿಲ್ಲ. ತಮ್ಮ ಸೇವಕನಿಗೆ ಮಾತ್ರ ಕೊಡುತ್ತಿದ್ದರು. ಅವರು ರಾಜನಿಗೆ ತಿಳಿಸಿ ಅನರ್ಹನಿಗೂ ಕೊಡಿಸುತ್ತಿದ್ದರು.

---

ಅಜ್ಞಸ್ತು ಕಾಮಲೋಭಾಂಧೋ ವೃಥಾ ಮಾರ್ಗಪ್ರದರ್ಶಿಭಿಃ ।
ನೀತ್ವಾ ಶ್ವಭ್ರೇಷು ನಿಕ್ಷಿಪ್ಯ ಮುಷ್ಯತೇ ಧೂರ್ತಚೇಟಕೈಃ ॥ ೨೦೨
ನೈವಾವಕಾಶಂ ಲಭತೇ ರಾಜ್ಞಸ್ತಸ್ಯಾಂತಿಕೇಽಪರಃ ।
ಧೂರ್ತೈರ್ನಿಬದ್ಧವಾಟಸ್ಯ ಶಾಲೇರಿವ ಕೃಷೀವಲೈಃ ॥ ೨೦೩
ಅಂತರ್ಭೂಯ ರಹಸ್ಯೇಷು ತೈರ್ವಶೀಕ್ರಿಯತೇ ಹಿ ಸಃ ।
ತತಃ ಶ್ರೀರವಿಶೇಷಜ್ಞಾತ್ ಖಿನ್ನಾ ತಸ್ಮಾತ್ ಪಲಾಯತೇ ॥ ೨೦೪
ತಸ್ಮಾಜ್ಜಿತಾತ್ಮಾ ರಾಜಾ ಸ್ಯಾತ್ ಯುಕ್ತದಂಡೋ ವಿಶೇಷವಿತ್ ।
ಪ್ರಜಾನುರಾಗಾದೇವಂ ಹಿ ಸ ಭವೇದ್ಭಾಜನಂ ಶ್ರಿಯಃ ॥ ೨೦೫
ಪೂರ್ವಂ ಚ ಶೂರಸೇನಾಖ್ಯೋ ಭೃತ್ಯೈಕಪ್ರತ್ಯಯೋ ನೃಪಃ ।
ಸಚಿವೈಃ ಪೇಟಕಂ ಕೃತ್ವಾ ಭುಜ್ಯತೇ ಸ್ಮ ವಶೀಕೃತಃ ॥ ೨೦೬
ಯಸ್ತಸ್ಯ ಸೇವಕೋ ರಾಜ್ಞಃ ತಸ್ಮೈ ತನ್ಮಂತ್ರಿಣೋಽತ್ರ ತೇ ।
ದಾತುಂ ನೈಚ್ಛಂಸ್ತೃಣಮಪಿ ದಿತ್ಸತ್ಯಪಿ ಚ ಭೂಪತೌ ॥ ೨೦೭
ತೇಷಾಂ ತು ಸೇವಕೋ ಯೋಽತ್ರ ದದುಸ್ತಸ್ಮೈ ಸ್ವಯಂ ಚ ತೇ ।
ತೇ ಚ ವಿಜ್ಞಪ್ಯ ರಾಜಾನಮನರ್ಹಾಯಾಪ್ಯದಾಪಯನ್ ॥ ೨೦೮

೨೦೯–೨೧೦. ಆ ರಾಜನು ನಿಧಾನವಾಗಿ ಆ ದುಷ್ಟಕೂಟದ ವಿಷಯವನ್ನು ತಿಳಿದು ತನ್ನ ಬುದ್ಧಿಯಿಂದಲೂ ಯುಕ್ತಿಯಿಂದಲೂ ಸಚಿವರನ್ನು ಪರಸ್ಪರ ಬೇರೆ ಮಾಡಿದನು. ಪರಸ್ಪರ ಚಾಡಿ ಹೇಳುತ್ತ ಅವರೆಲ್ಲ ಬೇರೆಬೇರೆಯಾಗಿ ಹೋದ ಮೇಲೆ ರಾಜನು ಬೇರೆ ಯಾರ ವಂಚನೆಗೂ ಒಳಗಾಗದೆ ರಾಜ್ಯವನ್ನು ಚೆನ್ನಾಗಿ ಪಾಲನೆ ಮಾಡಿದನು.

೨೧೧–೨೧೨. ಹರಿಸಿಂಹ ಎಂಬ ಒಬ್ಬ ರಾಜನಿದ್ದನು. ಅವನು ನೀತಿ ಶಾಸ್ತ್ರವನ್ನು ಬಲ್ಲವನಾಗಿದ್ದನು. ಮಂತ್ರಿಗಳು ನಿಷ್ಠರೂ ಜ್ಞಾನಿಗಳೂ ಆಗಿದ್ದರು. ಕೋಟೆಯನ್ನೂ ಹೊಂದಿದ್ದ ಅವನು ಸಾಕಷ್ಟು ಹಣವನ್ನು ಸಂಗ್ರಹಿಸಿದ್ದನು. ಪ್ರಜೆಗಳು ತನ್ನನ್ನು ಪ್ರೀತಿಸುವಂತೆ ನೋಡಿಕೊಂಡಿದ್ದನು. ಆದ್ದರಿಂದ ಚಕ್ರವರ್ತಿಯ ಎದುರು ಹೋರಾಡಿದರೂ ಸೋಲಲಿಲ್ಲ.

೨೧೩. ಇವಿಷ್ಟು ರಾಜ್ಯದ ವಿಚಾರಸಾರ. ಇದಕ್ಕಿಂತ ಹೆಚ್ಚಿಗೆ ಏನೂ ಇಲ್ಲ ಎಂದು ಮುಂತಾಗಿ ಹೇಳಿ ಗೋಮುಖ ಮೊದಲಾದವರು ಸುಮ್ಮನಾದರು.

೨೧೪–೨೧೫. ನರವಾಹನದತ್ತನು ಅವರ ಮಾತುಗಳನ್ನು ನಂಬಿ ಮನುಷ್ಯನು ಮಾಡಬೇಕಾದ ಕಾರ್ಯದಲ್ಲೂ, ಅವನ ಚಿಂತನೆಯನ್ನು ಮೀರಿದ ಕೆಲಸಗಳಲ್ಲೂ ದೈವವೊಂದಿದೆ ಎಂದು ಚಿಂತಿಸುತ್ತಿದ್ದನು. ಅನಂತರ ಮೇಲೆದ್ದು ಮದನಮಂಚುಕೆಯ ಸಮಾಗಮದ ವಿಳಂಬದಿಂದ ಉತ್ಕಂಠೆಗೆ ಒಳಗಾಗಿದ್ದ ಅವಳನ್ನು ನೋಡಲು ಹೊರಟನು.

---

ತದ್‌ದೃಷ್ಟ್ವಾ ಸ ನೃಪೋ ಬುದ್ಧ್ವಾ ಶನೈಸ್ತದ್ ಧೂರ್ತಪೇಟಕಮ್ ।
ಅನ್ಯೋನ್ಯಂ ಪ್ರಜ್ಞಯಾ ಯುಕ್ತ್ಯಾ ಸಚಿವಾಂಸ್ತಾನಭೇದಯತ್ ॥ ೨೦೯
ಭಿನ್ನೇಷು ತೇಷು ನಷ್ಟೇಷು ಮಿಥಃ ಪೈಶುನ್ಯಕಾರಿಷು ।
ಸಮ್ಯಕ್ ಶಶಾಸ ರಾಜ್ಯಂ ತತ್ ಸ ರಾಜಾನ್ಯೈರವಂಚಿತಃ ॥ ೨೧೦
ಹರಿಸಿಂಹಶ್ಚ ರಾಜಾಭೂತ್ ಸಾಮಾತ್ಯೋ ನೀತಿತತ್ತ್ವವಿತ್ ।
ಕೃತಭಕ್ತ್ಯಬುಧಾಮಾತ್ಯಃ ಸದುರ್ಗಃ ಸಾರ್ಥಸಂಚಯಃ ॥ ೨೧೧
ಅನುರಕ್ತಾಃ ಪ್ರಜಾಃ ಕೃತ್ವಾ ಚೇಷ್ಟತೇ ಸ್ಮ ಯಥಾ ತಥಾ ।
ಚಕ್ರವರ್ತ್ಯಭಿಯುಕ್ತೋಽಪಿ ನ ಜಗಾಮ ಪರಾಭವಮ್ ॥ ೨೧೨
ಏವಂ ವಿಚಾರಶ್ಚಿಂತಾ ಚ ಸಾರಂ ರಾಜ್ಯೇಽಧಿಕಂ ನು ಕಿಮ್ ।
ಇತ್ಯಾದ್ಯುಕ್ತ್ವಾ ಯಥಾಸ್ವಂ ತೇ ವಿರೇಮುರ್ಗೋಮುಖಾದಯಃ ॥ ೨೧೩
ನರವಾಹನದತ್ತಶ್ಚ ತೇಷಾಂ ಶ್ರದ್ಧಾಯ ತದ್ವಚಃ ।
ಚಿಂತ್ಯೇ ಪುರುಷಕರ್ತವ್ಯೇಽಪ್ಯಚಿಂತ್ಯೇ ದೈವಮಭ್ಯಧಾತ್ ॥ ೨೧೪
ತತಶ್ಚೋತ್ಥಾಯ ತೈರೇವ ಸಾಕಂ ತಾಂ ಪ್ರೇಕ್ಷಿತುಂ ಯಯೌ ।
ಸವಿಲಂಬಕೃತೋತ್ಕಂಠಾಂ ಪ್ರಿಯಾಂ ಮದನಮಂಚುಕಾಮ್ ॥ ೨೧೫

೨೧೬ ಅವಳ ಮನೆಗೆ ಹೋಗಿ ಅವನು ಆಸನದಲ್ಲಿ ಕುಳಿತು ಆತಿಥ್ಯವನ್ನು ಪಡೆದ ಮೇಲೆ ಕಳಿಂಗಸೇನೆಯು ಆಶ್ಚರ್ಯಗೊಂಡು ಗೋಮುಖನಿಗೆ ಹೇಳಿದಳು.

೨೧೭–೨೨೧. "ರಾಜಕುಮಾರ ನರವಾಹನದತ್ತನು ಬರದೇ ಇದ್ದುದರಿಂದ ಆತಂಕಗೊಂಡು ಮದನಮಂಚುಕೆಯು ಅವನ ದಾರಿಯನ್ನು ನೋಡುತ್ತ ಉಪ್ಪರಿಗೆಯ ಮೇಲೆ ನಿಂತಿದ್ದಳು. ನಾನೂ ಜೊತೆಯಲ್ಲಿ ಇದ್ದೆ. ಅಷ್ಟರಲ್ಲಿ ಆಕಾಶದಿಂದ ಒಬ್ಬ ಪುರುಷನು ಇಳಿದು ಬಂದನು. ಕಿರೀಟ ಮತ್ತು ಖಡ್ಗವನ್ನು ಧರಿಸಿದ್ದ ದಿವ್ಯಾಕಾರದ ಅವನು ನನಗೆ ಹೀಗೆಂದನು: "ನಾನು ಮಾನಸವೇಗ ಎಂಬ ಹೆಸರಿನ ವಿದ್ಯಾಧರರಾಜನು. ನೀನು ಸುರಭಿದತ್ತಾ ಎಂಬ ದಿವ್ಯ ಸ್ತ್ರೀ. ಶಾಪವಶಾತ್ ಭೂಮಿಗೆ ಬಂದಿರುವೆ. ನಿನ್ನ ಈ ಮಗಳೂ ದಿವ್ಯ ಕನ್ಯೆ ಎಂದು ನನಗೆ ಗೊತ್ತು. ಆದ್ದರಿಂದ ನಿನ್ನ ಮಗಳನ್ನು ನನಗೆ ಕೊಡು. ಸಂಬಂಧವು ಯೋಗ್ಯವಾಗಿದೆ' ಎಂದು ಅವನು ಹೇಳಿದಾಗ ನಾನು ನಕ್ಕು ಹೀಗೆ ಹೇಳಿದೆನು.

---

ಪ್ರಾಪ್ತೇ ತನ್ಮಂದಿರಂ ತಸ್ಮಿನ್ನಾಸನಸ್ಥೇ ಕೃತಾದರಾ ।
ಕ್ಷಣಂ ಕಲಿಂಗಸೇನಾತ್ರ ಗೋಮುಖಂ ವಿಸ್ಮಿತಾಬ್ರವೀತ್ ॥ ೨೧೬
ನರವಾಹನದತ್ತೇಽತ್ರ ರಾಜಸೂನಾವನಾಗತೇ ।
ಉತ್ಸುಕಾ ಪದವೀಮಸ್ಯ ದ್ರಷ್ಟುಂ ಮದನಮಂಚುಕಾ ॥ ೨೧೭
ಹರ್ಮ್ಯಾಗ್ರಭೂಮಿಮಾರೂಢಾ ಗೋಮುಖಾನುಗತಾ ಮಯಾ ।
ಯಾವತ್ತಾವತ್ಪುಮಾನೇಕೋ ನಭಸೋಽತ್ರಾವತೀರ್ಣವಾನ್ ॥ ೨೧೮
ಸ ಕಿರೀಟೀ ಚ ಖಡ್ಗೀ ಚ ಮಾಂ ದಿವ್ಯಾಕೃತಿರಬ್ರವೀತ್ ।
ಅಹಂ ಮಾನಸವೇಗಾಖ್ಯೋ ರಾಜಾ ವಿದ್ಯಾಧರೇಶ್ವರಃ ॥ ೨೧೯
ಸ್ವಃಸ್ತ್ರೀ ಸುರಭಿದತ್ತಾಖ್ಯಾ ತ್ವಂ ಚ ಶಾಪಚ್ಯುತಾ ಭುವಿ ।
ಸುತಾ ಚ ತವ ದಿವ್ಯೇಯಮೇತನ್ಮೇ ವಿದಿತಂ ಕಿಲ ॥ ೨೨೦
ತದ್ದೇಹಿ ಮೇ ಸುತಾಮೇತಾಂ ಸಂಬಂಧಃ ಸದೃಶೋ ಹ್ಯಯಮ್ ।
ಇತ್ಯುಕ್ತೇ ತೇನ ಸಹಸಾ ವಿಹಸ್ಯಾಹಂ ತಮಬ್ರವಮ್ ॥ ೨೨೧

೨೨೨-೨೨೩. ನರವಾಹನದತ್ತನು ಇವಳ ಪತಿಯಾಗುವನೆಂದು ದೈವಸಂಕಲ್ಪವಾಗಿದೆ. ನಿಮ್ಮೆಲ್ಲರಿಗೂ ಚಕ್ರವರ್ತಿಯಾಗುವನೆಂದು ಭವಿತವ್ಯವಾಣಿಯೂ ಇದೆ ಎಂದು ಹೇಳಿದೆ. ಇದನ್ನು ಕೇಳುತ್ತಿದ್ದಂತೆ ನನ್ನ ಮಗಳ ಕಣ್ಣಿನಲ್ಲಿ ಉದ್ವೇಗದಿಂದ ಅಸಮಯದ ಮಿಂಚಿನಂತೆ ಆ ವಿದ್ಯಾಧರನೂ ಆಕಾಶಕ್ಕೆ ಹಾರಿ ಮಾಯವಾದನು" ಎಂದಳು.

೨೨೪-೨೨೭. ಅದನ್ನು ಕೇಳಿ ಗೋಮುಖನು ಹೇಳಿದನು. "ನಮ್ಮ ರಾಜಕುಮಾರನು ಮುಂದೆ ಚಕ್ರವರ್ತಿಯಾಗುವನು ಎಂದು ಅಂತರಿಕ್ಷದ ವಾಣಿಯನ್ನು ಕೇಳಿದಾಗಲೂ ಅವನಿಗೆ ಕೆಡುಕನ್ನು ಮಾಡಲು ವಿದ್ಯಾಧರರು ಇಚ್ಛಿಸಿದರು. ಸ್ವೇಚ್ಛೆಯಿಂದಿರುವ ಯಾರು ತಾನೇ ತಮಗೆ ಬೇರೊಬ್ಬರು ಒಡೆಯನಾಗುವುದನ್ನು ಬಯಸುತ್ತಾರೆ ? ಸಾಕ್ಷಾತ್ ಶಿವನೇ ರಾಜಕುಮಾರನನ್ನು ರಕ್ಷಿಸಲು ತನ್ನ ಗಣಗಳಿಗೆ ಹೇಳಿದ್ದಾನೆ ಎಂದು ನಾರದರು ಹೇಳಿದ್ದಾರೆಂದು ನನ್ನ ತಂದೆಯು ಹೇಳುತ್ತಿದ್ದುದನ್ನು ನಾನೇ ಕೇಳಿದ್ದೇನೆ. ಆದ್ದರಿಂದ ಈ ವಿದ್ಯಾಧರರು ನಮ್ಮ ವಿರೋಧಿಗಳು ಎಂದು ಅವನು ಹೇಳಿದ್ದನ್ನು ಕೇಳಿ ಕಳಿಂಗಸೇನೆಯು ತನ್ನ ವೃತ್ತಾಂತವು ಉಂಟು ಮಾಡಿದ ಭಯದಿಂದ ಹೀಗೆ ಹೇಳಿದಳು.

೨೨೮. ""ನನ್ನಂತೆಯೇ ಮಾಯೆಯಿಂದ ಯಾರಾದರೂ ಮದನಮಂಚುಕೆಯನ್ನು ವಂಚಿಸುವುದಕ್ಕೆ ಮೊದಲೇ ರಾಜಕುಮಾರನು ಏಕೆ ಅವಳನ್ನು ವಿವಾಹವಾಗಬಾರದು ?" ಎಂದಳು.

---

ನರವಾಹನದತ್ತೋಽಸ್ಯಾ ಭರ್ತಾ ದೇವೈರ್ವಿನಿರ್ಮಿತಃ ।
ಸರ್ವೇಷಾಂ ಯೋಽತ್ರ ಯುಷ್ಮಾಕಂ ಚಕ್ರವರ್ತೀ ಭವಿಷ್ಯತಿ ॥ ೨೨೨
ಇತ್ಯುಕ್ತ್ವಾ ಸ ಮಯೋತ್ಪತ್ಯ ವ್ಯೋಮ ವಿದ್ಯಾಧರೋ ಗತಃ ।
ಮತ್ಪುತ್ರೀನಯನೋದ್ವೇಗಾಕಾಂಡವಿದ್ಯುಲ್ಲತೋಪಮಃ ॥ ೨೨೩
ತಚ್ಛ್ರುತ್ವಾ ಗೋಮುಖೋಽವಾದೀತ್ ಜಾತೇಽಸ್ಮಿನ್ ಸ್ವಾಮಿನೀಹ ನಃ ।
ರಾಜಪುತ್ರೇಽಂತರಿಕ್ಷೋಕ್ತೇಃ ಬುದ್ಧ್ವಾಮುಂ ಭಾವಿನಂ ಪ್ರಭುಮ್ ॥ ೨೨೪
ಪಾಪಂ ವಿಧಾತುಮಪ್ಯೈಚ್ಛನ್ ಸದ್ಯೋ ವಿದ್ಯಾಧರಾ ಹಿ ತೇ ।
ಉಚ್ಛೃಂಖಲೋ ನಿಯಂತಾರಂ ಕ ಇಚ್ಛೇತ್ ಬಲಿನಂ ಪ್ರಭುಮ್ ॥ ೨೨೫
ತತೋಽಯಂ ರಕ್ಷಿತಃ ಸಾಕ್ಷಾತ್ ಗಣಾನಾದಿಶ್ಯ ಶಂಭುನಾ ।
ನಾರದೋಕ್ತಿರಿಯಂ ತಾತೇನೋಚ್ಯಮಾನಾ ಶ್ರುತಾ ಮಯಾ ॥ ೨೨೬
ಅತೋ ವಿದ್ಯಾಧರಾಃ ಸಂಪ್ರತ್ಯೇತೇಽಸ್ಮಾಕಂ ವಿರೋಧಿನಃ ।
ಶ್ರುತ್ವಾ ಕಲಿಂಗಸೇನೈತತ್ ಸ್ವವೃತ್ತಾಂತಭಿಯಾಬ್ರವೀತ್ ॥ ೨೨೭
ಮಾಯಯಾ ತರ್ಹಿ ನೋ ಯಾವತ್ ಮದ್ವತ್ ಮದನಮಂಚುಕಾ ।
ವಂಚ್ಯತೇ ರಾಜಪುತ್ರೇಣ ಕಿಂ ನ ತಾವದ್ವಿವಾಹ್ಯತೇ ॥ ೨೨೮

೨೨೯. ಕಳಿಂಗಸೇನೆಯ ಈ ಮಾತನ್ನು ಕೇಳಿ ಗೋಮುಖ ಮೊದಲಾದವರು "ನೀನೇ ವತ್ಸರಾಜನನ್ನು ಪ್ರೇರೇಪಿಸು' ಎಂದರು.

೨೩೦–೨೩೨. ಅನಂತರ ಮದನಮಂಚುಕೆಯಲ್ಲೇ ಆಸಕ್ತನಾದ ನರವಾಹನದತ್ತನು ಅರಳಿದ ಕಮಲದಂತಹ ಮುಖ, ಬಿಡಿಸಿದ ಕುವಲಯದಂತಹ ಕಣ್ಣು, ಬಂಧೂಕ ಪುಷ್ಪದಂತೆ ಆಕರ್ಷಣೀಯವಾದ ತುಟಿ, ಮಂದಾರದ ಗೊಂಚಲಿನಂತಹ ಸ್ತನ, ಶಿರೀಷದಂತೆ ಕೋಮಲವಾದ ಶರೀರ, ಹೀಗೆ ಐದು ಪುಷ್ಪಮಯಳಾಗಿದ್ದೂ ಜಗತ್ತನ್ನು ಗೆಲ್ಲಲು ಮನ್ಮಥನು ಉಪಯೋಗಿಸಿದ ಒಂದೇ ಬಾಣದಂತಿದ್ದ ಮದನಮಂಚುಕೆಯನ್ನೇ ನೋಡುತ್ತಾ ಉದ್ಯಾನದಲ್ಲಿ ಆ ದಿನವನ್ನು ಕಳೆದನು.

೨೩೩. ಮಾರನೆಯ ದಿನ ಕಳಿಂಗಸೇನೆಯು ಸ್ವತಃ ವತ್ಸರಾಜನ ಹತ್ತಿರ ಹೋಗಿ ತನ್ನ ಮಗಳ ವಿವಾಹಕ್ಕೆ ಸಂಬಂಧಿಸಿದಂತೆ ತನ್ನ ಆಸೆಯನ್ನು ನಿವೇದಿಸಿದಳು.

೨೩೪. ವತ್ಸರಾಜನೂ ಅವಳನ್ನು ಕಳುಹಿಸಿಕೊಟ್ಟು ತನ್ನ ಮಂತ್ರಿಗಳನ್ನು ಕರೆದು ವಾಸವದತ್ತೆಯ ಎದುರಿನಲ್ಲಿ ಹೇಳಿದನು :

---

ಏತತ್ಕಲಿಂಗಸೇನಾತಃ ಶ್ರುತ್ವಾ ತಾಂ ಗೋಮುಖಾದಯಃ ।
ಊಚುಸ್ತ್ವಯ್ಯೈವ ಕಾರ್ಯೇಽಸ್ಮಿನ್ ವತ್ಸೇಶಃ ಪ್ರೇರ್ಯತಾಮಿತಿ ॥ ೨೨೯
ತತಸ್ತದ್ಗತಧೀಸ್ತಸ್ಮಿನ್ನುದ್ಯಾನೇ ವ್ಯಹರದ್ದಿನಮ್ ।
ನರವಾಹನದತ್ತಸ್ತಾಂ ಪಶ್ಯನ್ ಮದನಮಂಚುಕಾಮ್ ॥ ೨೩೦
ಉತ್ಫುಲ್ಲಪದ್ಮವದನಾಂ ದಲತ್ಕುವಲಯೇಕ್ಷಣಾಮ್ ।
ಬಂಧೂಕಕಮನೀಯೌಷ್ಠೀಂ ಮಂದಾರಸ್ತಬಕಸ್ತನೀಮ್ ॥ ೨೩೧
ಶಿರೀಷಸುಕುಮಾರಾಂಗೀಂ ಪಂಚಪುಷ್ಪಮಯೀಮಿವ ।
ಏಕಾಮೇವ ಜಗಜ್ಜೇತ್ರಿಂ ಸ್ಮರೇಣ ವಿಹಿತಾಮಿಷುಮ್ ॥ ೨೩೨
ಕಲಿಂಗಸೇನಾಪ್ಯನ್ಯೇದ್ಯುರ್ಗತ್ವಾ ವತ್ಸೇಶ್ವರಂ ಸ್ವಯಮ್ ।
ಸುತಾವಿವಾಹಹೇತೋಃ ತದ್ಯಥಾಭೀಷ್ಟಂ ವ್ಯಜಿಜ್ಞಪತ್ ॥ ೨೩೩
ವತ್ಸೇಶೋಽಪಿ ವಿಸೃಜ್ಯೈತಾಮಾಹೂಯ ನಿಜಮಂತ್ರಿಣಃ ।
ದೇವ್ಯಾಂ ವಾಸವದತ್ತಾಯಾಂ ಸ್ಥಿತಾಯಾಂ ನಿಜಗಾದ ತಾನ್ ॥ ೨೩೪

೨೩೪–೨೩೬ 'ಕಳಿಂಗ ಸೇನೆಯು ಮಗಳಿಗೆ ವಿವಾಹಮಾಡಲು ಕಾತರಳಾಗಿದ್ದಾಳೆ. ಏನು ಮಾಡೋಣ ? ಅವಳು ಉತ್ತಮಳಾಗಿದ್ದರೂ ವೇಶ್ಯೆ ಎಂದು ಜನರು ಹೇಳುತ್ತಾರೆ. ಜನರ ಅಭಿಪ್ರಾಯವನ್ನು ಗೌರವಿಸಬೇಕಲ್ಲವೆ ? ಹಿಂದೆ ರಾಮನು ಸೀತೆಯು ಪರಿಶುದ್ಧಳಾಗಿದ್ದರೂ ಅಪವಾದವನ್ನು ಕೇಳಿ ಅವಳನ್ನು ತ್ಯಜಿಸಲಿಲ್ಲವೆ ? ಭೀಷ್ಮನು ತನ್ನ ಸೋದರರಿಗೋಸ್ಕರ ಅಂಬೆಯನ್ನು ಅಪಹರಿಸಿಕೊಂಡು ಬಂದರೂ ಅವಳು ಬೇರೊಬ್ಬನನ್ನು ವರಿಸಿದ್ದಾಳೆ ಎಂದು ತಿಳಿದು ಬಿಟ್ಟುಬಿಡಲಿಲ್ಲವೆ ?

೨೩೭–೨೩೮. ಈ ಕಳಿಂಗಸೇನೆಯು ಸ್ವಯಂವರದಲ್ಲಿ ನನ್ನನ್ನು ವರಿಸಿದ್ದರೂ ಮದನವೇಗನು ಅವಳನ್ನು ಮದುವೆಯಾದನು. ಆದ್ದರಿಂದ ಜನರು ಇವಳನ್ನು ನಿಂದಿಸುತ್ತಿದ್ದಾರೆ. ಆದ್ದರಿಂದ ನರವಾಹನದತ್ತನು ತನಗೆ ಅನುರೂಪಳಾದ ಈ ಕಳಿಂಗಸೇನೆಯ ಮಗಳನ್ನು ಗಾಂಧರ್ವರೀತಿಯಲ್ಲಿ ಮದುವೆ ಆಗಲಿ.'

---

ಕಲಿಂಗಸೇನಾ ತ್ವರತೇ ಸುತೋದ್ವಾಹಾಯ ತತ್ಕಥಮ್ ।
ಕುರ್ಮೋ ಯದ್ಬಂಧಕೀತ್ಯೇತಾಂ ಲೋಕೋ ವಕ್ತ್ಯುತ್ತಮಾಮಿತಿ ॥ ೨೩೪
ಲೋಕಶ್ಚ ಸರ್ವದಾ ರಕ್ಷ್ಯಸ್ತತ್ ಪ್ರವಾದೇನ ಕಿಂ ಪುರಾ ।
ರಾಮಭದ್ರೇಣ ಶುದ್ಧಾಪಿ ತ್ಯಕ್ತಾ ದೇವೀ ನ ಜಾನಕೀ ॥ ೨೩೫
ಅಂಬಾ ಹೃತಾಪಿ ಭೀಷ್ಮೇಣ ಯತ್ನಾತ್ ಭ್ರಾತುಃ ಕೃತೇ ತಥಾ ।
ಪ್ರತೀಪಂ ಕಿಂ ನ ವಾ ತ್ಯಕ್ತಾ ವೃತಪೂರ್ವಾನ್ಯಭರ್ತೃಕಾ ॥ ೨೩೬
ಏವಂ ಕಲಿಂಗಸೇನೈಷಾ ಸ್ವಯಂವರವೃತೇ ಮಯಿ ।
ವ್ಯೂಢಾ ಮದನವೇಗೇನ ತೇನೈತಾಂ ಗರ್ಹತೇ ಜನಃ ॥ ೨೩೭
ಅತೋಽಸ್ಯಾಸ್ತನಯಾಮೇತಾಂ ಗಾಂಧರ್ವವಿಧಿನಾ ಸ್ವಯಮ್ ।
ನರವಾಹನದತ್ತೋಽಸಾವುದ್ವಹತ್ವನುರೂಪಿಕಾಮ್ ॥ ೨೩೮

೨೪೦-೨೪೫. ಹೀಗೆ ವತ್ಸರಾಜನು ಹೇಳಿದ್ದನ್ನು ಕೇಳಿ ಯೌಗಂಧರಾಯಣನು ಪ್ರತಿಯಾಗಿ ಹೀಗೆ ನುಡಿದನು. ""ರಾಜನೆ, ಕಳಿಂಗಸೇನೆಯು ಈ ಅನೌಚಿತ್ಯವನ್ನು ಹೇಗೆ ತಾನೆ ಒಪ್ಪುತ್ತಾಳೆ ? ಅವಳೂ ಅವಳ ಮಗಳೂ ದಿವ್ಯಸ್ತ್ರೀಯರು. ಈ ವಿಷಯವನ್ನು ನನ್ನ ಗೆಳೆಯನಾದ ಜ್ಞಾನಿ ಬ್ರಹ್ಮರಾಕ್ಷಸನು ಅನೇಕ ಬಾರಿ ಹೇಳಿದ್ದಾನೆ" ಈ ರೀತಿಯಾಗಿ ಅವರೆಲ್ಲರೂ ಪರಸ್ಪರ ವಿಚಾರವಿನಿಮಯ ಮಾಡುತ್ತಿದ್ದಾಗ ಆಕಾಶದಿಂದ ಈಶ್ವರನ ವಾಣಿಯು ಕೇಳಿಸಿತು. ""ನನ್ನ ಕಣ್ಣಿನ ಬೆಂಕಿಯಿಂದ ಸುಟ್ಟುಹೋದ ಮನ್ಮಥನ ಅವತಾರವೇ ಈ ನರವಾಹನದತ್ತನು. ಮನ್ಮಥನ ಪತ್ನಿ ರತಿಯು ತಪಸ್ಸು ಮಾಡಿ ಮದನಮಂಚುಕೆಯಾಗಿ ಹುಟ್ಟಿ ಅವನಿಗೆ ಪತ್ನಿಯಾಗಲಿದ್ದಾಳೆ. ಅಂತಃಪುರದ ಸ್ತ್ರೀಯರಿಗೆಲ್ಲಾ ಮುಖ್ಯಳಾಗಿ ಅವಳು ನರವಾಹನದತ್ತನೊಡನೆ ನನ್ನ ಅನುಗ್ರಹದಿಂದಲೇ ವಿದ್ಯಾಧರ ರಾಜ್ಯವನ್ನು ಒಂದು ದಿವ್ಯಕಲ್ಪಕಾಲ ಆಳುವಳು" ಎಂದು ಆ ವಾಣಿಯು ಹೇಳಿತು.

೨೪೬ ಈ ಈಶ್ವರವಾಣಿಯನ್ನು ಕೇಳಿ ವತ್ಸರಾಜನು ಪರಿವಾರಸಮೇತ ಪರಮೇಶ್ವರನಿಗೆ ವಂದಿಸಿ ಆನಂದದಿಂದ ತನ್ನ ಮಗನ ಮದುವೆ ಮಾಡಲು ನಿಶ್ಚಯಿಸಿದನು.

---

ಇತ್ಯುಕ್ತೇ ವತ್ಸರಾಜೇನ ಸ್ಮಾಹ ಯೌಗಂಧರಾಯಣಃ ।
ಇಚ್ಛೇತ್ ಕಲಿಂಗಸೇನೈತತ್ ಅನೌಚಿತ್ಯಂ ಕಥಂ ಪ್ರಭೋ ॥ ೨೪೦
ದಿವ್ಯೈಷಾ ಹಿ ನ ಸಾಮಾನ್ಯಾ ಸಸುತೇತ್ಯಸಕೃದ್ಗತಮ್ ।
ಮಿತ್ರೇಣ ಚೈತದುಕ್ತಂ ಮೇ ಜ್ಞಾನಿನಾ ಬ್ರಹ್ಮರಕ್ಷಸಾ ॥ ೨೪೧
ಇತ್ಯಾದಿ ತತ್ರ ತೇ ತಾವದ್ವಿಮೃಶಂತಿ ಪರಸ್ಪರಮ್ ।
ಏವಂ ಮಾಹೇಶ್ವರೀ ತಾವದ್ವಾಣೀ ಪ್ರಾದುರಭೂದ್ದಿವಃ ॥ ೨೪೨
ಮನ್ನೇತ್ರಾನಲದಗ್ಧಸ್ಯ ಸೃಷ್ಟಸ್ಯಾತ್ರ ಮನೋಭುವಃ ।
ನರವಾಹನದತ್ತಸ್ಯ ಮಯೈವೈಷಾ ವಿನಿರ್ಮಿತಾ ॥ ೨೪೩
ತಪಸ್ತುಷ್ಟೇನ ಭಾರ್ಯಾಸ್ಯ ರತಿರ್ಮದನಮಂಚುಕಾ ।
ಏತಯಾ ಸಹಿತಶ್ಚಾಯಂ ಸರ್ವಾಂತಃಪುರಮುಖ್ಯಯಾ ॥ ೨೪೪
ವಿದ್ಯಾಧರಾಧಿರಾಜ್ಯಂ ಚ ದಿವ್ಯಂ ಕಲ್ಪಂ ಕರಿಷ್ಯತಿ ।
ಮತ್ಪ್ರಸಾದಾದ್ವಿಜಿತ್ಯಾರೀನ್ ಇತ್ಯುಕ್ತ್ವಾ ವಿರರಾಮ ವಾಕ್ ॥ ೨೪೫
ಶ್ರುತ್ವೈತಾಂ ಭಗವದ್ವಾಣೀಂ ವತ್ಸೇಶಃ ಸಪರಿಚ್ಛದಃ ।
ತಂ ಪ್ರಣಮ್ಯ ಸುತೋದ್ವಾಹೇ ಸಾನಂದೋ ನಿಶ್ಚಯಂ ವ್ಯಧಾತ್ ॥ ೨೪೬

೨೪೭–೨೪೮. ಆಮೇಲೆ ರಾಜನು ವಿಶೇಷವಾದ ಜ್ಞಾನವನ್ನು ಮೊದಲೇ ತಿಳಿದಿದ್ದ ಪ್ರಧಾನ ಮಂತ್ರಿಯನ್ನು ಅಭಿನಂದಿಸಿ ಜೋಯಿಸರನ್ನು ಕರೆಸಿ ಶುಭಲಗ್ನವನ್ನು ಹೇಳಬೇಕೆಂದು ಕೇಳಿದನು. ಅವನ ಗೌರವವನ್ನು ಸ್ವೀಕರಿಸಿದ ಅವರು ಕೆಲವು ದಿನಗಳಲ್ಲೇ ಶುಭಲಗ್ನವಿರುವುದೆಂದು ತಿಳಿಸಿ ಕೆಲವು ಕಾಲ ನೂತನ ಸತಿಪತಿಯರು ವಿಯೋಗವನ್ನು ಅನುಭವಿಸುವರು ಎಂದು ತಮಗೆ ಶಾಸ್ತ್ರದೃಷ್ಟಿಯಿಂದ ತಿಳಿದಿದೆ ಎಂದೂ ಹೇಳಿದರು.

೨೪೯. ಅನಂತರ ರಾಜನು ತನ್ನ ಮಗನ ವಿವಾಹಕ್ಕೆ ವೈಭವದ ಸಿದ್ಧತೆಗಳನ್ನು ಅವನ ನಗರವು ಮಾತ್ರವಲ್ಲ ಇಡೀ ಭೂಮಂಡಲವೇ ಆಶ್ಚರ್ಯಗೊಳ್ಳುವಂತೆ ಮಾಡಿದನು.

೨೫೦. ಮದುವೆಯ ದಿನ ಕಳಿಂಗಸೇನೆಯು ತನ್ನ ತಂದೆ ಕಳಿಸಿದ ದಿವ್ಯವಾದ ಆಭರಣಗಳಿಂದ ಮಗಳಿಗೆ ಅಲಂಕಾರವನ್ನು ಮಾಡಿದಳು. ಸೋಮಪ್ರಭೆಯು ಗಂಡನ ಸೂಚನೆಯಂತೆ ಬಂದಳು.

---

ಅಥ ಸ ಸಚಿವಮುಖ್ಯಂ ಪೂರ್ವವಿಜ್ಞಾತತತ್ತ್ವಂ
ನರಪತಿರಭಿನಂದ್ಯಾಹೂಯ ಮೌಹೂರ್ತಿಕಾಂಶ್ಚ ।
ಶುಭಫಲದಮಪೃಚ್ಛತ್ ಲಗ್ನಮೂಚುಸ್ತು ತೇ ತಂ
ಕತಿಪಯದಿನಮಧ್ಯೇ ಭಾವಿನಂ ಪ್ರಾಪ್ತಪೂಜಾಃ ॥ ೨೪೭
ಕಾಲಂ ಮನಾಗನುಭವಿಷ್ಯತಿ ಕಂಚಿದತ್ರ
ಪುತ್ರೋ ವಿಯೋಗಮನಯಾ ಸಹ ಭಾರ್ಯಯಾ ತೇ ।
ಜಾನೀಮಹೇ ವಯಮಿದಂ ನಿಜಶಾಸ್ತ್ರದೃಷ್ಟ್ಯಾ
ವತ್ಸೇಶ್ವರೇತಿ ಜಗದುರ್ಗಣಕಾಃ ಪುನಸ್ತೇ ॥ ೨೪೮
ತತಃ ಸ ಸೂನೋರ್ನಿಜವೈಭವೋಚಿತಂ
ವಿವಾಹಸಂಭಾರವಿಧಿಂ ವ್ಯಧಾತ್ ನೃಪಃ ।
ತಥಾ ಯಥಾಸ್ಯ ಸ್ವಪುರೀ ನ ಕೇವಲಂ
ಪೃಥಿವ್ಯಪಿ ಕ್ಷೋಭಮಗಾತ್ ತದುದ್ಯಮಾತ್ ॥ ೨೪೯
ಪ್ರಾಪ್ತೇ ವಿವಾಹದಿವಸೇಽಥ ಕಲಿಂಗಸೇನಾ
ಪಿತ್ರಾ ನಿಸೃಷ್ಟನಿಜದಿವ್ಯವಿಭೂಷಣಾಯಾಃ ।
ತಸ್ಯಾಃ ಪ್ರಸಾಧನವಿಧಿಂ ದುಹಿತುಶ್ಚಕಾರ
ಸೋಮಪ್ರಭಾ ಪತಿನಿದೇಶವಶಾಗತಾ ಚ ॥ ೨೫೦

೨೫೧. ದಿವ್ಯಲೋಕದ ಆಭರಣಗಳಿಂದ ಅಲಂಕೃತಳಾದ ಮದನಮಂಚುಕೆಯು ವಿಶೇಷವಾಗಿ ಶೋಭಿಸುತ್ತಿದ್ದಳು. ಕೃತ್ತಿಕೆಯ ಜೊತೆಯಲ್ಲಿ ಚಂದ್ರನೂ ಹಾಗೆಯೇ ಇರುತ್ತಾನಲ್ಲವೇ.

೨೫೨. ಮಹೇಶ್ವರನ ಆಜ್ಞೆಯಿಂದ ದಿವ್ಯಸ್ತ್ರೀಯರು ಗಾನಮಾಡುತ್ತಾ ಅವಳ ರೂಪಕ್ಕೆ ಸೋತಿದ್ದರಿಂದ ನಾಚಿದರೋ ಎಂಬಂತೆ ಅಡಗಿ ಮಂಗಳ ಕಾರ್ಯವನ್ನು ನೆರವೇರಿಸಿದರು.

೨೫೩. "ಭಕ್ತರ ಬಗೆಗೆ ದಯೆ ತೋರುವ ಓ ಬೆಟ್ಟದೊಡೆಯನ ಮಗಳೇ, ನಿನ್ನ ಯಶಸ್ಸು ಎಲ್ಲೆಡೆ ಹರಡಲಿ. ನೀನೇ ಸ್ವತಃ ಬಂದುದರಿಂದ ನಿನ್ನ ಮೂಲಕ ರತಿಯ ತಪಸ್ಸು ಸಾರ್ಥಕತೆಯನ್ನು ಪಡೆಯಿತು' ಎಂದು ಮುಂತಾದ ವಾಕ್ಯಗಳಿಂದ ಮಿಶ್ರಿತವಾಗಿ ವಾದ್ಯಗಳನ್ನು ದಿವ್ಯಲೋಕದ ಚಾರಣರು ಗೌರಿಯ ಉಪಸ್ಥಿತಿಯೂ ಅನುಮೇಯವಾಗಿ ತಿಳಿಯುವಂತೆ ನುಡಿಸಿದರು.

೨೫೪. ಅಮೇಲೆ ನರವಾಹನದತ್ತನು ವರನು ಮಾಡಬೇಕಾದ ಮಂಗಳ ಕ್ರಿಯೆಗಳನ್ನು ನೆರವೇರಿಸಿ ಮದನಮಂಚುಕೆ ಇರುವ ವಿವಾಹ ಗೃಹಕ್ಕೆ ಬಂದನು.

೨೫೫. ಅಲ್ಲಿ ವಧೂವರರು ವಿವಾಹದ ಮಂಗಳ ವಿಧಿಯನ್ನು ಪೂರೈಸಿ ರಾಜರ ತಲೆಯಮೇಲೆ ಇರುವ ನಿರ್ಮಲರತ್ನಗಳಿಂತಿದ್ದ ರತ್ನದೀಪಗಳುಳ್ಳ ಎತ್ತರಕ್ಕೆ ಶೋಭಿಸುತ್ತಿದ್ದ ಅಗ್ನಿಯುಳ್ಳ ಯಜ್ಞವೇದಿಯನ್ನು ಪ್ರದಕ್ಷಿಣೆ ಮಾಡಿದರು.

---

ಕೃತದಿವ್ಯಕೌತುಕಾ ಸಾ ಸುತರಾಮಥ ಮದನಮಂಚುಕಾ ವಿಬಭೌ ।
ನನ್ವೇವಮೇವ ಕಾಂತಾ ಚಂದ್ರತನುಃ ಕಾರ್ತಿಕಾನುಗತಾ ॥ ೨೫೧

ದಿವ್ಯಾಂಗನಾಶ್ಚ ತಸ್ಯಾ ಹರಾಜ್ಞಯಾ ಶ್ರೂಯಮಾಣಗೀತರವಾಃ ।
ತದ್ರೂಪಜಿತಾಚ್ಛನ್ನಾ ಹ್ರೀತಾ ಇವ ಮಂಗಲಂ ವಿದಧುಃ ॥ ೨೫೨

ಭಕ್ತಾನುಕಂಪಿನಿ ಜಯಾದ್ರಿಸುತೇ ತ್ವಯಾದ್ಯ
　　ರತ್ಯಾಸ್ತಪಃ ಸ್ವಯಮುಪೇತ್ಯ ಕೃತಂ ಯಥಾರ್ಥಮ್ ।
ಇತ್ಯಾದಿ ದಿವ್ಯವರಚಾರಣವಾದ್ಯಮಿಶ್ರ
　　ವಾಕ್ಯಾನುಮೇಯಮಪಿ ಸಂದಧತೇಽತ್ರ ಗೌರ್ಯಾಃ ॥ ೨೫೩

ಅಥ ನರವಾಹನದತ್ತಃ ಪ್ರವಿವೇಶ ಸ ಮದನಮಂಚುಕಾಧ್ಯುಷಿತಮ್ ।
ಕೃತವರಕೌತುಕಶೋಭೀ ವಿವಿಧಮಹಾತೋದ್ಯಭೃದ್ವಿವಾಹಗೃಹಮ್ ॥ ೨೫೪

ನಿರ್ವರ್ತ್ಯ ತತ್ರ ಬಹಲೋದ್ಯತವಿಪ್ರಮತ್ತ –
　　ವೀವಾಹಮಂಗಲವಿಧಿಂ ಚ ವಧೂವರೌ ತೌ ।
ವೇದೀಂ ಸಮಾರುರುಹತುರ್ಜ್ವಲಿತಾಗ್ನಿಮುಚ್ಚೈ
　　ರಾಜ್ಞಾಂ ಶಿರೋಭುವಮಿವಾಮಲರತ್ನದೀಪಾಮ್ ॥ ೨೫೫

೨೫೬. ಅವರಿಬ್ಬರೂ ಅಗ್ನಿಯನ್ನು ಪ್ರದಕ್ಷಿಣೆ ಮಾಡುತ್ತಿರುವುದು ಸೂರ್ಯಚಂದ್ರರು ಮೇರು ಪರ್ವತವನ್ನು ಸುತ್ತಿ ಬರುತ್ತಿರುವಂತೆ ಇತ್ತು.

೨೫೭. ವಿವಾಹದ ಮಂಗಳ ಧ್ವನಿಯನ್ನು ದೇವದುಂದುಭಿಗಳು ಅಂತರಿಕ್ಷದಲ್ಲಿ ಹರಡಿದವು. ಮದುಮಗಳು ಹೋಮದಲ್ಲಿ ಲಾಜವನ್ನೂ ಹಾಕಿದ್ದು ಹೂವಿನ ವೃಷ್ಟಿಯನ್ನು ದೇವತೆಗಳು ಮಾಡಿದಂತೆ ಇತ್ತು.

೨೫೮. ಅನಂತರ ಉದಾರವಾದ ಮನಸ್ಸುಳ್ಳ ಕಳಿಂಗಸೇನೆಯು ಬಂಗಾರ ಮತ್ತು ರತ್ನಗಳ ರಾಶಿಯಿಂದ ಅಳಿಯನನ್ನು ಪೂಜಿಸಿದಳು. ಇದರಿಂದ ಇವಳ ಮುಂದೆ ಅಲಕಾಧೀಶನಾದ ಕುಬೇರನೂ ಬಡವನಂತೆ ಕಾಣುತ್ತಿದ್ದಾನೆ ಎಂದು ಜನರು ಭಾವಿಸಿದರು. ಹೀಗಿರುವಾಗ ಬೇರೆ ಸಾಮಾನ್ಯ ರಾಜರ ಬಗ್ಗೆ ಹೇಳುವುದೇನು ?

೨೫೯. ಆ ವಧೂವರರಿಬ್ಬರೂ ಬಹುಕಾಲ ನಿರೀಕ್ಷಿಸಿದ್ದ ಅನುರೂಪಪಾಣಿಗ್ರಹಣ ವಿಧಿಯು ಸಂಪನ್ನವಾದ ಮೇಲೆ ಜನರ ಮನಸ್ಸನ್ನು ಶುದ್ಧವಾದ ಚಿತ್ರ ಪ್ರವೇಶಿಸುವಂತೆ ಮಹಿಳೆಯರು ತುಂಬಿರುವ ಅಂತಃಪುರವನ್ನು ಪ್ರವೇಶಿಸಿದರು.

---

ಯದಿ ಯುಗಪದಿಹೇಂದುಮೂರ್ತಿಭಾನೂ
ಕನಕಗಿರಿಂ ಭ್ರಮತೋಽಭಿತಃ ಕದಾಚಿತ್ ।
ಭವತಿ ತದುಪಮಾ ತಯೋಸ್ತದಾನೀಂ
ಜಗತಿ ವಧೂವರಯೋಃ ಪ್ರದಕ್ಷಿಣೇಽಗ್ನೇಃ ॥ ೨೫೬

ಯಥಾ ವಿವಾಹೋತ್ಸವತೂರ್ಯನಾದಾನ್
ಅಪ್ರೋಥಯನ್ ದುಂದುಭಯೋಽಂತರಿಕ್ಷೇ ।
ತಥಾ ವಧೂತ್ಸಾರಿತಹೋಮಲಾಜಾಃ
ಸುರೋಜ್ಝಿತಾಃ ಕೌಸುಮವೃಷ್ಟಯೋಽತ್ರ ॥ ೨೫೭

ತತಃ ಕನಕರಾಶಿಭಿರ್ಮಣಿಮಯೈಶ್ಚ ಜಾಮಾತರಂ
ಸಮರ್ಚಯದುದಾರಧೀಃ ಕಿಲ ಕಲಿಂಗಸೇನಾ ತಥಾ ।
ಯಥಾತ್ರ ಬುಬುಧೇ ಜನೈರಪಿ ಸುದುರ್ಗತೋಽಸ್ಯಾಃ ಪುರಃ
ಸ ಕಾಮಮಲಕಾಪತಿಃ ಕೃಪಣಭೂಭೃತೋಽನ್ಯೇತು ಕೇ ॥ ೨೫೮

ನಿಷ್ಪನ್ನತಾದೃಶಚಿರಾಭಿಮತಾನುರೂಪ–
ಪಾಣಿಗ್ರಹೋತ್ಸವವಿಧೀ ಚ ವಧೂವರೌ ತೌ ।
ಅಭ್ಯಂತರಂ ವಿವಿಶತುಃ ಪ್ರಮದೋಪರುದ್ಧಂ
ಲೋಕಸ್ಯ ಮಾನಸಮಿವಾಮಲಚಿತ್ರಭಕ್ತಿ ॥ ೨೫೯

೩೦. ವತ್ಸರಾಜನಿಗೆ ಸೋತು ಶಿರಬಾಗಿರುವ ರಾಜರು ಒಳ್ಳೆಯ ರತ್ನಗಳನ್ನು ಉಡುಗೊರೆಯಾಗಿ ಸಮರ್ಪಿಸಲು ವತ್ಸರಾಜನ ನಗರಿಗೆ ಬರುತ್ತಿದ್ದರು. ರತ್ನಗಳ ನಿಧಿಯಾದ ಸಮುದ್ರದಂತೆ ಆ ನಗರಿ ಕೌಶಾಂಬಿಯು ಶೋಭಿಸುತ್ತಿತ್ತು.

೩೧. ಈ ಮಹೋತ್ಸವದಲ್ಲಿ ರಾಜನು ತನ್ನನ್ನು ಆಶ್ರಯಿಸಿರುವ ಜನರಿಗೆ ಬಂಗಾರವನ್ನು ವಿತರಿಸಿದನು.

೩೨. ವಿವಿಧ ದಿಕ್ಕುಗಳಿಂದ ಬಂದ ಶ್ರೇಷ್ಠಚಾರಣ ನರ್ತಕಿಯರ ಸಮೂಹವು ಮಾಡಿದ ಸ್ತುತಿ, ನೃತ್ಯ, ಗೀತ ಮತ್ತು ವಾದ್ಯದಿಂದ ಇಡೀ ಜೀವಲೋಕವು ಅವುಗಳಲ್ಲಿ ತನ್ಮಯವಾಗಿ ಹೋಯಿತು.

೩೩. ಗಾಳಿಗೆ ಹೊಯ್ದಾಡುತ್ತಿದ್ದ ಧ್ವಜಗಳೆಂಬ ತೋಳುಗಳಿಂದಲೂ ಅಲಂಕಾರಕ್ಕಾಗಿ ಪುರಸ್ತ್ರೀಯರು ಧರಿಸಿದ್ದ ಆಭರಣಗಳಿಂದಲೂ ಆ ಕೌಶಾಂಬಿಯು ತಾನೇ ನರ್ತಿಸುತ್ತಿರುವಂತೆ ಕಾಣುತ್ತಿತ್ತು.

---

ಸದ್ವಾಹಿನೀ ಪರಿಗತೈರಪಿ ವಿಶ್ವಮಂಧ್ಯ
ಶೌರ್ಯಾಶ್ರಿತೈರಪಿ ಜಿತಾವನತೈರ್ನರೇಂದ್ರೈಃ ।
ಸಾ ವಾರಿರಾಶಿಭಿರಿವಾಶು ಪುರೀ ಪ್ರಪೂರೇ
ವತ್ಸೇಶ್ವರಸ್ಯ ಸದುಪಾಯನರತ್ನಹಸ್ತೈಃ ॥ ೩೦

ಅನುಜೀವಿಜನಾಯ ಸೋಽಪಿ ರಾಜಾ
ವ್ಯಕಿರದ್ಧೇಮ ತಥಾ ಮಹೋತ್ಸವೇಽಸ್ಮಿನ್ ।
ಯದಿ ಪರಮಭವನ್ನ ಜಾತರೂಪಾ
ಜನನೀ ಗರ್ಭಗತಾ ಯಥಾಸ್ಯ ರಾಷ್ಟ್ರೇ ॥ ೩೧

ವರಚಾರಣನರ್ತಕೀಸಮೂಹೈಃ
ವಿವಿಧದಿಗಂತಸಮಾಗತೈಸ್ತದಾತ್ರ ।
ಪರಿತಃ ಸ್ತವನೃತ್ತಗೀತವಾದ್ಯೈಃ
ಬುಬುಧೇ ತನ್ಮಯ ಏವ ಜೀವಲೋಕಃ ॥ ೩೨

ವಾತೋದ್ಧತಪತಾಕಾಬಾಹುಲತಾ ಚೋತ್ಸವೇಽತ್ರ ಕೌಶಾಂಬೀ ।
ಸಾಪಿ ನನರ್ತೇವ ಪುರೀ ಪೌರಸ್ತ್ರೀರಚಿತಮಂಡನಾಭರಣಾ ॥ ೩೩

೨೬೪. ಹೀಗೆ ಉತ್ಸವವು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿತ್ತು. ನರವಾಹನದತ್ತನ ಸ್ನೇಹಿತರೂ ಬಂಧುಗಳೂ ಸಂತೋಷಪಟ್ಟರು. ಅದರಿಂದ ಅವನ ಮನೋರಥವೂ ಈಡೇರಿತು.

೨೬೫. ಯುವರಾಜನಾದ ನರವಾಹನದತ್ತನು ಮದನಮಂಚುಕೆಯೊಡನೆ ಬಹುಕಾಲದಿಂದ ಬಯಸಿದ ಜೀವಲೋಕದ ಸುಖವನ್ನು ಅನುಭವಿಸಿದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ
ಕಥಾಸರಿತ್ಸಾಗರದ 'ಮದನಮಂಚುಕಾ'ಲಂಬಕದಲ್ಲಿ
ಎಂಟನೆಯ ತರಂಗವು ಮುಗಿಯಿತು.

**ಆರನೆಯದಾದ 'ಮದನಮಂಚುಕಾ' ಲಂಬಕವು ಮುಗಿಯಿತು.**

---

ಏವಂ ಚ ಸ ಪ್ರತಿದಿನಂ ಪರಿವರ್ಧಮಾನೋ
ನಿರ್ವರ್ತ್ಯತೇ ಸ್ಮ ಸುಚಿರೇಣ ಮಹೋತ್ಸವೋಽತ್ರ।
ಸರ್ವಃ ಸದೈವ ಚ ಸುಹೃತ್ಸ್ವಜನೋ ಜನಶ್ಚ
ಹೃಷ್ಟಸ್ತತಃ ಕಿಮಪಿ ಪೂರ್ಣಮನೋರಥೋಽಭೂತ್ ॥ ೨೬೪
ಸ ಚ ನರವಾಹನದತ್ತೋ ಯುವರಾಜೋ ಮದನಮಂಚುಕಾಸಹಿತಃ।
ಭಜತೇ ಸ್ಮ ಸುಚಿರಕಾಂಕ್ಷಿತಮುದಯ್ಯೈಷೀ ಜೀವಲೋಕಸುಖಮ್ ॥ ೨೬೫

ಇತಿ ಮಹಾಕವಿ ಶ್ರೀಸೋಮದೇವಭಟ್ಟ ವಿರಚಿತೇ
ಕಥಾಸರಿತ್ಸಾಗರೇ 'ಮದನಮಂಚುಕಾ'ಲಂಬಕೇಽಷ್ಟಮಸ್ತರಂಗಃ

**ಸಮಾಪ್ತಶ್ಚಾಯಂ 'ಮದನಮಂಚುಕಾ' ಲಂಬಕಃ ಷಷ್ಠಃ**

❖❖❖

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

(ಸಂಪುಟ ೪)

( ಲಂಬಕ: ಮದನಮಂಚುಕಾ)